# BIBLE STORIES

## IN CANARESE

## Old Testament

ದೇವವಾಕ್ಯದ ದ್ವಿಪಂಚಾಶತ್

# ಪೂರ್ವನಿರ್ಧಾರ




FIFTH EDITION

MANGALORE
…ED BY PFLEIDERER & RIEHM
…ISSION BOOK & TRACT DEPOSITORY
1868

[Ur. Gottl. Barth]

# BIBLE STORIES

## IN CANARESE

## Old Testament



ದೇವವಾಕ್ಯದ ದ್ವಿಪಂಚಾಶತ್

# ಪೂರ್ವನಿರ್ಧಾರ



MANGALORE
PRINTED BY STOLZ & REUTHER, BASEL MISSION PRESS
1868

## ಸೂ ಚ ನೆ.

ಒಂದೊಂದು ಕಥೆಗೆ ಅನುಸಾರವಾದ ಕೆಲವು ವಚನಗಳನ್ನು ರತ್ನಮಾಲೆಯಿಂದ ಆರಿಸಿ ಕೊಂಡು, ಆಯಾ ಕಥೆಯ ಕಡೆಯಲ್ಲಿ ಬರೆದಿದ್ದೇವೆ. ಹುಡುಗರು ಒಂದು ಕಥೆಯನ್ನು ಓದಿದ ಮೇಲೆ ಉಪಾಧ್ಯಾಯನು ಅದರ ಕೆಳಗೆ ಬರೆದಿರುವ ವಚನಗಳನ್ನು ಅವರಿಗೆ ವಿವರಿಸಿ ಬಾಯಿಪಾಠ ಮಾಡಿಸಿದರೆ ಒಳ್ಳೇದು.

I. II. III. IV ಎಂಬ ಅಂಕೆಗಳು ರತ್ನಮಾಲೆಯ ಮೊದಲನೇ, ಎರಡನೇ, ಮೂರನೇ, ನಾಲ್ಕನೇ ಕ್ರಮಗಳನ್ನೂ, ಬಾ. ಎಂಬದು ಬಾಲಬೋಧನೆಯನ್ನೂ, 1, 2, 3 ಮೊದಲಾದ ಅಂಕೆಗಳು ವಚನಗಳ ಅಂಕೆಗಳನ್ನೂ ಸೂಚಿಸುತ್ತವೆ.

# ಅ ನು ಕ್ರ ಮ ಣಿ ಕೆ.

---

# ಹಳೆ ಒಡಂಬಡಿಕೆಯ ಕಥೆಗಳು.

## ೧. ಸೃಷ್ಟಿಯು.

(ಉತ್ಪತ್ತಿ. ೧.)

(ಸೃಷ್ಟಿಯ ಮೇಲೆ ೧ನೇ ವರುಷ.)

ಆದಿಯಲ್ಲಿ ದೇವರು ಆಕಾಶವನ್ನೂ ಭೂಮಿಯನ್ನೂ ಸೃಷ್ಟಿಸಿದನು. ಭೂಮಿಯು ಹಾಳಾಗಿಯೂ ಬರಿದಾಗಿಯೂ ಇತ್ತು. ಅಗಾಧದ ಮೇಲೆ ಕತ್ತಲು ಇತ್ತು. ದೇವರ ಆತ್ಮವು ನೀರುಗಳ ಮೇಲೆ ಚಲಿಸುತ್ತಿತ್ತು. ಆಗ ದೇವರು ಬೆಳಕಾಗಲಿ ಅನ್ನಲು, ಬೆಳಕಾಯಿತು. ಮತ್ತು ದೇವರು ಆ ಬೆಳಕು ಒಳ್ಳೇದೆಂದು ನೋಡಿದನು; ಮತ್ತು ದೇವರು ಬೆಳಕನ್ನೂ ಕತ್ತಲೆಯನ್ನೂ ಬೇರೆ ಬೇರೆ ಮಾಡಿದನು. ಮತ್ತು ದೇವರು ಬೆಳಕಿಗೆ ಹಗಲೆಂದೂ ಕತ್ತಲೆಗೆ ರಾತ್ರಿ ಎಂದೂ ಹೆಸರಿಟ್ಟನು; ಹೀಗೆ ಸಾಯಂಕಾಲವೂ ಪ್ರಾತಃಕಾಲವೂ ಆಗಿ ಮೊದಲನೇ ದಿವಸವಾಯಿತು.

ಆಗ ದೇವರು ನೀರುಗಳ ನಡುವೆ ವಿಶಾಲ ಉಂಟಾಗಿ, ನೀರುಗಳಿಂದ ನೀರುಗಳನ್ನು ಬೇರೆ ಮಾಡಲಿ, ಅಂದನು. ಮತ್ತು ದೇವರು ವಿಶಾಲವನ್ನು ಉಂಟು ಮಾಡಿ, ವಿಶಾಲದ ಕೆಳಗಿರುವ ನೀರುಗಳನ್ನೂ ವಿಶಾಲದ ಮೇಲಿರುವ ನೀರುಗಳನ್ನೂ ಬೇರೆ ಬೇರೆ ಮಾಡಿದನು. ಮತ್ತು ದೇವರು ವಿಶಾಲಕ್ಕೆ ಆಕಾಶವೆಂದು ಹೆಸರಿಟ್ಟನು. ಹೀಗೆ ಎರಡನೇ ದಿವಸವಾಯಿತು.

ಆಗ ದೇವರು ಆಕಾಶದ ಕೆಳಗಿರುವ ನೀರುಗಳು ಒಂದು ಸ್ಥಳದಲ್ಲಿ ಕೂಡಲಿ, ಒಣನೆಲ ಕಾಣ ಬರಲಿ, ಅಂದನು. ಅದು ಹಾಗೆಯೇ ಆಯಿತು. ಮತ್ತು ದೇವರು ಒಣನೆಲಕ್ಕೆ ಭೂಮಿ ಎಂದೂ ನೀರುಗಳ ಕೂಟಕ್ಕೆ ಸಮುದ್ರವೆಂದೂ ಹೆಸರಿಟ್ಟನು. ತರುವಾಯ ದೇವರು ಭೂಮಿಯು ಹುಲ್ಲನ್ನೂ ಬೀಜ ಕೊಡುವ ಪಲ್ಯವನ್ನೂ ತಮ್ಮೊಳಗೆ ಬೀಜ ಉಂಟಾಗಿರುವಂಥ, ತಮ್ಮ ಜಾತಿಯ ಪ್ರಕಾರ ಫಲ ಫಲಿಸುವಂಥ ಫಲ ಮರಗಳನ್ನೂ ಭೂಮಿಯು ಮೊಳಿಸಲಿ, ಎಂದು ಹೇಳಿದನು. ಅದು ಹಾಗೆಯೇ ಆಯಿತು. ಹೀಗೆ ಮೂರನೇ ದಿವಸವಾಯಿತು.

ಆಗ ದೇವರು ಹಗಲನ್ನೂ ರಾತ್ರಿಯನ್ನೂ ಬೇರೆ ಬೇರೆ ಮಾಡುವದಕ್ಕೆ ಆಕಾಶ ವಿಶಾಲದಲ್ಲಿ ಬೆಳಕುಗಳು ಉಂಟಾಗಲಿ; ಅವು ಗುರುತುಗಳಿಗೋಸ್ಕರವೂ, ಸಮಯಗಳಿಗೋಸ್ಕರವೂ, ದಿವಸಗಳಿಗೋಸ್ಕರವೂ, ವರುಷಗಳಿಗೋಸ್ಕರವೂ, ಇರಲಿ. ಅವು ಭೂಮಿಯ ಮೇಲೆ ಬೆಳಕು ಕೊಡುವದಕ್ಕೆ ಆಕಾಶ ವಿಶಾಲದಲ್ಲಿ ಬೆಳಕುಗಳಾಗಿರಲಿ, ಅಂದನು. ಮತ್ತು ದೇವರು ಹಗಲನ್ನು ಆಳುವದಕ್ಕೆ ಒಂದು ದೊಡ್ಡ ಬೆಳಕನ್ನೂ, ರಾತ್ರಿಯನ್ನು ಆಳುವದಕ್ಕೆ ಒಂದು ಸಣ್ಣ ಬೆಳಕನ್ನೂ ನಕ್ಷತ್ರಗಳನ್ನೂ ಸಹ ಉಂಟು ಮಾಡಿದನು. ಹೀಗೆ ನಾಲ್ಕನೇ ದಿವಸವಾಯಿತು.

ಆಗ ದೇವರು ನೀರುಗಳು ಹರಿದಾಡುವ ಜೀವಜಂತುಗಳಿಂದ ತುಂಬಲಿ; ಪಕ್ಷಿಗಳು ಆಕಾಶವಿಶಾಲದಲ್ಲಿ ಹಾರಲಿ, ಅಂದನು. ಮತ್ತು ದೇವರು ಸಮುದ್ರದ ಮಹಾ ಮೀನುಗಳನ್ನೂ ನೀರಿನಲ್ಲಿ ತುಂಬಿರುವಂಥ, ತಮ್ಮ ತಮ್ಮ ಜಾತಿಗಳ ಪ್ರಕಾರ ಹರಿದಾಡುವಂಥ, ಎಲ್ಲಾ ಜೀವಜಂತುಗಳನ್ನೂ ಆ ಆ ಜಾತಿಗಳ ಪ್ರಕಾರವಾದ ಎಲ್ಲಾ ಪಕ್ಷಿಗಳನ್ನೂ ಸೃಷ್ಟಿಸಿ, ಅವುಗಳನ್ನು ಆಶೀರ್ವದಿಸಿ, ನೀವು ಅಭಿವೃದ್ಧಿಯಾಗಿ ಹೆಚ್ಚಿರಿ ಅಂದನು. ಹೀಗೆ ಐದನೇ ದಿವಸವಾಯಿತು.

ಆಗ ದೇವರು ಆ ಆ ಜಾತಿಯ ಪ್ರಕಾರವಾದ ಜೀವಜಂತುಗ

ಳನ್ನೂ ಆ ಆ ಜಾತಿಯ ಪ್ರಕಾರವಾದ ಪಶುಗಳನ್ನೂ ಕ್ರಿಮಿಗಳನ್ನೂ ಭೂಮಿಯ ಮೃಗಗಳನ್ನೂ ಭೂಮಿಯು ಹೊರಗೆ ಬರ ಮಾಡಲಿ,



ಅಂದನು. ಅದು ಹಾಗೆಯೇ ಆಯಿತು. ಮತ್ತು ದೇವರು ಹೇಳಿದ್ದೇನಂದರೆ:—ನಮ್ಮ ರೂಪವಾಗಿ, ನಮ್ಮ ಹೋಲ್ವಿಕೆಯ ಹಾಗೆ ಮನುಷ್ಯರನ್ನು ಉಂಟು ಮಾಡುವ; ಅವರು ಸಮುದ್ರದ ಮೀನುಗಳನ್ನೂ ಆಕಾಶದ ಪಕ್ಷಿಗಳನ್ನೂ ಪಶುಗಳನ್ನೂ ಎಲ್ಲಾ ಭೂಮಿಯನ್ನೂ ಭೂಮಿಯ ಮೇಲೆ ಹರಿದಾಡುವ ಎಲ್ಲಾ ಕ್ರಿಮಿಗಳನ್ನೂ ಆಳಲಿ. ಮತ್ತು ದೇವರು ಮನುಷ್ಯನನ್ನು ತನ್ನ ರೂಪವಾಗಿ ಸೃಷ್ಟಿಸಿದನು, ದೇವರ ರೂಪವಾಗಿ ಅವನನ್ನು ಸೃಷ್ಟಿಸಿದನು, ಗಂಡು ಹೆಣ್ಣಾಗಿ ಅವರನ್ನು ಸೃಷ್ಟಿಸಿದನು. ಮತ್ತು ದೇವರು ಅವರನ್ನು ಆಶೀರ್ವದಿಸಿ, ಅವರಿಗೆ: ಅಭಿವೃದ್ಧಿಯಾಗಿ, ಹೆಚ್ಚಿರಿ; ಭೂಮಿಯನ್ನು ತುಂಬಿ, ವಶ ಮಾಡಿ ಕೊಳ್ಳಿರಿ; ಇಗೋ, ಸಮಸ್ತ ಭೂಮಿಯ ಮೇಲಿರುವಂಥ ಎಲ್ಲಾ ವಿಧವಾದ ಪಲ್ಯಗಳನ್ನೂ ಫಲ ಉಂಟಾಗಿರುವಂಥ ಎಲ್ಲಾ ಮರಗಳನ್ನೂ ನಿಮಗೂ ಎಲ್ಲಾ ಮೃಗಗಳಿಗೂ ಆಹಾರಕ್ಕಾಗಿ ಕೊಟ್ಟದ್ದೇನೆಂದು ಹೇಳಿದನು. ಮತ್ತು ದೇವರು ತಾನು ಮಾಡಿದ್ದೆಲ್ಲಾ ನೋಡಲಾಗಿ, ಇಗೋ, ಅದು ಬಹಳ ಒಳ್ಳೇದಾಗಿತ್ತು. ಹೀಗೆ ಆರನೇ ದಿವಸವಾಯಿತು. ಹೀಗೆ ಆಕಾಶವೂ ಭೂಮಿಯೂ

ಅವುಗಳ ಸೈನ್ಯವೆಲ್ಲವೂ ಪೂರ್ಣವಾಯಿತು. ಮತ್ತು ದೇವರು ಏಳ ನೇ ದಿವಸದಲ್ಲಿ ತಾನು ಮಾಡುವ ಕೆಲಸವನ್ನು ಪೂರ್ಣ ಮಾಡಿ, ಏಳನೇ ದಿವಸದಲ್ಲಿ ವಿಶ್ರಮಿಸಿ ಕೊಂಡನು. ಮತ್ತು ದೇವರು ಏಳ ನೇ ದಿವಸವನ್ನು ಆಶೀರ್ವದಿಸಿ, ಪರಿಶುದ್ಧ ಮಾಡಿದನು.

I. 1. 2. 3. ಬಾ. 16. 21. 22.

---

## ೨. ಪಾಪವು.

(ಉತ್ಪತ್ತಿ. ೨. ೩.)

ದೇವರಾದ ಯೆಹೋವನು ಏಡೆನಿನಲ್ಲಿ ಒಂದು ತೋಟವನ್ನು ನೆಟ್ಟು, ತಾನು ರೂಪಿಸಿದ ಮನುಷ್ಯನನ್ನು ಅದರಲ್ಲಿ ಇಟ್ಟನು. ಮತ್ತು ದೇವರಾದ ಯೆಹೋವನು ನೋಟಕ್ಕೆ ರಮ್ಯವಾದ, ಊಟಕ್ಕೆ ಒಳ್ಳೆಯವುಗಳಾದ ಎಲ್ಲಾ ಮರಗಳನ್ನೂ, ತೋಟದ ಮಧ್ಯದಲ್ಲಿ ಜೀವದ ಮರವನ್ನೂ, ಮೇಲು ಕೇಡುಗಳ ತಿಳುವಿಕೆಯ ಮರವನ್ನೂ ಭೂಮಿಯೊಳಗಿಂದ ಮೊಳಿಸಿದನು. ಆಗ ದೇವರಾದ ಯೆಹೋವನು ಮನುಷ್ಯನನ್ನು ಕರ ಕೊಂಡು, ಏಡೆನ್ ತೋಟವನ್ನು ವ್ಯವಸಾಯ ಮಾಡುವದಕ್ಕೂ ಕಾಯುವದಕ್ಕೂ ಅದರಲ್ಲಿ ಇಟ್ಟನು. ಮತ್ತು ದೇವರಾದ ಯೆಹೋವನು ಮನುಷ್ಯನಿಗೆ ಆಜ್ಞಾಪಿಸಿ ಹೇಳಿದ್ದೇನಂದರೆ:—ನೀನು ತೋಟದ ಎಲ್ಲಾ ಮರಗಳಿಂದ ತಿನ್ನ ಬಹುದು; ಆದರೆ ಮೇಲು ಕೇಡುಗಳ ತಿಳುವಿಕೆಯ ಮರದಿಂದ ತಿನ್ನ ಬಾರದು; ಯಾಕಂದರೆ ನೀನು ಅದರಿಂದ ತಿನ್ನುವ ದಿವಸದಲ್ಲಿ ಸಾಯಲೇ ಸಾಯುವಿ. ಆದರೆ ಸರ್ಪವು ಅಡವಿಯ ಎಲ್ಲಾ ಮೃಗಗಳಿಗಿಂತ ಯುಕ್ತಿಯುಳ್ಳದ್ದಾಗಿದ್ದು,[೧] ಸ್ತ್ರೀಗೆ ಹೇಳಿದ್ದೇನಂದರೆ:—ನೀವು ತೋಟದ ಎಲ್ಲಾ ಮರಗಳ ಫಲ ತಿನ್ನ ಬಾರದೆಂದು, ದೇವರು ಹೇಳಿದ್ದುಂಟೋ? ಸ್ತ್ರೀಯು ಸರ್ಪಕ್ಕೆ: ತೋಟದ ಮರಗಳ ಫಲ ನಾವು ತಿನ್ನ ಬಹುದು, ಆದರೆ ತೋಟದ ಮಧ್ಯದಲ್ಲಿರುವ ಮರದ ವಿಷಯವಾಗಿ, ನೀವು

ಸಾಯದ ಹಾಗೆ ಅದರ ಫಲ ತಿನ್ನ ಬಾರದು, ಮುಟ್ಟಲೂ ಬಾರದೆಂದು ದೇವರು ಹೇಳಿದ್ದಾನೆ, ಅಂದಳು. ಸರ್ಪವು ಸ್ತ್ರೀಗೆ: ನೀವು ಸಾಯಲೇ ಸಾಯಲಿಕ್ಕಿಲ್ಲ; ಆದರೆ ನೀವು ಅದನ್ನು ತಿಂದ ದಿವಸದಲ್ಲಿ ನಿಮ್ಮ ಕಣ್ಣು ತೆರೆಯಲ್ಪಡುವದೆಂದೂ, ನೀವು ಮೇಲೂ ಕೇಡೂ ಅರಿತವರಾಗಿ ದೇವರುಗಳ ಹಾಗಿರುವಿರೆಂದೂ ದೇವರಿಗೆ ತಿಳಿದದೆ, ಅಂದಿತು. ಆಗ ಸ್ತ್ರೀಯು ಆ ಮರವು ತಿನ್ನುವದಕ್ಕೆ ಒಳ್ಳೇದೂ, ಕಣ್ಣಿಗೆ ಇಷ್ಟವೂ, ಬುದ್ಧಿ ಹೊಂದಿಸುವದಕ್ಕೆ ರಮ್ಯವೂ ಎಂದು ನೋಡಿ, ಅದರ ಫಲ ತೆಗದು, ತಿಂದಳು. ಮತ್ತು ತನ್ನ ಸಂಗಡ ಇ



ರುವ ತನ್ನ ಗಂಡನಿಗೂ ಕೊಟ್ಟಳು; ಅವನೂ ತಿಂದನು. ಆಗ ಅವರಿಬ್ಬರ ಕಣ್ಣು ತೆರೆಯಲ್ಪಟ್ಟು, ತಾವು ಬತ್ತಲೆಯಾಗಿದ್ದೇವೆಂದು ತಿಳು ಕೊಂಡರು; ಮತ್ತು ಅವರು ಅಂಜೂರದ ಎಲೆಗಳನ್ನು ಹೊಲಿದು ಕೊಂಡು, ತಮಗೆ ಉಡಿಗೆಗಳನ್ನು ಮಾಡಿ ಕೊಂಡರು.

ಆಗ ಅವರು ಹಗಲಿನ ತಂಫಾಳಿಯಲ್ಲಿ ತೋಟದೊಳಗೆ ತಿರುಗಾಡುವ ದೇವರ ಶಬ್ದವನ್ನು ಕೇಳಲು, ಆದಮನೂ ಅವನ ಹೆಂಡತಿಯೂ ದೇವರಾದ ಯೆಹೋವನಿಗೆ ತೋಟದ ಮರಗಳ ನಡುವೆ ಅಡಗಿ ಕೊಂಡರು. ಆಗ ದೇವರಾದ ಯೆಹೋವನು ಆದಮನನ್ನು ಕರೆದು, ಅವನಿಗೆ: ನೀನು ಎಲ್ಲಿ? ಅಂದನು. ಅದಕ್ಕವನು, ನಾನು ನಿ

ನ್ನ ಶಬ್ದವನ್ನು ತೋಟದಲ್ಲಿ ಕೇಳಿ, ನಾನು ಬೆತ್ತಲೆಯಾಗಿರುವದರಿಂದ ಭಯ ಪಟ್ಟು, ಅಡಗಿ ಕೊಂಡೆನು ಅಂದನು. ಆಗ ದೇವರು ನೀನು ಬೆತ್ತಲೆಯಾಗಿದ್ಧೀ ಎಂದು ನಿನಗೆ ತಿಳಿಸಿದವನ್ಯಾರು? ತಿನ್ನ ಬಾರದೆಂದು ನಾನು ನಿನಗೆ ಆಜ್ಞಾಪಿಸಿದ ಮರದ ಫಲವನ್ನು ತಿಂದಿಯೋ? ಅನ್ನಲು, ಆದಮನು: ನೀನು ನನ್ನ ಸಂಗಡಲಿರ ಕೊಟ್ಟ ಸ್ತ್ರೀ ಆ ಮರದ ಫಲ ನನಗೆ ಕೊಟ್ಟಳು, ನಾನು ತಿಂದೆನು, ಎಂದು ಹೇಳಿದನು. ಆಗ ದೇವರಾದ ಯೆಹೋವನು ಸ್ತ್ರೀಗೆ: ನೀನು ಇದನ್ನು ಮಾಡಿದ್ದೇನು? ಅಂದಾಗ, ಸ್ತ್ರೀಯು: ಸರ್ಪವು ನನ್ನನ್ನು ವಂಚಿಸಿದ್ದರಿಂದ ತಿಂದೆನು ಅಂದಳು. ಆಗ ದೇವರಾದ ಯೆಹೋವನು ಸರ್ಪಕ್ಕೆ ಹೇಳಿದ್ದೇನಂದರೆ:—ನೀನು ಇದನ್ನು ಮಾಡಿದ ಕಾರಣ, ಎಲ್ಲಾ ಪಶುಗಳಲ್ಲಿಯೂ ಎಲ್ಲಾ ಅಡವಿಯ ಮೃಗಗಳಲ್ಲಿಯೂ ನೀನು ಶಪಿಸಲ್ಪಟ್ಟದ್ದು; ನೀನು ಜೀವದಿಂದಿರುವ ದಿವಸಗಳೆಲ್ಲಾ ಹೊಟ್ಟೆಯಿಂದ ನಡೆದು, ಮಣ್ಣೇ ತಿನ್ನುವಿ. ಮತ್ತು ನಿನಗೂ ಸ್ತ್ರೀಗೂ ನಿನ್ನ ಬೀಜಕ್ಕೂ ಸ್ತ್ರೀಯ ಬೀಜಕ್ಕೂ ಹಗೆ ಇಡುವೆನು. ಅವನು (ಅಂದರೆ ಸ್ತ್ರೀಯ ಬೀಜ) ನಿನ್ನ ತಲೆಯನ್ನು ಬಡಿಯುವನು. ಆದರೆ ನೀನು ಅವನ ಹಿಮ್ಮಡಿಯನ್ನು ಬಡಿಯುವಿ.[2] ಸ್ತ್ರೀಗೆ ಹೇಳಿದ್ದೇನಂದರೆ:—ನಿನ್ನ ಬೇನೆಯನ್ನೂ ನಿನ್ನ ಬಸುರಾಗುವಿಕೆಯನ್ನೂ ಹೆಚ್ಚಿಸೇ ಹೆಚ್ಚಿಸುವೆನು; ಕಷ್ಟದಿಂದ ಮಕ್ಕಳನ್ನು ಹೆರುವಿ. ಮತ್ತು ನಿನ್ನ ಗಂಡನ ಮೇಲೆ ನಿನ್ನ ಇಚ್ಛೆ ಇರುವದು; ಅವನು ನಿನ್ನನ್ನು ಆಳುವನು. ಮತ್ತು ಆದಮನಿಗೆ ಹೇಳಿದ್ದೇನಂದರೆ:—ನೀನು ನಿನ್ನ ಹೆಂಡತಿಯ ಮಾತು ಕೇಳಿ, ತಿನ್ನ ಬಾರದೆಂದು ನಾನು ನಿನಗೆ ಆಜ್ಞಾಪಿಸಿದ ಮರದ ಫಲ ತಿಂದ ಕಾರಣ, ನಿನಗೋಸ್ಕರ ಭೂಮಿ ಶಪಿಸಲ್ಪಟ್ಟದ್ದಾಗಲಿ; ನಿನ್ನ ಜೀವದ ದಿವಸಗಳೆಲ್ಲಾ ಸಂಕಟ ಪಟ್ಟು, ಅದರ ಫಲ ತಿನ್ನುವಿ. ಮತ್ತು ಮುಳ್ಳುಗಳನ್ನೂ ದತ್ತೂರಿಗಳನ್ನೂ ನಿನಗೆ ಮೊಳಿಸುವದು; ಹೊಲದ ಪಲ್ಯಗಳನ್ನು ತಿನ್ನುವಿ. ಮಣ್ಣಿಗೆ ತಿರುಗುವ ತನಕ ನಿನ್ನ ಮುಖದ ಬೆವರಿನಿಂದ ರೊಟ್ಟಿ ತಿನ್ನುವಿ; ಯಾಕಂದರೆ ನೀನು ಮಣ್ಣು;

ಮಣ್ಣಿಗೆ ತಿರುಗುವಿ. ಮತ್ತು ಆದಮನು ತನ್ನ ಹೆಂಡತಿಗೆ, ಅವಳು ಜೀವ ಉಳ್ಳವರೆಲ್ಲರಿಗೆ ತಾಯಿಯಾದದರಿಂದ, ಹವ್ವಳೆಂದು ಹೆಸರಿಟ್ಟನು. ಆಗ ದೇವರಾದ ಯೆಹೋವನು ಮನುಷ್ಯನನ್ನು, ಯಾವದರಿಂದ ತೆಗೆದನೋ, ಆ ಭೂಮಿಯನ್ನು ವ್ಯವಸಾಯ ಮಾಡುವದಕ್ಕೆ ಅವನನ್ನು ಏಡೆನ್ ತೋಟದೊಳಗಿಂದ ಕಳುಹಿಸಿದನು. ಮತ್ತು ಜೀವದ ಮರದ ದಾರಿಯನ್ನು ಕಾಯುವದಕ್ಕೋಸ್ಕರ ಏಡೆನ್ ತೋಟದ ಪೂರ್ವದಲ್ಲಿ ಕೆರೂಬಿಯರನ್ನೂ ಸುತ್ತ್ಯಾಡಿ ಜ್ವಲಿಸುವ ಕತ್ತಿಯನ್ನೂ ಇರಿಸಿದನು.

೧) ಸೈತಾನನು ಸರ್ಪದ ಮುಖಾಂತರವಾಗಿ ಮನುಷ್ಯರನ್ನು ಶೋಧಿಸಿದ ಕಾರಣ (ಪ್ರಕಟಣೆ. ೧೨, ೯.) ಅವನ ವಿಷಯವಾಗಿ—ಹಳೇ ಹಾವು ಆಗಿರುವ ದೊಡ್ಡ ಗಡಸರ್ಪಕ್ಕೆ ಸಮಸ್ತ ಜಗತ್ತನ್ನು ಮೋಸ ಗೊಳ್ಳಿಸುವ ಪಿಶಾಚನೂ ಸೈತಾನನೂ ಎಂಬ ಹೆಸರುಂಟು.

೨) ಸ್ತ್ರೀಯ ಬೀಜವಾಗಿ ಹುಟ್ಟಿದ ದೇವರ ಮಗನಾದ ಯೇಸು ಪಿಶಾಚನ ಕ್ರಿಯೆಗಳನ್ನು ಲಯ ಮಾಡುವದಕ್ಕೋಸ್ಕರವೇ ಪ್ರತ್ಯಕ್ಷವಾಗಿದ್ದಾನೆ. (ಯೋಹಾ. ೩, ೮.)

I. 4. 42. IV. 5. II. 6. ಬಾ. 82.

---

## ೩. ಕಾಯಿನನೂ ಹೇಬೆಲನೂ.

(ಉತ್ಪತ್ತಿ. ೪.)

ಹವ್ವಳು ಕಾಯಿನನನ್ನು ಹೆತ್ತು, ನಾನು ಯೆಹೋವನಿಂದ ಗಂಡಸನ್ನು ಪಡ ಗೊಂಡಿದ್ದೇನೆ, ಅಂದಳು. ಇನ್ನು ಅವಳು ಅವನ ಸಹೋದರನಾದ ಹೇಬೆಲನನ್ನು ಹೆತ್ತಳು. ಹೇಬೆಲನು ಕುರಿ ಕಾಯುವವನಾದನು; ಕಾಯಿನನು ವ್ಯವಸಾಯ ಮಾಡುವವನಾದನು. ಒಂದು ದಿನ ಕಾಯಿನನು ಭೂಮಿಯ ಫಲಗಳಲ್ಲಿ ಕೆಲವನ್ನು ಯೆಹೋವನಿಗೆ ಕಾಣಿಕೆಯಾಗಿ ತಂದನು. ಮತ್ತು ಹೇಬೆಲನು ಸಹಾ ತನ್ನ ಮಂದೆಯ ಚೊಚ್ಚಲಾದವುಗಳಲ್ಲಿಯೂ ಕೊಬ್ಬಿದವುಗಳ

ಲ್ಲಿಯೂ ಕೆಲವನ್ನು ತಂದನು. ಆಗ ಯೆಹೋವನು ಹೇಬೆಲನನ್ನೂ ಅವನ ಕಾಣಿಕೆಯನ್ನೂ ಲಕ್ಷ್ಯ ಮಾಡಿದನು.(೧) ಆದರೆ ಕಾಯಿನನನ್ನೂ ಅವನ ಕಾಣಿಕೆಯನ್ನೂ ಲಕ್ಷ್ಯ ಮಾಡಲಿಲ್ಲ. ಆದ ಕಾರಣ ಕಾಯಿನನು ಬಹು ಕೋಪ ಗೊಂಡನು; ಅವನ ಮುಖವು ಕಳೆಗುಂದಿತು. ಆಗ ಯೆಹೋವನು ಕಾಯಿನನಿಗೆ: ಯಾಕೆ ಕೋಪ ಗೊಂಡಿ? ಯಾಕೆ ನಿನ್ನ ಮುಖ ಕಳೆಗುಂದಿತು? ನೀನು ಒಳ್ಳೇದನ್ನು ಮಾಡಿದರೆ, ಅಂಗೀಕಾರವಲ್ಲವೋ? ನೀನು ಒಳ್ಳೇದನ್ನು ಮಾಡದೆ ಹೋದರೆ, ಬಾಗಲಲ್ಲಿ ಪಾಪವು ಮಲಗಿ ಅದೆ; ಮತ್ತು ನಿನ್ನ ಮೇಲೆ ಅದರ ಇಚ್ಛೆ ಇರುವದು; ಆದರೆ ನೀನು ಅದನ್ನು ಆಳು ಎಂದು ಹೇಳಿದನು. ತರುವಾಯ ಕಾಯಿನನು ತನ್ನ ಸಹೋದರನಾದ ಹೇಬೆಲನ ಸಂಗಡ ಮಾತಾಡಿದನು. ಆದರೆ ಅವರು ಹೊಲದಲ್ಲಿರಲಾಗಿ ಕಾಯಿನನು ತನ್ನ ಸಹೋದರನಾದ ಹೇಬೆಲನಿಗೆ ವಿರೋಧವಾಗಿ ಎದ್ದು ಅವನನ್ನು ಕೊಂದು ಹಾಕಿದನು. ಮತ್ತು ಯೆಹೋವನು



ಕಾಯಿನನಿಗೆ ನಿನ್ನ ಸಹೋದರನಾದ ಹೇಬೆಲನು ಎಲ್ಲಿ? ಅಂದನು. ಅದಕ್ಕವನು ನಾನರಿಯೆ; ನಾನು ನನ್ನ ಸಹೋದರನನ್ನು ಕಾಯುವವನೋ? ಅಂದನು. ಆಗ ಯೆಹೋವನು ಹೇಳಿದ್ದೇನಂದರೆ:— ನೀನು ಮಾಡಿದ್ದೇನು? ನಿನ್ನ ಸಹೋದರನ ರಕ್ತದ ಶಬ್ದವು ಭೂಮಿಯೊಳಗಿಂದ ನನಗೆ ಕೂಗುತ್ತದೆ. ಹಾಗಾದರೆ ಈಗ ನಿನ್ನ ಸಹೋ

ದರನ ರಕ್ತವನ್ನು ನಿನ್ನ ಕೈಯಿಂದ ಹೊಂದುವದಕ್ಕೆ ತನ್ನ ಬಾಯಿಯನ್ನು ತೆರದ ಭೂಮಿಯಿಂದ ನೀನು ಶಪಿಸಲ್ಪಟ್ಟವನು. ನೀನು ಭೂಮಿಯನ್ನು ವ್ಯವಸಾಯ ಮಾಡುವಾಗ ಅದು ತನ್ನ ಸಾರವನ್ನು ಇನ್ನು ಮೇಲೆ ನಿನಗೆ ಕೊಡದು. ನೀನು ಭೂಮಿಯಲ್ಲಿ ಅಲೆಯುವವನಾಗಿಯೂ ತಿರುಗಾಡುವವನಾಗಿಯೂ ಇರುವಿ, ಅಂದನು. ಆಗ ಕಾಯಿನನು ಯೆಹೋವನಿಗೆ: ನನ್ನ ಅಕ್ರಮವು ತಾಳಕೂಡದಷ್ಟು ದೊಡ್ಡದಾಗಿದೆ. ಇಗೋ, ಈ ಹೊತ್ತು ನನ್ನನ್ನು ಭೂಮಿಯ ಮೇಲಿನಿಂದ ಹೊರಡಿಸಿದ್ದೀ, ನಿನ್ನ ಮುಖಕ್ಕೆ ನಾನು ಮರೆಯಾಗ ಬೇಕು; ನನ್ನನ್ನು ಕಂಡವರ್ಯಾರಾದರೂ ನನ್ನನ್ನು ಕೊಲ್ಲುವರು, ಅಂದನು. ಆದರೆ ಯೆಹೋವನು ಅವನಿಗೆ: ಹಾಗಲ್ಲ, ಕಾಯಿನನನ್ನು ಕೊಲ್ಲುವವನ್ಯಾವನೋ, ಅವನು ಏಳಷ್ಟು ಮುಯ್ಯಿ ಹೊಂದುವನು, ಎಂದು ಹೇಳಿದನು. ಮತ್ತು ಯೆಹೋವನು ಕಾಯಿನನ ಮೇಲೆ, ಅವನನ್ನು ಕಂಡವನ್ಯಾವನಾದರೂ ಕೊಲ್ಲದ ಹಾಗೆ, ಗುರುತಿಟ್ಟನು. ಹೀಗೆ ಕಾಯಿನನು ಯೆಹೋವನ ಸನ್ನಿಧಿಯಿಂದ ಹೊರಟು, ನೋದು ಎಂಬ ದೇಶದಲ್ಲಿ ಏಡೆನಿನ ಪೂರ್ವದಲ್ಲಿ ವಾಸಿಸಿದನು. ಅಲ್ಲಿ ಕಾಯಿನನ ಹೆಂಡತಿ ಹನೋಕನನ್ನು ಹೆತ್ತಳು; ಆಗಲವನು ಒಂದು ಪಟ್ಣವನ್ನು ಕಟ್ಟಿ, ಅದಕ್ಕೆ ತನ್ನ ಮಗನಾದ ಹನೋಕನ ಹೆಸರಿನ ಹಾಗೆ ಹನೋಕೆಂಬ ಹೆಸರಿಟ್ಟನು. ಆದಮನಿಗೆ ೧೩೦ ವರುಷ ಇರುವಾಗ ಅವನು ತನ್ನ ಹೋಲ್ವಿಕೆಯಲ್ಲಿಯೂ ತನ್ನ ಪ್ರತಿರೂಪದ ಪ್ರಕಾರವೂ ಒಬ್ಬ ಮಗನನ್ನು ಪಡೆದು, ಅವನಿಗೆ ಸೇಥನೆಂಬ ಹೆಸರಿಟ್ಟನು. ಮತ್ತು ಸೇಥನಿಗೂ ಮಗ ಹುಟ್ಟಿದನು; ಅವನಿಗೆ ಎನೋಷ್ ಎಂಬ ಹೆಸರಿಟ್ಟನು; ಆಗ ಮನುಷ್ಯರು ಯೆಹೋವನ ಹೆಸರನ್ನು ಕರೆಯುವದಕ್ಕೆ ಆರಂಭಿಸಿದರು.

೧) ಹೇಬೆಲನ ಕಾಣಿಕೆಯು ವಿಶ್ವಾಸಕ್ಕೋಸ್ಕರ ದೇವರಿಗೆ ಒಳ್ಳೇದಾಗಿತ್ತು. (ಇಬ್ರೀ. ೧೧, ೪.)

II. 10. I. 45. ಬಾ. 108.

# ೪. ಜಲಪ್ರಳಯವು.

(ಉತ್ಪತ್ತಿ. ೬—೯.)

(ಸೃಷ್ಟಿಯ ಮೇಲೆ ೧೦೫೬ನೇ ವರುಷ.)

೧) ಭೂಮಿಯ ಮೇಲೆ ಜನ ಹೆಚ್ಚುವದಕ್ಕೆ ಆರಂಭಿಸಿದಾಗ, ಅವರಿಗೆ ಕುಮಾರ್ತೆಗಳು ಹುಟ್ಟಿದರು. ಆಗ ದೇವರ ಕುಮಾರರು ಮನುಷ್ಯರ ಕುಮಾರ್ತೆಗಳನ್ನು ನೋಡಿ, ಅವರು ಸೌಂದರ್ಯವುಳ್ಳವರೆಂದು, ತಾವು ಆದು ಕೊಂಡವರನ್ನು ತಮಗೆ ಹೆಂಡರಾಗಿ ತಕ್ಕೊಂಡರು. ಆಗ ಯೆಹೋವನು: ನನ್ನ ಆತ್ಮವು ಮನುಷ್ಯನ ಸಂಗಡ ಯಾವಾಗಲೂ ವಿವಾದ ಮಾಡದು; ಅವನು ಮಾಂಸವಷ್ಟೇ. ಅವನ ದಿವಸಗಳು ನೂರ ಇಪ್ಪತ್ತು ವರುಷವಾಗಿರಲಿ, ಅಂದನು. ಮತ್ತು ದೇವರು ಮನುಷ್ಯನ ದುಷ್ಟತ್ವವು ಭೂಮಿಯಲ್ಲಿ ಹೆಚ್ಚಿತೆಂದೂ, ಅವನ ಹೃದಯದ ಆಲೋಚನೆಗಳ ಕಲ್ಪನೆ ಎಲ್ಲಾ ದಿನಾಲೂ ಕೆಟ್ಟದ್ದೇ ಎಂದೂ ನೋಡಿ, ತಾನು ಮನುಷ್ಯನನ್ನು ಉಂಟು ಮಾಡಿದ್ದಕ್ಕೋಸ್ಕರ ಪಶ್ಚಾತ್ತಾಪ ಪಟ್ಟನು; ಆದರೆ ನೋಹನಿಗೆ ಯೆಹೋವನ ದೃಷ್ಟಿಯಲ್ಲಿ ದಯ ದೊರಕಿತು. ನೋಹನು ತನ್ನ ಸಂತಾನದಲ್ಲಿ ನೀತಿವಂತನೂ ಸಂಪೂರ್ಣನೂ ಆಗಿದ್ದನು; ಅವನು ದೇವರ ಸಂಗಡ ನಡೆದು ಕೊಳ್ಳುತ್ತಿದ್ದನು. ಮತ್ತು ನೋಹನು—ಶೇಮ, ಹಾಮ, ಯಾಫೆತ ಎಂಬ ಮೂರು ಮಕ್ಕಳನ್ನು ಪಡೆದನು. ಆಗ ದೇವರು ನೋಹನಿಗೆ ಹೇಳಿದ್ದೇನಂದರೆ:—ಮಾಂಸವೆಲ್ಲಾದರ ಅಂತ್ಯವು ನನ್ನ ಮುಂದೆ ಬಂತು. ಯಾಕಂದರೆ ಭೂಮಿಯು ಅವರ ಮುಖಾಂತರ ಬಲಾತ್ಕಾರಗಳಿಂದ ತುಂಬಿ ಅದೆ. ಹೀಗಿರುವದರಿಂದ, ಇಗೋ, ಭೂಮಿಯ ಸಂಗಡ ಅವರನ್ನು ಕೆಡಿಸಿ ಬಿಡುತ್ತೇನೆ. ನಿನಗೆ ಒಂದು ನಾವೆಯನ್ನು ಮಾಡಿಕೋ: ಅದರ ಉದ್ದವು ೩೦೦ ಮೊಳ; ಅದರ ಅಗಲವು ೫೦ ಮೊಳ; ಅದರ ಎತ್ತರವು ೩೦ ಮೊಳ ಇರಲಿ. ಅದಕ್ಕೆ ೩ ಮಾಳಿಗೆಗಳನ್ನು ಮಾಡ ಬೇಕು. ಮತ್ತು

ಇಗೋ, ಭೂಮಿಯ ಮೇಲೆ ಜಲಪ್ರಳಯವನ್ನು ಬರ ಮಾಡುತ್ತೇನೆ; ಆದರೆ ನಿನ್ನ ಸಂಗಡ ನನ್ನ ಒಡಂಬಡಿಕೆಯನ್ನು ಸ್ಥಾಪಿಸುತ್ತೇನೆ; ನೀನೂ ನಿನ್ನ ಸಂಗಡ ನಿನ್ನ ಮಕ್ಕಳೂ ನಿನ್ನ ಹೆಂಡತಿಯೂ ನಿನ್ನ ಮಕ್ಕಳ ಹೆಂಡರೂ ನಾವೆಯೊಳಗೆ ಶೇರ ಬೇಕು. ಮತ್ತು ಎಲ್ಲಾ ಮಾಂಸವಾಗಿರುವಂಥ ಜೀವಿಗಳಲ್ಲಿ ಜೋಡು ಜೋಡನ್ನು ನಿನ್ನ ಸಂಗಡ ಬದುಕುವ ಹಾಗೆ ನಾವೆಯೊಳಗೆ ತರ ಬೇಕು; ಇದಲ್ಲದೆ ತಿನ್ನ ತಕ್ಕ ಆಹಾರವನ್ನು ನೀನು ತಕ್ಕೊಂಡು ನಿನ್ನ ಬಳಿಗೆ ಕೂಡಿಸಿಕೊಳ್ಳ ಬೇಕು, ಅಂದನು. ನೋಹನು ದೇವರ ಅಪ್ಪಣೆಯ ಪ್ರಕಾರ ಮಾಡಿದನು.



ನೋಹನು ೬೦೦ ವರುಷದವನಾಗುವಾಗ ಆ ಜಲಪ್ರಳಯ ಭೂಮಿಯ ಮೇಲೆ ಉಂಟಾಯಿತು. ಆಗ ನೋಹನೂ ಅವನ ಮಕ್ಕಳೂ ಅವನ ಹೆಂಡತಿಯೂ ಅವನ ಮಕ್ಕಳ ಹೆಂಡರು ಸಹಿತವಾಗಿ, ಜಲಪ್ರಳಯಕ್ಕೋಸ್ಕರ ನಾವೆಯಲ್ಲಿ ಶೇರಿದರು. ಇದಲ್ಲದೆ ಎಲ್ಲಾ ಜೀವಜಂತುಗಳಿಂದ ಗಂಡು ಹೆಣ್ಣಾಗಿರುವ ಎರಡೆರಡು, ದೇವರು ನೋಹನಿಗೆ ಆಜ್ಞಾಪಿಸಿದ ಪ್ರಕಾರ, ನೋಹನ ಬಳೀಲಿ ನಾವೆಯಲ್ಲಿ ಶೇರಿದವು. ಆಗ ಯೆಹೋವನು ಅವನನ್ನು ಒಳಗೆ ಮುಚ್ಚಿ ಇಟ್ಟನು. ಮತ್ತು ನೋಹನು ಬದುಕುವ ೬೦೦ನೇ ವರುಷದಲ್ಲಿ ೨ನೇ ತಿಂಗಳಿನ ೧೬ನೇ ದಿವಸದಲ್ಲಿ ಮಹಾ ಅಗಾಧದ ಬುಗ್ಗೆಗಳೆಲ್ಲಾ ಒ

ಡೆದು ಆಕಾಶದ ಕಿಟಕಿಗಳು ತೆರೆದು ೪೦ ದಿವಸ ೪೦ ರಾತ್ರಿ ಭೂಮಿಯ ಮೇಲೆ ಮಳೆ ಬಿತ್ತು. ಹೀಗೆ ಜಲ ಹೆಚ್ಚಲಾಗಿ ನಾವೆಯನ್ನು ಎತ್ತಿತು. ಮತ್ತು ಭೂಮಿಯ ಮೇಲೆ ನೀರುಗಳು ಬಹಳವಾಗಿ ಪ್ರಬಲವಾದದರಿಂದ ಉನ್ನತವಾದ ಎಲ್ಲಾ ಬೆಟ್ಟಗಳು ಮುಚ್ಚಿ ಹೋಗಿ, ಅವುಗಳ ಮೇಲೆ ೧೫ ಮೊಳ ಪರಿಯಂತರ ಉಬ್ಬಿತು; ಹೀಗೆ ಒಣಗಿದ ನೆಲದಲ್ಲಿರುವಂಥ, ತಮ್ಮ ಮೂಗುಗಳಲ್ಲಿ ಜೀವದ ಶ್ವಾಸ ಉಂಟಾಗಿರುವಂಥ ಎಲ್ಲವುಗಳೂ ಸತ್ತವು. ನೋಹನೂ ಅವನ ಸಂಗಡ ನಾವೆಯಲ್ಲಿದ್ದವರೂ ಮಾತ್ರ ಉಳಿದರು. ಮತ್ತು ಜಲವು ಭೂಮಿಯ ಮೇಲೆ ೧೫೦ ದಿವಸ ಪ್ರಬಲವಾಗಿತ್ತು. ಆಗ ದೇವರು ನೋಹನನ್ನೂ ಅವನ ಸಂಗಡ ನಾವೆಯಲ್ಲಿದ್ದ ಎಲ್ಲಾ ಮೃಗಗಳನ್ನೂ ಎಲ್ಲಾ ಪಶುಗಳನ್ನೂ ನೆನಪು ಮಾಡಿ ಕೊಂಡು, ಭೂಮಿಯ ಮೇಲೆ ಘಾಳಿ ಬೀಸ ಮಾಡಲಾಗಿ ಜಲವು ತಗ್ಗಿತು. ಮತ್ತು ಅಗಾಧದ ಬುಗ್ಗೆಗಳೂ ಆಕಾಶದ ಕಿಟಕಿಗಳೂ ಮುಚ್ಚಿ ಹೋದವು; ಆಕಾಶದಿಂದ ಬೀಳುವ ಮಳೆಯು ನಿಂತಿತು. ೭ನೇ ತಿಂಗಳಿನ ೧೭ನೇ ದಿವಸದಲ್ಲಿ ನಾವೆಯು ಅರರಾಟ್ ಬೆಟ್ಟಗಳ ಮೇಲೆ ನೆಲೆಗೊಂಡಿತು. ೧೦ನೇ ತಿಂಗಳಿನ ಮೊದಲನೇ ದಿವಸದಲ್ಲಿ ಬೆಟ್ಟಗಳ ತುದಿಗಳು ಕಾಣ ಬಂದವು. ೪೦ ದಿವಸದ ಮೇಲೆ ನೋಹನು ತಾನು ಮಾಡಿದ ಕಿಟಕಿಯನ್ನು ತೆರೆದು, ಒಂದು ಕಾಗೆಯನ್ನು ಕಳುಹಿಸಿದನು. ಅದು ಹೊರಟು ಭೂಮಿಯ ಮೇಲಿನಿಂದ ಜಲವು ಆರಿ ಹೋಗುವ ಪರಿಯಂತರ ಹೋಗುತ್ತಾ ಬರುತ್ತಾ ಇತ್ತು. ಮತ್ತು ಅವನು ಒಂದು ಪಾರಿವಾಳವನ್ನು ಕಳುಹಿಸಿದನು; ಆದರೆ ಅದಕ್ಕೆ ಅಂಗಾಲು ವಿಶ್ರಮಿಸಿ ಕೊಳ್ಳುವ ಸ್ಥಳವು ಶಿಕ್ಕದ ಕಾರಣ, ಅದು ತಿರಿಗಿ ಅವನ ಬಳಿಗೆ ನಾವೆಗೆ ಬಂತು. ಮತ್ತು ೭ ದಿವಸ ತಡೆದು, ತಿರುಗಿ ಒಂದು ಪಾರಿವಾಳವನ್ನು ಕಳುಹಿಸಿದನು. ಸಾಯಂಕಾಲದಲ್ಲಿ ಅದು ಅವನ ಬಳಿಗೆ ಬರಲಾಗಿ, ಇಗೋ, ಕಿತ್ತ ಇಪ್ಪೇ ಎಲೆಯು ಅದರ ಬಾಯಿಯಲ್ಲಿ ಇತ್ತು. ಆಗ ನೋಹನು ಭೂಮಿಯ ಮೇಲಿನಿಂದ

ಜಲ ಕಡಿಮೆಯಾಯಿತೆಂದು ತಿಳು ಕೊಂಡನು. ಅವನು ಇನ್ನ ಏಳು ದಿವಸ ತಡೆದು, ಒಂದು ಪಾರಿವಾಳವನ್ನು ಕಳುಹಿಸಿದಾಗ, ಅದು ಅವನ ಬಳಿಗೆ ತಿರುಗಿ ಬರಲಿಲ್ಲ. ಆಗ ನೋಹನು ನಾವೆಯ ಮುಚ್ಚಳವನ್ನು ತೆಗದು ನೋಡಲಾಗಿ, ಅಗೋ, ಭೂಮಿಯ ಮೇಲಿರುವ ನೀರು ಆರಿ ಹೋಗಿತ್ತು. (೨ನೇ ವರುಷದ) ೨ನೇ ತಿಂಗಳಿನ ೨೭ನೇ ದಿವಸದಲ್ಲಿ ಭೂಮಿಯು ಒಣಗಿತ್ತು. ಆಗ ನೋಹನು ನಾವೆಯೊಳಗಿಂದ ಹೊರಟು ಬಂದು, ಯೆಹೋವನಿಗೆ ಒಂದು ಪೀಠವನ್ನು ಕಟ್ಟಿ, ಅದರ ಮೇಲೆ ದಹನ ಬಲಿಗಳನ್ನು ಅರ್ಪಿಸಿದನು.



ಮತ್ತು ಯೆಹೋವನು ಅದರ ಸುವಾಸನೆಯನ್ನು ಮೂಸಿ ನೋಡಲಾಗಿ, ತನ್ನ ಹೃದಯದಲ್ಲಿ ಹೇಳಿ ಕೊಂಡದ್ದೇನಂದರೆ:—ಇನ್ನು ಮೇಲೆ ನಾನು ಮನುಷ್ಯರಿಗೋಸ್ಕರ ಭೂಮಿಯನ್ನು ಶಪಿಸುವದಿಲ್ಲಾ; ಯಾಕಂದರೆ ಮನುಷ್ಯನ ಹೃದಯದ ಕಲ್ಪನೆ ಚಿಕ್ಕತನದಾರಭ್ಯ ಕೆಟ್ಟದ್ದು. ಭೂಮಿಯು ಇರುವ ಮಟ್ಟಿಗೂ ಬಿತ್ತುವ ಕಾಲವೂ, ಕೊಯ್ಯುವ ಕಾಲವೂ, ತಂಪೂ, ಶೆಖೆಯೂ, ಬೇಸಿಗೇ ಕಾಲವೂ, ಹಿಮಕಾಲವೂ, ಹಗಲೂ, ರಾತ್ರಿಯೂ ನಿಂತು ಹೋಗವು. ಮತ್ತು ದೇವರು ನೋಹನನ್ನೂ ಅವನ ಮಕ್ಕಳನ್ನೂ ಆಶೀರ್ವದಿಸಿ, ಅವರಿಗೆ ಹೇಳಿದ್ದೇನಂದರೆ:—ಅಭಿವೃದ್ಧಿಯಾಗಿ, ಹೆಚ್ಚಿ, ಭೂಮಿಯನ್ನು ತುಂಬಿಸಿರಿ. ಮತ್ತು ನಿಮ್ಮ ಭಯವೂ ನಿಮ್ಮ ಹೆದರಿಕೆಯೂ ಭೂಮಿಯ ಎಲ್ಲಾ ಮೃಗಗಳ ಮೇಲೆ ಇರಲಿ. ಹರಿದಾಡುವ ಜೀವಜಂತುಗಳೆಲ್ಲಾ ನಿಮಗೆ ಆಹಾರಕ್ಕಾಗಿರಲಿ; ಆದರೆ ಮಾಂಸವನ್ನು ಅದರ ಪ್ರಾಣವಾದ ರಕ್ತದ ಸಂಗಡ ನೀವು ತಿನ್ನ ಬಾರದು. ಮನುಷ್ಯನ ರಕ್ತವನ್ನು ಚೆಲ್ಲುವವನ್ಯಾವನೋ, ಅವನ ರಕ್ತವು ಮನುಷ್ಯರು ಚೆಲ್ಲುವರು; ಯಾಕಂದರೆ ದೇವರು ಮನುಷ್ಯನನ್ನು ತನ್ನ ಸ್ವರೂಪದಲ್ಲಿ ಉಂಟು ಮಾಡಿದನು. ಮತ್ತು ದೇವರು ನೋಹನಿಗೂ ಅವನ ಮಕ್ಕಳಿಗೂ: ಇಗೋ, ನಾನು ನನ್ನ ಒಡಂಬಡಿಕೆಯನ್ನು ನಿಮ್ಮ ಸಂಗಡಲೂ, ಎಲ್ಲಾ ಜೀವಜಂತುಗಳ ಸಂಗಡಲೂ ಸ್ಥಾಪಿಸುತ್ತೇನೆ; ಏನಂದರೆ, ಇನ್ನು ಮೇಲೆ ಪ್ರಳಯದ ಜಲಗಳಿಂದ ಮಾಂಸವೆಲ್ಲಾ ಕೆಡದು. ನಾನು ನನ್ನ ಬಿಲ್ಲು ಮೇಘಗಳಲ್ಲಿ ಇಟ್ಟಿದ್ಧೇನೆ. ಅದು ನನಗೂ ಭೂಮಿಗೂ ಒಡಂಬಡಿಕೆಯ ಗುರುತಾಗಿರುವದು. ನಾನು ಭೂಮಿಯ ಮೇಲೆ ಮೇಘಗಳನ್ನು ತರಿಸುವಾಗ ಆ ಬಿಲ್ಲು ಮೇಘಗಳಲ್ಲಿ ಕಾಣುವದು; ಆಗ ನಾನು ನನಗೂ ನಿಮಗೂ ಇರುವ ಒಡಂಬಡಿಕೆಯನ್ನು ನೆನಪು ಮಾಡುವೆನೆಂದು ಹೇಳಿದನು.

ಬಾ. 117. III. 22. ಬಾ. 79.

---

## ೪. ನೋಹನ ಸಂತಾನವು, ಬಾಬೆಲದ ಗೋಪುರವು.

(ಉತ್ಪತ್ತಿ. ೯. ೧೧.)

೧) ನಾವೆಯೊಳಗಿಂದ ಹೊರಟು ಬಂದ ನೋಹನ ಮಕ್ಕಳು ಯಾರಂದರೆ: ಶೇಮನು, ಹಾಮನು, ಯಾಫೆತನು. ಹಾಮನೆಂಬವನು ಕನಾನನ ತಂದೆಯು. ಇವರಿಂದ ಭುಮಿಯಲ್ಲೆಲ್ಲಾ ಜನರು ವಿಸ್ತರಿಸಿದರು. ನೋಹನು ವ್ಯವಸಾಯ ಮಾಡುವವನಾಗಿ ದ್ರಾಕ್ಷೇ ತೋಟ ಮಾಡಿದನು. ಮತ್ತು ದ್ರಾಕ್ಷೇ ರಸವನ್ನು ಕುಡಿದು, ಅಮಲು ಹತ್ತಿ, ತನ್ನ ಗುಡಾರದಲ್ಲಿ ಬೆತ್ತಲೆಯಾಗಿದ್ದನು. ಕನಾನನ ತಂದೆಯಾದ ಹಾಮನು ತನ್ನ ತಂದೆಯ ಬೆತ್ತಲೆಯನ್ನು ನೋಡಿ, ಹೊರಗಿರುವ ತನ್ನ ಸಹೋದರರಿಬ್ಬರಿಗೆ ತಿಳಿಸಿದನು. ಆಗ ಶೇಮನೂ ಯಾಫೆತನೂ ಬಟ್ಟೆಯನ್ನು ತಕ್ಕೊಂಡು, ತಮ್ಮಿಬ್ಬರ ಹೆಗಲಲ್ಲಿ ಇಟ್ಟು ಕೊಂಡು, ಹಿಂಭಾಗವಾಗಿ ಹೋಗಿ, ತಮ್ಮ ತಂದೆಯ ಬೆತ್ತಲೆಯನ್ನು ಮುಚ್ಚಿದರು. ಅವರ ಮುಖಗಳು ಹಿಂಭಾಗವಾಗಿದ್ದದರಿಂದ ತಮ್ಮ ತಂದೆಯ ಬೆತ್ತಲೆಯನ್ನು ನೋಡಲಿಲ್ಲ. ನೋಹನು ದ್ರಾಕ್ಷೇ ರಸದ ಅಮಲಿನಿಂದ ಎಚ್ಚರವಾಗಿ, ತನ್ನ ಚಿಕ್ಕ ಮಗನು ತನಗೆ ಮಾಡಿದ್ದನ್ನು ತಿಳಿದು, ಹೇಳಿದ್ದೇನಂದರೆ:—ಕನಾನನು ಶಾಪಗ್ರಸ್ತನಾಗಿ, ತನ್ನ ಸಹೋದರರಿಗೆ ದಾಸಾನುದಾಸನಾಗಿರಲಿ; ಶೇಮನ ದೇವರಾದ ಯೆಹೋವನಿಗೆ ಸ್ತುತಿ ಆಗಲಿ; ಕನಾನನು ಅವನಿಗೆ ದಾಸನಾಗಿರಲಿ; ಯಾಫೆತನನ್ನು ದೇವರು ವಿಸ್ತರಿಸಲಿ; ಅವನು ಶೇಮನ ಗುಡಾರಗಳಲ್ಲಿ ವಾಸವಾಗಿರಲಿ; ಕನಾನನು ಅವನಿಗೆ ದಾಸನಾಗಿರಲಿ. ಪ್ರಳಯವಾದ ಮೇಲೆ ನೋಹನು ೩೫೦ ವರುಷ ಬದುಕಿದನು. ಹೀಗೆ ನೋಹನ ದಿವಸಗಳೆಲ್ಲಾ ೯೫೦ ವರುಷಗಳಾಗಿದ್ದವು; ಆಗ ಸತ್ತನು.

೨) ಭೂಮಿ ಎಲ್ಲ ಒಂದೇ ಭಾಷೆಯೂ ಒಂದೇ ಮಾತೂ ಉಳ್ಳದ್ದಾಗಿತ್ತು. ಅವರು ಪೂರ್ವ ದಿಕ್ಕಿನಿಂದ ಹೊರಟು, ಪ್ರಯಾಣ

ಮಾಡುವಾಗ, ಶೀನಾರ್ ದೇಶದ ಬೈಲನ್ನು ಕಂಡು ಕೊಂಡು, ಅಲ್ಲಿ ವಾಸ ಮಾಡಿದರು. ಮತ್ತು ಅವರು ಒಬ್ಬರಿಗೊಬ್ಬರು ಹೇಳಿ ಕೊಂಡದ್ದೇನಂದರೆ:—ಬನ್ನಿರಿ, ಇಟ್ಟಿಗೆಗಳನ್ನು ಮಾಡಿ, ಚನ್ನಾಗಿ ಸುಡುವ; ನಮಗೆ ಒಂದು ಪಟ್ಣವನ್ನೂ ಗೋಪುರವನ್ನೂ ಕಟ್ಟಿ ಕೊಳ್ಳುವ; ಅದರ ತಲೆಯು ಆಕಾಶದಲ್ಲಿರಲಿ. ನಾವು ಎಲ್ಲಾ ಭೂಮಿಯ ಮೇಲೆ ಚದರಿ ಹೋಗದ ಹಾಗೆ ನಮಗೆ ಒಂದು ಹೆಸರನ್ನು ಮಾಡಿ ಕೊ



ಳ್ಳುವ. ಆಗ ಯೆಹೋವನು ಮನುಷ್ಯರು ಕಟ್ಟುವ ಪಟ್ಣವನ್ನೂ ಗೋಪುರವನ್ನೂ ನೋಡುವದಕ್ಕೆ ಇಳಿದು ಬಂದನು. ಇಗೋ, ಜನವು ಒಂದೇ; ಅವರೆಲ್ಲರಿಗೆ ಒಂದೇ ಭಾಷೆ; ಅವರು ಮಾಡಲಾರಂಭಿಸಿದ್ದು ಇದೇ. ಇನ್ನು ಮೇಲೆ ಅವರು ಮಾಡ ಯೋಚಿಸಿದ್ದೆಲ್ಲಾದಕ್ಕೆ ಅಡ್ಡಿಯಾಗದು. ಎಲೇ, ನಾವು ಇಳಿದು, ಅವರು ಒಬ್ಬರ ಮಾತು ಒಬ್ಬರು ತಿಳಿಯದ ಹಾಗೆ ಅವರ ಮಾತನ್ನು ಅಲ್ಲಿ ಗಲಿಬಿಲಿ ಮಾಡುವ ಎಂದು ಹೇಳಿದನು. ಹೀಗೆ ಯೆಹೋವನು ಅವರನ್ನು ಅಲ್ಲಿಂದ ಎಲ್ಲಾ ಭೂಮಿಯ ಮೇಲೆ ಚದರ ಮಾಡಿದನು. ಮತ್ತು ಆ ಪಟ್ಣವನ್ನು ಕಟ್ಟುವದನ್ನು ನಿಲ್ಲಿಸಿ ಬಿಟ್ಟರು. ಅದಕ್ಕೋಸ್ಕರ ಅದಕ್ಕೆ ಬಾಬೆಲ್ (ಅಂದರೆ ಗಲಿಬಿಲಿ) ಎಂಬ ಹೆಸರಾಯಿತು.

II. 21. ಬಾ. 78.

---

# ೭. ಅಬ್ರಾಮನ ಕರಿಯುವಿಕೆ.

(ಉತ್ಪತ್ತಿ. ೧೨. ೧೩.)

(ಸೃಷ್ಟಿಯ ಮೇಲೆ ೨೦೦೮ನೇ ವರುಷ.)

೧) ಶೇಮನ ಸಂತತಿಯ ಹತ್ತನೇ ತಲಾಂತರದಲ್ಲಿ ತೇರಹನು ಹುಟ್ಟಿದನು; ಇವನು ಅಬ್ರಾಮನನ್ನೂ ನಾಹೊರನನ್ನೂ ಹಾರಾನನನ್ನೂ ಪಡೆದನು. ಹಾರಾನನು ಲೋಟನನ್ನು ಪಡೆದನು. ಆದರೆ ಹಾರಾನನು ಕಸ್ದೀಯರ ಊರಿನಲ್ಲಿ ಸತ್ತನು. ಮತ್ತು ತೇರಹನು ತನ್ನ ಸಂಸಾರದ ಸಂಗಡ ಎದ್ದು, ಹಾರಾನಿನ ಪರಿಯಂತರ ಬಂದು, ಅಲ್ಲಿ ವಾಸವಾಗಿದ್ದನು. ಆದರೆ ತೇರಹನು ಬೇರೆ ದೇವರುಗಳಿಗೆ ಸೇವೆ ಮಾಡಿದನು. ಆಗ ಯೆಹೋವನು ಅಬ್ರಾಮನಿಗೆ ಹೇಳಿದ್ದೇನಂದರೆ:—ನಿನ್ನ ದೇಶವನ್ನೂ ನಿನ್ನ ಸಂತಾನವನ್ನೂ ನಿನ್ನ ತಂದೆಯ ಮನೆಯನ್ನೂ ಬಿಟ್ಟು, ನಾನು ನಿನಗೆ ತೋರಿಸುವ ದೇಶಕ್ಕೆ ಹೋಗು. ನಾನು ನಿನ್ನನ್ನು ದೊಡ್ಡ ಜನಾಂಗವಾಗ ಮಾಡಿ, ನಿನ್ನನ್ನು ಆಶೀರ್ವದಿಸಿ, ನಿನ್ನ ಹೆಸರು ದೊಡ್ಡದಾಗ ಮಾಡುವೆನು; ನೀನು ಆಶೀರ್ವಾದವಾಗಿರುವಿ. ನಿನ್ನನ್ನು ಆಶೀರ್ವದಿಸುವವರನ್ನು ಆಶೀರ್ವದಿಸುವೆನು, ನಿನ್ನನ್ನು ಶಪಿಸುವವರನ್ನು ಶಪಿಸುವೆನು. ಭೂಮಿಯ ಕುಲಗಳೆಲ್ಲಾ ನಿನ್ನಲ್ಲಿ ಆಶೀರ್ವದಿಸಲ್ಪಡುವವು. ಆಗ ಅಬ್ರಾಮನು ಯೆಹೋವನು ತನಗೆ ಹೇಳಿದ ಪ್ರಕಾರ ಹೋದನು. ಅವನು ಹೊರಟಾಗ ೭೫ ವರುಷದವನಾಗಿದ್ದನು. ಇದಲ್ಲದೆ ಅಬ್ರಾಮನು ತನ್ನ ಹೆಂಡತಿಯಾದ ಸಾರೈಯಳನ್ನೂ ತನ್ನ ಸಹೋದರನ ಮಗನಾದ ಲೋಟನನ್ನೂ ಅವರು ಸಂಪಾದಿಸಿದ ಎಲ್ಲಾ ಸಂಪತ್ತನ್ನೂ ತೆಗೆದು ಕೊಂಡು, ಕಾನಾನ್ ದೇಶಕ್ಕೆ ಶೇರಿದನು. ಆಗ ಯೆಹೋವನು ಅಬ್ರಾಮನಿಗೆ ಕಾಣಿಸಿ ಕೊಂಡು, ಹೇಳಿದ್ದೇನಂದರೆ:—ನಿನ್ನ ಬೀಜಕ್ಕೆ ಈ ದೇಶವನ್ನು ಕೊಡುವೆನು. ಆಗಲವನು ತನಗೆ ಕಾಣಿಸಿ ಕೊಂಡ ಯೆ

ಹೋವನಿಗೆ ಬಲಿಪೀಠವನ್ನು ಕಟ್ಟಿ, ಯೆಹೋವನ ಹೆಸರನ್ನು ಕರೆದನು.

೨) ಅಬ್ರಾಮನು ದನಗಳಿಂದಲೂ ಬೆಳ್ಳಿ ಭಂಗಾರದಿಂದಲೂ ಬಹು ಘನವುಳ್ಳವನಾಗಿದ್ದನು. ಆದರೆ ಲೋಟನಿಗೆ ಸಹ ಕುರಿ ದನಗಳೂ ಗುಡಾರಗಳೂ ಇದ್ದವು. ಅವರು ಕೂಡಾ ವಾಸಿಸುವ ಹಾಗೆ ದೇಶವು ಸಾಲದೆ ಹೋಯಿತು. ಈ ಪ್ರಕಾರ ಅಬ್ರಾಮನ ದನಕಾಯುವವರಿಗೂ ಲೋಟನ ದನಕಾಯುವವರಿಗೂ ಜಗಳವಾಯಿತು. ಹೀಗಿರಲಾಗಿ ಅಬ್ರಾಮನು ಲೋಟನಿಗೆ ಹೇಳಿದ್ದೇನಂದರೆ:—ನನಗೂ



ನಿನಗೂ ನನ್ನ ದನಕಾಯುವವರಿಗೂ ನಿನ್ನ ದನಕಾಯುವವರಿಗೂ ಜಗಳವಿರ ಬಾರದು. ನಾವು ಸಹೋದರರಾದ ಜನರಲ್ಲವೋ? ಭೂಮಿ ಎಲ್ಲಾ ನಿನ್ನ ಮುಂದೆ ಇರುತ್ತದೆಯಲ್ಲವೋ? ಹಾಗಾದರೆ, ನನ್ನ ಬಳಿಯಿಂದ ತೊಲಗು; ನೀನು ಎಡ ಕಡೆಗೆ ಹೋದರೆ, ನಾನು ಬಲ ಕಡೆಗೆ ಹೋಗುವೆನು; ನೀನು ಬಲ ಕಡೆಗೆ ಹೋದರೆ, ನಾನು ಎಡ ಕಡೆಗೆ ಹೋಗುವೆನು. ಆಗ ಲೋಟನು ಯೊರ್ದನಿನ ಸುತ್ತಲಿರುವ ದೇಶವನ್ನು ತನಗೆ ಆರಿಸಿ ಕೊಂಡು, ಮೂಡಣಕ್ಕೆ ಹೊರಟನು. ಅಬ್ರಾಮನು ಕಾನಾನ್ ದೇಶದಲ್ಲಿ ವಾಸ ಮಾಡಿದನು. ಆದರೆ ಲೋಟನು ಸೊದೋಮಿನ ಬಳಿಯಲ್ಲಿ ತನ್ನ ಗುಡಾರಗಳನ್ನು ಹಾಕಿ, ಸು

ತ್ರಲಿರುವ ಪಟ್ಣಗಳಲ್ಲಿ ವಾಸ ಮಾಡಿದನು. ಆದರೆ ಸೊದೋಮಿನ ಮನುಷ್ಯರು ದುಷ್ಟರೂ ಯೆಹೋವನಿಗೆ ವಿರೋಧವಾಗಿ ಬಹು ಪಾಪಿಷ್ಟರೂ ಆಗಿದ್ದರು. ಲೋಟನು ಅಬ್ರಾಮನನ್ನು ಬಿಟ್ಟ ಮೇಲೆ ಯೆಹೋವನು ಅಬ್ರಾಮನಿಗೆ ಹೇಳಿದ್ದೇನಂದರೆ:—ನಿನ್ನ ಕಣ್ಣುಗಳನ್ನು ಎತ್ತಿ ನೋಡು! ಯಾಕಂದರೆ, ನೀನು ನೋಡುವ ದೇಶವನ್ನೆಲ್ಲಾ ನಿನಗೂ ನಿನ್ನ ಬೀಜಕ್ಕೂ ನಿತ್ಯವಾಗಿ ಕೊಡುವೆನು. ಮತ್ತು ಅಬ್ರಾಮನು ಗುಡಾರ ತಕ್ಕೊಂಡು ಹೆಬ್ರೋನಿನಲ್ಲಿರುವ ಮಮ್ರೆ ತೋಪಿನಲ್ಲಿ ವಾಸವಾಗಿದ್ದು, ಅಲ್ಲಿ ಒಂದು ಪೀಠವನ್ನು ಕಟ್ಟಿದನು.

II. 32. ಬಾ. 89. II. 57. 58. 61.

---

## ೭. ಅಬ್ರಾಮನ ವಿಶ್ವಾಸವು.

(ಉತ್ಪತ್ತಿ. ೧೫. ೧೭. ೧೮.)

೧)ಈ ಕಾರ್ಯಗಳ ಬಳಿಕ ಯೆಹೋವನ ವಾಕ್ಯವು ಅಬ್ರಾಮನಿಗೆ ದರ್ಶನದಲ್ಲಿ ಉಂಟಾಯಿತು, ಏನಂದರೆ:—ಅಬ್ರಾಮನೇ, ಭಯಪಡ ಬೇಡ; ನಾನೇ ನಿನಗೆ ಡಾಲೂ ನಿನ್ನ ಬಹಳ ದೊಡ್ಡ ಸಂಬಳವೂ ಆಗಿದ್ದೇನೆ. ಆಗ ಅಬ್ರಾಮನು: ನನ್ನ ಕರ್ತನಾದ ಯೆಹೋವನೇ! ನಾನು ಮಕ್ಕಳಿಲ್ಲದವನು, ನನಗೆ ಏನು ಕೊಡುವಿ? ಅಂದನು. ಆಗ ಯೆಹೋವನು ಅವನನ್ನು ಹೊರಗೆ ಕರ ಕೊಂಡು ಬಂದು: ಎಲಾ! ಆಕಾಶವನ್ನು ದೃಷ್ಟಿಸಿ, ನಕ್ಷತ್ರಗಳನ್ನು ಲೆಖ್ಖ ಮಾಡ ಶಕ್ತನಾದರೆ, ಅವುಗಳನ್ನು ಲೆಖ್ಖ ಮಾಡು ಎಂದು ಹೇಳಿ, ಹಾಗೆಯೇ ನಿನ್ನ ಬೀಜವು ಆಗುವದೆಂದು ಅವನಿಗೆ ಹೇಳಿದನು. ಅಬ್ರಾಮನು ಯೆಹೋವನಲ್ಲಿ ವಿಶ್ವಾಸವಿಟ್ಟನು. ಆತನು ಅದನ್ನು ಅವನಿಗೆ ನೀತಿ ಎಂದು ಎಣಿಸಿದನು. ಅಬ್ರಾಮನು ೯೯ ವರುಷದವನಾಗಿದ್ದಾಗ, ಯೆಹೋವನು ಅವನಿಗೆ ಕಾಣಿಸಿ ಕೊಂಡು: ನಾನೇ ಸರ್ವ ಶಕ್ತನಾದ ದೇವರು; ನನ್ನ ಮುಂದೆ ನಡದು ಕೊಂಡು, ಸಂಪೂರ್ಣ

ನಾಗಿರೆಂದು ಹೇಳಿದನು. ಆಗ ಅಬ್ರಾಮನು ಅಡ್ಡ ಬಿದ್ದನು. ಮತ್ತು ದೇವರು ಅವನ ಸಂಗಡ ಮಾತಾಡಿದ್ದೇನಂದರೆ:—ಇಗೋ, ನನ್ನ ಒಡಂಬಡಿಕೆ ನಿನ್ನ ಸಂಗಡ ಅದೆ, ಮತ್ತು ಜನಾಂಗಗಳ ಸಮೂಹಕ್ಕೆ ತಂದೆಯಾಗಿರುವಿ; ನಿನ್ನ ಹೆಸರು ಇನ್ನು ಅಬ್ರಾಮನೆಂದಲ್ಲ, ಅಬ್ರಹಾಮನೆಂದು ಇರುವದು; ಯಾಕಂದರೆ ಜನಾಂಗಗಳ ಸಮೂಹಕ್ಕೆ ತಂದೆಯಾಗಿ ನಿನ್ನನ್ನು ಇಟ್ಟದ್ಧೇನೆ. ಮತ್ತು ನೀನು ನನ್ನ ಒಡಂಬಡಿಕೆಯನ್ನು ಕೈಕೊಳ್ಳ ಬೇಕು—ನೀನೂ ಅವರ ತಲತಲಾಂತರಗಳಲ್ಲಿ ನಿನ್ನ ಬಳಿಕ ನಿನ್ನ ಬೀಜವೂ ಅದನ್ನು ಕೈಕೊಳ್ಳ ಬೇಕೆಂದು ಹೇಳಿದನು. ನೀವು ಕೈಕೊಳ್ಳ ತಕ್ಕ ನನ್ನ ಒಡಂಬಡಿಕೆ ಏನಂದರೆ—ನಿಮ್ಮಲ್ಲಿರುವ ಗಂಡಸರೆಲ್ಲರಿಗೆ ಪರಿಛೇದನೆ ಆಗ ಬೇಕು; ಅದು ನನಗೂ ನಿಮಗೂ ನಡುವೆ ಇರುವ ಒಡಂಬಡಿಕೆಗೆ ಗುರುತಾಗಿರುವದು. ೮ ದಿನ ಪ್ರಾಯದವರಾದ ಗಂಡಸರೆಲ್ಲರನ್ನು ಪರಿಛೇದಿಸ ಬೇಕು. ಆಗ ಅಬ್ರಹಾಮನು ದೇವರು ತನಗೆ ಕೊಟ್ಟ ಅಪ್ಪಣೆಯ ಪ್ರಕಾರ ಮಾಡಿದನು.

೨) ತರುವಾಯ ಯೆಹೋವನು ಮಮ್ರೆ ತೋಪಿನಲ್ಲಿ ಅಬ್ರಹಾಮನಿಗೆ ಕಾಣಿಸಿ ಕೊಂಡನು. ಹಗಲಿನ ಬಿಸಲಿನಲ್ಲಿ ಗುಡಾರದ ಬಾಗಲಲ್ಲಿ ಕೂತು ಕೊಂಡಾಗ, ತನ್ನ ಕಣ್ಣುಗಳನ್ನೆತ್ತಿ ನೋಡಲು, ಅಗೋ, ಮೂವರು ಮನುಷ್ಯರು ಅವನ ಮುಂದೆ ನಿಂತಿದ್ದರು. ಅ



ವನು ನೋಡಿ, ಗುಡಾರದ ಬಾಗಲಿನಿಂದ ಓಡಿ ಬಂದು, ನೆಲದಲ್ಲಿ ಅಡ್ಡ ಬಿದ್ದು, ಹೇಳಿದ್ದೇನಂದರೆ: — ನನ್ನ ಸ್ವಾಮಿಯೇ, ನಿನ್ನ ದೃಷ್ಟಿಯಲ್ಲಿ ನನಗೆ ದಯ ದೊರಕಿತಾದರೆ, ನಿನ್ನ ದಾಸನ ಬಳಿಯಿಂದ ದಾಟಿ ಹೋಗ ಬೇಡ. ಸ್ವಲ್ಪ ನೀರು ತಕ್ಕೊಂಡು, ನಿಮ್ಮ ಕಾಲುಗಳನ್ನು ತೊಳೆದು, ಮರದ ಕೆಳಗೆ ವಿಶ್ರಮಿಸಿ ಕೊಳ್ಳಿರಿ. ನಾನು ರೊಟ್ಟಿಯ ತುಂಡು ತರುವೆನು. ಹೀಗೆ ಸುಖ ಪಡ ಕೊಳ್ಳಿರಿ. ಆಗ ಅಬ್ರಹಾಮನು ತ್ವರೆಯಾಗಿ ಸಾರಳ ಬಳಿಗೆ ಗುಡಾರಕ್ಕೆ ಹೋಗಿ, ತ್ವರೆ ಪಟ್ಟು, ಮೂರು ಸೇರು ನಯವಾದ ಹಿಟ್ಟು ನಾದಿ, ರೊಟ್ಟಿಗಳನ್ನು ಮಾಡು, ಅಂದನು. ಮತ್ತು ದನದ ಮಂದೆಯ ಬಳಿಗೆ ಓಡಿ, ಎಳೇದಾದ ಒಂದು ಒಳ್ಳೇ ಕರುವನ್ನು ತಕ್ಕೊಂಡು, ಯೌವನಸ್ಥನಿಗೆ ಕೊಟ್ಟನು; ಇವನು ಅದನ್ನು ಬೇಗ ಸಿದ್ಧ ಮಾಡಿದನು. ಮತ್ತು ಅವನು ಬೆಣ್ಣೆಯನ್ನೂ ಹಾಲನ್ನೂ ಆ ಸಿದ್ಧ ಮಾಡಿದ ಕರುವನ್ನೂ ತೆಗದು ಕೊಂಡು, ಅವರ ಮುಂದೆ ಇಟ್ಟನು; ಅವರು ಉಂಡರು. ಆಗ ಕರ್ತನು: ಬರುವ ವರುಷದಲ್ಲಿ ನಾನು ತಿರಿಗಿ ನಿನ್ನ ಬಳಿಗೆ ಬರುತ್ತೇನೆ. ಆಗ ಅಗೋ, ನಿನ್ನ ಹೆಂಡತಿಯಾದ ಸಾರಳಿಗೆ ಒಬ್ಬ ಮಗನು ಇರುವನು, ಅಂದನು. ಸಾರಳು ಅವನ ಹಿಂದೆ ಇರುವ ಗುಡಾರದ ಬಾಗಲಲ್ಲಿ ಇದನ್ನು ಕೇಳಲು, ತನ್ನ ಹೃದಯದಲ್ಲಿ: ನಾನೂ ನನ್ನ ಯಜಮಾನನೂ ಮುದುಕರಾದ ಮೇಲೆ ಹೆರುವದುಂಟೋ? ಅಂದಳು. ಆಗ ಕರ್ತನು ಅಬ್ರಹಾಮನಿಗೆ: ಸಾರಳು ಯಾಕೆ ನಗುತ್ತಾಳೆ? ಯೆಹೋವನಿಂದಲಾಗದ ಆಶ್ಚರ್ಯ ಉಂಟೋ? ಎಂದು ಹೇಳಿದನು. ಆಗ ಸಾರಳು ಭಯ ಪಟ್ಟು: ನಾನು ನಗಲಿಲ್ಲ ಎಂದು ಬೊಂಕಿದಾಗ, ಅವನು: ಹಾಗಲ್ಲ, ನೀನು ನಕ್ಕೆ, ಅಂದನು.

೨) ಆ ಮೇಲೆ ಆ ಮನುಷ್ಯರು ಅಲ್ಲಿಂದ ಎದ್ದು, ಸೊದೋಮಿನ ಕಡೆಗೆ ಹೋದರು. ಅಬ್ರಹಾಮನು ಅವರನ್ನು ಸಾಗ ಕಳುಹಿಸುವದಕ್ಕೆ ಅವರ ಸಂಗಡ ಹೋದನು. ಆಗ ಯೆಹೋವನು ಹೇಳಿದ್ದೇನಂದರೆ: — ನಾನು ಮಾಡುವದನ್ನು ಅಬ್ರಹಾಮನಿಗೆ ಮರೆ ಮಾಡು

ವೆನೇ? ಯಾಕಂದರೆ ಅವರು ನೀತಿ ನ್ಯಾಯಗಳನ್ನು ನಡಿಸುವದಕ್ಕೆ ಯೆಹೋವನ ಮಾರ್ಗವನ್ನು ಕೈಕೊಳ್ಳುವ ಹಾಗೆ, ಅಬ್ರಹಾಮನು ತನ್ನ ಮಕ್ಕಳಿಗೂ ತನ್ನ ಬಳಿಕ ಇರುವ ತನ್ನ ಮನೆಗೂ ಆಜ್ಞೆ ಕೊಡುವನೆಂದು ನನಗೆ ತಿಳಿದದೆ. ಮತ್ತು ಯೆಹೋವನು ಹೇಳಿದ್ದೇನಂದರೆ:—ಸೊದೋಮ್ ಗಮೋರಗಳ ಕೂಗು ದೊಡ್ಡದಾಗಿರುವದರಿಂದಲೂ, ಅವರ ಪಾಪವು ಮಹಾ ಭಾರವಾಗಿರುವದರಿಂದಲೂ, ಎಲಾ, ನಾನು ಇಳಿದು ಹೋಗಿ, ನೋಡಿ ಕೊಳ್ಳುತ್ತೇನೆ. ಆಗ ಆ ಮನುಷ್ಯರು ಅಲ್ಲಿಂದ ತಿರುಗಿ ಕೊಂಡು, ಸೊದೋಮಿನ ಕಡೆಗೆ ಹೋದರು. ಆದರೆ ಅಬ್ರಹಾಮನು ಇನ್ನೂ ಯೆಹೋವನ ಮುಂದೆ ನಿಂತು, ಹತ್ತರ ಬಂದು, ಹೇಳಿದ್ದೇನಂದರೆ:—ದುಷ್ಟನ ಸಂಗಡ ನೀತಿವಂತನನ್ನು ನಾಶನ ಮಾಡುವಿಯೋ? ಒಂದು ವೇಳೆ ಆ ಪಟ್ಣದಲ್ಲಿ ಐವತ್ತು ನೀತಿವಂತರಿದ್ದರೆ, ಅದರೊಳಗೆ ಇರುವ ಐವತ್ತು ನೀತಿವಂತರಿಗೋಸ್ಕರ ಆ ಸ್ಥಳವನ್ನು ಕ್ಷಮಿಸದೆ, ನಾಶನ ಮಾಡುವಿಯೋ? ಆ ಪ್ರಕಾರ ಮಾಡಿ, ನೀತಿವಂತನನ್ನು ದುಷ್ಟನ ಸಂಗಡ ಕೊಲ್ಲುವದು ನಿನಗೆ ದೂರವಾಗಿರಲಿ; ಆಗ ನೀತಿವಂತನು ದುಷ್ಟನ ಪ್ರಕಾರವೇ ಇರುವನು; ಅದು ನಿನಗೆ ದೂರವಾಗಿರಲಿ. ಆಗ ಯೆಹೋವನು ನನಗೆ ಸೊದೋಮಿನಲ್ಲಿ ಐವತ್ತು ಮಂದಿ ನೀತಿವಂತರು ಶಿಕ್ಕಿದರೆ, ಅವರಿಗೋಸ್ಕರ ಸ್ಥಳವೆಲ್ಲಾದ್ದಕ್ಕೆ ಮನ್ನಿಸುವೆನು, ಅಂದನು. ಆಗ ಅಬ್ರಹಾಮನು ಉತ್ತರ ಕೊಟ್ಟು: ಇಗೋ, ಮಣ್ಣೂ ಬೂದಿಯೂ ಆಗಿರುವ ನಾನು ಯೆಹೋವನ ಸಂಗಡ ಮಾತಾಡ ಮುಂಗೊಂಡಿದ್ದೇನೆ; ಒಂದು ವೇಳೆ ಐವತ್ತು ನೀತಿವಂತರಲ್ಲಿ ಐದು ಮಂದಿ ಕಡಿಮೆ ಇದ್ದಾರು; ಆ ಐದು ಮಂದಿಗೋಸ್ಕರ ಆ ಪಟ್ಣವನ್ನೆಲ್ಲಾ ನಾಶನ ಮಾಡುವಿಯೋ? ಅಂದನು. ಅವನು: ನಾಲ್ವತ್ತೈದು ಮಂದಿ ಅಲ್ಲಿ ಶಿಕ್ಕಿದರೆ, ನಾನು ನಾಶನ ಮಾಡೆನು ಅಂದನು. ಮತ್ತು ಅವನು ಅವನ ಸಂಗಡ ಮಾತಾಡಿ: ಒಂದು ವೇಳೆ ನಾಲ್ವತ್ತು ಮಂದಿ ಶಿಕ್ಕ್ಯಾರು, ಅಂದನು; ಯೆಹೋವನು: ನಾಲ್ವತ್ತು ಮಂದಿಗೋಸ್ಕರ ಅದನ್ನು

ಮಾಡೆನು, ಅಂದನು. ಅವನು: ಯೆಹೋವನಿಗೆ ಕೋಪ ಬಾರದೆ ಇರಲಿ; ಒಂದು ಮಾತನ್ನು ಹೇಳುತ್ತೇನೆ; ಒಂದು ವೇಳೆ ಮೂವತ್ತು ಮಂದಿ ಶಿಕ್ಕ್ಯಾರು, ಅಂದಾಗ, ಯೆಹೋವನು: ನನಗೆ ಅಲ್ಲಿ ಮೂವತ್ತು ಮಂದಿ ಶಿಕ್ಕಿದರೆ, ಮಾಡೆನು, ಅಂದನು. ಅಬ್ರಹಾಮನು: ಇಗೋ ಯೆಹೋವನ ಸಂಗಡ ಮಾತಾಡ ಮುಂಗೊಂಡಿದ್ಧೇನೆ; ಒಂದು ವೇಳೆ ಇಪ್ಪತ್ತು ಮಂದಿ ಶಿಕ್ಕ್ಯಾರು, ಅಂದಾಗ, ಅವನು: ಇಪ್ಪತ್ತು ಮಂದಿಗೋಸ್ಕರ ನಾನು ನಾಶನ ಮಾಡೆನು. ಅಬ್ರಹಾಮನು: ಯೆಹೋವನಿಗೆ ಕೋಪ ಬಾರದೆ ಇರಲಿ. ಇನ್ನು ಒಂದೇ ಸಾರಿ ಮಾತಾಡುತ್ತೇನೆ; ಒಂದು ವೇಳೆ ಅಲ್ಲಿ ಹತ್ತು ಮಂದಿ ಶಿಕ್ಕ್ಯಾರು, ಅಂದಾಗ, ಯೆಹೋವನು: ಹತ್ತು ಮಂದಿಗೋಸ್ಕರ ನಾಶನ ಮಾಡೆನು, ಅಂದನು. ಯೆಹೋವನು ಅಬ್ರಹಾಮನ ಸಂಗಡ ಮಾತಾಡುವದನ್ನು ಮುಗಿಸಿದ ಮೇಲೆ, ಹೋದನು. ಅಬ್ರಹಾಮನು ತನ್ನ ಸ್ಥಳಕ್ಕೆ ತಿರುಗಿ ಕೊಂಡನು.

I. 17. ಬಾ. 61. II. 36.

---

## ೮. ಸೊದೋಮೂ ಗಮೋರವೂ.

### (ಉತ್ಪತ್ತಿ. ೧೯.)

ಆ ದೂತರಿಬ್ಬರು ಸಾಯಂಕಾಲದಲ್ಲಿ ಸೊದೋಮಿಗೆ ಬಂದಾಗ, ಲೋಟನು ಸೊದೋಮಿನ ಬಾಗಲಲ್ಲಿ ಕೂತು ಕೊಂಡಿದ್ದನು. ಲೋಟನು ಅವರನ್ನು ನೋಡಿ, ಎದುರುಗೊಳ್ಳುವದಕ್ಕೆ ಎದ್ದು, ನೆಲದಲ್ಲಿ ಅಡ್ಡ ಬಿದ್ದು, ಹೇಳಿದ್ದೇನಂದರೆ:—ಇಗೋ, ಸ್ವಾಮಿಗಳೇ, ದಯ ಮಾಡಿ, ನಿಮ್ಮ ದಾಸನ ಮನೆಯಲ್ಲಿ ಇಳು ಕೊಂಡು, ರಾತ್ರಿ ಕಳಿಯಿರಿ. ಅವರು: ಹಾಗಲ್ಲ, ಬೀದಿಯಲ್ಲಿ ರಾತ್ರಿ ಕಳಿಯುತ್ತೇವೆ, ಅಂದಾಗ, ಅವನವರಿಗೆ ಬಹಳ ಬಲವಂತ ಮಾಡಿದ್ದರಿಂದ, ಅವರು ಅವನ ಬಳಿಯಲ್ಲಿ ಇಳು ಕೊಂಡರು. ಅವರು ಮಲಗುವದಕ್ಕಿಂತ ಮುಂಚೆ ಸೊ

ದೋಮಿನ ಜನರು, ಹುಡುಗರು ಮೊದಲ್ಗೊಂಡು ಮುದುಕರ ಪರ್ಯಂತರ, ಮನೆಯನ್ನು ಸುತ್ತಿ ಕೊಂಡು, ಲೋಟನನ್ನು ಕರೆದು, ಈ ರಾತ್ರಿಯಲ್ಲಿ ನಿನ್ನ ಬಳಿಗೆ ಬಂದ ಮನುಷ್ಯರು ಎಲ್ಲಿ? ಅವರನ್ನು ನಮ್ಮ ಬಳಿಗೆ ಹೊರಗೆ ತೆಗೆದು ಕೊಂಡು ಬಾ; ನಾವು ಅವರನ್ನು ತಿಳು ಕೊಳ್ಳುವೆವು ಎಂದು ಹೇಳಿದರು. ಆಗ ಲೋಟನು ಅವರ ಬಳಿಗೆ ಹೊರಗೆ ಬಂದು, ಬಾಗಲನ್ನು ತನ್ನ ಹಿಂದೆ ಮುಚ್ಚಿ, ಹೇಳಿದ್ದೇನಂದರೆ:—ಎಲಾ, ನನ್ನ ಸಹೋದರರೇ, ಕೇಡು ಮಾಡ ಬೇಡಿರಿ. ಆದರೆ ಅವರು ಲೋಟನನ್ನು ಬಹಳವಾಗಿ ಇರಿಕಿಸಿ, ಬಾಗಲನ್ನು ಒಡೆಯ ಸಮೀಪಕ್ಕೆ ಬಂದರು. ಆಗ ಆ ಇಬ್ಬರು ದೂತರು ತಮ್ಮ ಕೈಗಳನ್ನು ಚಾಚಿ, ಲೋಟನನ್ನು ತಮ್ಮ ಬಳಿಗೆ ಮನೆಯೊಳಗೆ ಶೇರಿಸಿ, ಬಾಗಲನ್ನು ಮುಚ್ಚಿದರು; ಇದಲ್ಲದೆ ಮನೆಯ ಹೊರಗಿರುವ ಮನುಷ್ಯರನ್ನು, ಕಿರಿಯರು ಮೊದಲ್ಗೊಂಡು ಹಿರಿಯರ ಮಟ್ಟಿಗೂ, ಕುರಡತನದಿಂದ ಹೊಡೆದರು. ಆಗಲವರು ಬಾಗಲು ಕಂಡು ಕೊಳ್ಳುವದಕ್ಕೆ ದಣಿದರು. ಮತ್ತು ಆ ದೂತರು ಲೋಟನಿಗೆ: ಇಲ್ಲಿ ನಿನಗೆ ಇನ್ನು ಯಾರಾದರೂ ಇದ್ಧಾರೋ? ಅವರನ್ನು ಈ ಸ್ಥಳದಿಂದ ಹೊರಗೆ ತೆಗೆದು ಕೊಂಡು ಬಾ; ಯಾಕಂದರೆ ಈ ಸ್ಥಳವನ್ನು ನಾಶನ ಮಾಡುವದಕ್ಕೆ ಯೆಹೋವನು ನಮ್ಮನ್ನು ಕಳುಹಿಸಿದ್ಧಾನೆ, ಅಂದರು. ಆಗ ಲೋಟನು ಹೊರಟು, ತನ್ನ ಕುಮಾರ್ತೆಗಳನ್ನು ತಕ್ಕೊಂಡ ತನ್ನ ಅಳಿಯಂದಿರ ಸಂಗಡ ಮಾತಾಡಿ: ಎದ್ದು, ಈ ಸ್ಥಳದೊಳಗಿಂದ ಹೊರಡಿರಿ; ಯಾಕಂದರೆ ಯೆಹೋವನು ಈ ಪಟ್ಣವನ್ನು ನಾಶನ ಮಾಡುವದಕ್ಕೆ ಇದ್ಧಾನೆ, ಅಂದನು. ಆದರೆ ಅವನು ತನ್ನ ಅಳಿಯಂದಿರಿಗೆ ಕುಚೋದ್ಯ ಮಾಡುವವನಾಗಿ ಕಾಣಿಸಿದನು. ಬೆಳಿಗ್ಯೆ ದೂತರು ಲೋಟನನ್ನು ತ್ವರೆ ಪಡಿಸಿ: ನೀನು ಈ ಪಟ್ಣದ ಅಕ್ರಮದಿಂದ ನಾಶವಾಗದ ಹಾಗೆ ಎದ್ದು, ನಿನ್ನ ಹೆಂಡತಿಯನ್ನೂ ನಿನ್ನ ಇಬ್ಬರು ಕುಮಾರ್ತೆಗಳನ್ನೂ ತಕ್ಕೋ, ಅಂದರು. ಅವನು ತಡ ಮಾಡಿದಾಗ, ಯೆಹೋವನು ಅವನನ್ನು ಕನಿಕರಿಸಿದ್ದರಿಂದ, ಆ ದೂತರು ಅವನ ಕೈಯನ್ನೂ ಅವನ ಹೆಂಡತಿಯ

ಕೈಯನ್ನೂ ಅವನ ಇಬ್ಬರು ಕುಮಾರ್ತೆಗಳ ಕೈಯನ್ನೂ ಹಿಡಿದು, ಅವರನ್ನು ಹೊರಗೆ ತಂದು, ಪಟದ ಹೊರಗೆ ಬಿಟ್ಟರು. ಅವರನ್ನು ಹೊರಗೆ ತಂದ ಮೇಲೆ ಆದದ್ದೇನಂದರೆ: ನಿನ್ನ ಪ್ರಾಣಕ್ಕೋಸ್ಕರ ತಪ್ಪಿಸಿಕೋ, ನೀನು ಹಿಂದಕ್ಕೆ ನೋಡ ಬೇಡ, ಸುತ್ತಲಿರುವ ಶೀಮೆಯಲ್ಲೆಲ್ಲಾ ನಿಂತು ಕೊಳ್ಳ ಬೇಡ, ನೀನು ನಾಶವಾಗದ ಹಾಗೆ ಬೆಟ್ಟಕ್ಕೆ ತಪ್ಪಿಸಿ ಕೊಂಡು ಹೋಗು, ಅಂದನು. ಲೋಟನು ಅವರಿಗೆ: ಹಾಗಲ್ಲ, ಇಗೋ, ಈ ಪಟ್ಣವು, ಅದಕ್ಕೆ ಓಡಿ ಹೋಗುವ ಹಾಗೆ, ಸಮೀಪವಾಗಿದೆ. ಅದು ಸಣ್ಣದಲ್ಲವೋ? ಹಾಗೆ ನನ್ನ ಪ್ರಾಣ ಬದುಕುವದು. ಅವನವನಿಗೆ: ಇಗೋ, ಈ ವಿಷಯದಲ್ಲಿಯೂ ನಿನ್ನ ಮುಖದಾಕ್ಷಿಣ್ಯ ನೋಡಿದ್ದೇನೆ; ತ್ವರೆ ಪಟ್ಟು, ಅಲ್ಲಿಗೆ ತಪ್ಪಿಸಿ ಕೊಂಡು ಹೋಗು ಎಂದು ಹೇಳಿದನು. ಆಗ ಭೂಮಿಯ ಮೇಲೆ ಸೂರ್ಯನು ಉದಯಿಸಿದಾಗ, ಲೋಟನು ಚೋವರಿಗೆ ಬಂದನು. ಆಗ ಯೆಹೋವನು ಸೊದೋಮಿನ ಮೇಲೆಯೂ ಗಮೋರದ ಮೇಲೆಯೂ ಗಂಧಕವ



ನ್ನೂ ಬೆಂಕಿಯನ್ನೂ ಯೆಹೋವನ ಕಡೆಯಿಂದ ಆಕಾಶದಿಂದ ಸುರಿಸಿ, ಆ ಪಟ್ಣಗಳನ್ನೂ ಸುತ್ತಲಿರುವ ಶೀಮೆ ಎಲ್ಲಾನ್ನೂ ಪಟ್ಣಗಳ ನಿವಾಸಿಗಳನ್ನೂ ಭೂಮಿಯ ಬೆಳೆಯನ್ನೂ ಹಾಳು ಮಾಡಿದನು. ಆದರೆ ಲೋಟನ ಹೆಂಡತಿ ತನ್ನ ಹಿಂದಕ್ಕೆ ನೋಡಿ, ಉಪ್ಪಿನ ಸ್ತಂಭವಾದಳು. ಅಬ್ರಹಾಮನು ತಾನು ಯೆಹೋವನ ಸನ್ನಿಧಿಯಲ್ಲಿ ನಿಂತಿದ್ದ ಸ್ಥಳಕ್ಕೆ ಬೆಳಿಗ್ಗೆ ಬಂದು, ಸೊದೋಮ್ ಗಮೋರಗಳ ಕಡೆಗೂ, ಸುತ್ತಲಿರುವ

ಎಲ್ಲಾ ದೇಶದ ಕಡೆಗೂ ನೋಡಿದಾಗ, ಇಗೋ, ಭೂಮಿಯ ಹೊಗೆಯು ಆವಿಗೆಯ ಹೊಗೆಯ ಹಾಗೆ ಏರಿತು. [ಈಗ ಆ ಶೀಮೆಯಲ್ಲಿ ಮರಣದ ಸಮುದ್ರವು ಉಂಟು.]

II. 71. III. 29. 32.

---

## ೮. ಇಷ್ಮಯೇಲನು.

(ಉತ್ಪತ್ತಿ. ೨೧.)

ಅಬ್ರಹಾಮನು ೮೬ ವರುಷದವನಾಗಿರುವಾಗ ಹಾಗರಳಿಂದ ಇಷ್ಮಯೇಲನೆಂಬ ಮಗನು ಅವನಿಗೆ ಹುಟ್ಟಿದನು.

ಇದಲ್ಲದೆ ಕರ್ತನು ಸಾರಳನ್ನು, ತಾನು ಹೇಳಿದ ಹಾಗೆ, ದರ್ಶಿಸಿದನು. ಹೀಗೆ ಅವಳು ಅಬ್ರಹಾಮನಿಗೆ, ಅವನ ಮುದಿ ಪ್ರಾಯದಲ್ಲಿ (ಅವನು ೧೦೦ ವರುಷದವನಾಗಿರುವಾಗ) ಒಬ್ಬ ಮಗನನ್ನು ಹೆತ್ತಳು. ಅಬ್ರಹಾಮನು ಅವನಿಗೆ ಇಸಾಕನೆಂದು ಹೆಸರಿಟ್ಟನು. ಮತ್ತು ದೇವರು ತನಗೆ ಅಪ್ಪಣೆ ಕೊಟ್ಟ ಹಾಗೆ ತನ್ನ ಮಗನಾದ ಇಸಾಕನನ್ನು ಎಂಟನೆ ದಿವಸದಲ್ಲಿ ಪರಿಛೇದನೆ ಮಾಡಿದನು. ಆ ಮೇಲೆ ಸಾರಳು ಹಾಗರಳ ಮಗನು ಹಾಸ್ಯ ಮಾಡುವದನ್ನು ನೋಡಿ, ಅಬ್ರಹಾಮನಿಗೆ: ಈ ದಾಸಿಯನ್ನೂ ಅವಳ ಮಗನನ್ನೂ ಹೊರಗೆ ಹಾಕು, ಯಾಕಂದರೆ ಈ ದಾಸಿಯ ಮಗನು ನನ್ನ ಮಗನಾದ ಇಸಾಕನ ಸಂಗಡ ಬಾಧ್ಯನಾಗಿರ ಕೂಡದು, ಅಂದಳು. ಈ ಮಾತು ಅಬ್ರಹಾಮನಿಗೆ ಅವನ ಮಗನಿಗೋಸ್ಕರ ಬಹು ದುಃಖಕರವಾಗಿ ತೋರಿತು. ಆದರೆ ದೇವರು ಅಬ್ರಹಾಮನಿಗೆ: ಹುಡುಗನಿಗೋಸ್ಕರವೂ ನಿನ್ನ ದಾಸಿಗೋಸ್ಕರವೂ ನಿನಗೆ ದುಃಖಕರವಾಗಿ ತೋಚದೆ ಇರಲಿ; ಸಾರಳು ನಿನಗೆ ಹೇಳಿದ ಸಮಸ್ತವನ್ನು ಕೇಳು; ಯಾಕಂದರೆ ಇಸಾಕನಲ್ಲಿ ನಿನ್ನ ಬೀಜ ಕರೆಯಲ್ಪಡುವದು. ಇದಲ್ಲದೆ ದಾಸಿಯ ಮಗನನ್ನು ಸಹ, ಅವನು ನಿನ್ನ ಬೀಜವಾಗಿರುವದರಿಂದ, ಜನಾಂಗವಾಗ ಮಾ

ಡುವೆನು, ಅಂದನು. ಆಗ ಅಬ್ರಹಾಮನು ಬೆಳಿಗ್ಯೆ ಎದ್ದು, ರೊಟ್ಟಿಯನ್ನೂ ನೀರಿನ ತಿತ್ತಿಯನ್ನೂ ತೆಗದು ಕೊಂಡು, ಹಾಗರಳ ಹೆಗಲಿನ ಮೇಲೆ ಹೊರಿಸಿ, ಆ ಹುಡುಗನ ಸಂಗಡ ಅವಳನ್ನು ಕಳುಹಿಸಿ ಬಿಟ್ಟನು. ಅವಳು ಹೋಗಿ, ಬೆರ್ಷೇಬದ ಕಾಡಿನಲ್ಲಿ ಮಾರ್ಗ ತಪ್ಪಿ, ತಿರುಗುತ್ತಿದ್ದಳು. ಆ ತಿತ್ತಿಯೊಳಗೆ ನೀರು ಮುಗಿದಾಗ ಅವಳು ತನ್ನ ಮಗನನ್ನು ಒಂದು ಗಿಡದ ಕೆಳಗೆ ಹಾಕಿ, ಹೋಗಿ, ಬಿಲ್ಲೆಸಿಕೆಯ ದೂರದಲ್ಲಿ ಕೂತು ಕೊಂಡಳು; ಯಾಕಂದರೆ: ನಾನು ಮಗುವು ಸಾಯುವ



ದನ್ನು ನೋಡದೆ ಇರಲೆಂದು ಹೇಳಿದಳು; ಮತ್ತು ಅವಳು ತನ್ನ ಶಬ್ದವನ್ನೆತ್ತಿ ಅತ್ತಳು. ಆಗ ದೇವರು ಆ ಹುಡುಗನ ಶಬ್ದವನ್ನು ಕೇಳಿದನು. ಮತ್ತು ದೇವರ ದೂತನು ಆಕಾಶದೊಳಗಿಂದ ಹಾಗರಳನ್ನು ಕರೆದು: ಹಾಗರಳೇ, ನಿನಗೇನು? ಅಂಜ ಬೇಡ; ಎದ್ದು, ಹುಡುಗನನ್ನು ಎತ್ತಿ ಹಿಡುಕೋ; ಯಾಕಂದರೆ ಅವನನ್ನು ದೊಡ್ಡ ಜನಾಂಗವಾಗ ಮಾಡುವೆನು, ಅಂದನು. ಮತ್ತು ದೇವರು ಅವಳ ಕಣ್ಣುಗಳನ್ನು ತೆರೆದನು; ಅವಳು ನೀರಿನ ಭಾವಿಯನ್ನು ನೋಡಿ, ಹೋಗಿ, ಆ ತಿತ್ತಿಯಲ್ಲಿ ನೀರು ತುಂಬಿಸಿ, ಹುಡುಗನಿಗೆ ಕುಡಿಸಿದಳು.

ಮತ್ತು ದೇವರು ಆ ಹುಡುಗನ ಸಂಗಡ ಇದ್ದನು. ಅವನು ಬೆಳದು, ಅರಣ್ಯದಲ್ಲಿ ವಾಸ ಮಾಡಿ, ಬಿಲ್ಲುಗಾರನಾದನು. [ಇಷ್ಮ

ಯೇಲನಿಂದ ೧೨ ಮಂದಿ ಅಧಿಪತಿಗಳು ಹುಟ್ಟಿದರು. ಅರಬಿಯರು ಅವನ ಸಂತತಿಯವರು ಆಗಿರುತ್ತಾರೆ.]

III. 51. 44

---

## ೧೦. ಇಸಾಕನು.

(ಉತ್ಪತ್ತಿ. ೨೨.)

ಇವುಗಳಾದ ಮೇಲೆ ಆದದ್ದೇನಂದರೆ, ದೇವರು ಅಬ್ರಹಾಮನನ್ನು ಶೋಧಿಸಿದನು. ಅವನಿಗೆ: ಅಬ್ರಹಾಮನೇ, ಎಂದು ಕರೆಯುವಾಗ, ಅವನು: ಇಗೋ, ಇದ್ದೇನೆ, ಅಂದನು. ಆಗ ದೇವರು: ನೀನು ಪ್ರೀತಿ ಮಾಡುವ ನಿನ್ನ ಒಬ್ಬನೇ ಮಗನಾಗಿರುವ ಇಸಾಕನನ್ನು ತಕ್ಕೊಂಡು, ಮೊರೀಯ ದೇಶಕ್ಕೆ ಹೋಗಿ, ಅಲ್ಲಿ ಅವನನ್ನು ನಾನು ನಿನಗೆ ಹೇಳುವ ಒಂದು ಬೆಟ್ಟದ ಮೇಲೆ ಹೋಮವಾಗಿ ಅರ್ಪಿಸು, ಅಂದನು. ಆಗ ಅಬ್ರಹಾಮನು ಬೆಳಿಗ್ಯೆ ಎದ್ದು, ತನ್ನ ಕತ್ತೆಗೆ ತಡಿ ಕಟ್ಟಿ, ಇಬ್ಬರು ಸೇವಕರನ್ನೂ ತನ್ನ ಮಗನಾದ ಇಸಾಕನನ್ನೂ ಕರಕೊಂಡು, ಬಲಿಯ ಕಟ್ಟಿಗೆಯನ್ನೂ ಕಡಿದು, ಎದ್ದು, ದೇವರು ತನಗೆ ಹೇಳಿದ ಸ್ಥಳಕ್ಕೆ ಹೋದನು. ಮೂರನೇ ದಿವಸದಲ್ಲಿ ಅಬ್ರಹಾಮನು ತನ್ನ ಕಣ್ಣುಗಳನ್ನು ಎತ್ತಿ, ಆ ಸ್ಥಳವನ್ನು ದೂರದಿಂದ ನೋಡಿದನು. ಆಗ ಅಬ್ರಹಾಮನು ತನ್ನ ಸೇವಕರಿಗೆ: ಕತ್ತೆಯ ಸಂಗಡ ಇಲ್ಲಿ ನಿಂತುಕೊಳ್ಳಿರಿ; ನಾನೂ ಹುಡುಗನೂ ಅಲ್ಲಿಗೆ ಹೋಗಿ, ಆರಾಧನೆ ಮಾಡಿ, ನಿಮ್ಮ ಬಳಿಗೆ ತಿರಿಗಿ ಬರುತ್ತೇವೆ, ಅಂದನು. ಮತ್ತು ಅಬ್ರಹಾಮನು ಬಲಿಯ ಕಟ್ಟಿಗೆಯನ್ನು ತಕ್ಕೊಂಡು, ತನ್ನ ಮಗನಾದ ಇಸಾಕನ ಮೇಲೆ ಇಟ್ಟು, ಬೆಂಕಿಯನ್ನೂ ಕತ್ತಿಯನ್ನೂ ತನ್ನ ಕೈಯಲ್ಲಿ ತಕ್ಕೊಂಡನು; ಹೀಗೆ ಅವರಿಬ್ಬರು ಕೂಡಾ ಹೋದರು. ಆಗ ಇಸಾಕನು ತನ್ನ ತಂದೆಯಾದ ಅಬ್ರಹಾಮನಿಗೆ: ನನ್ನ ತಂದೆಯೇ, ಇಗೋ, ಬೆಂಕಿಯೂ ಕಟ್ಟಿಗೆಯೂ ಉಂಟು; ಆದರೆ ಹೋಮಕ್ಕೋಸ್ಕರ ಕುರಿಯು ಎಲ್ಲಿ?

ಅಂದನು. ಅಬ್ರಹಾಮನು: ನನ್ನ ಮಗನೇ, ದೇವರು ತನಗೆ ಹೋಮಕ್ಕೋಸ್ಕರ ಕುರಿಯನ್ನು ನೋಡಿ ಕೊಳ್ಳುವನು, ಅಂದನು. ಅವರು ದೇವರು ಹೇಳಿದ ಸ್ಥಳಕ್ಕೆ ಬಂದಾಗ, ಅಬ್ರಹಾಮನು ಅಲ್ಲಿ ಒಂದು ಪೀಠವನ್ನು ಕಟ್ಟಿ, ಕಟ್ಟಿಗೆಯನ್ನು ಒಟ್ಟಿ, ತನ್ನ ಮಗನಾದ ಇಸಾಕನನ್ನು ಕಟ್ಟಿ, ಪೀಠದಲ್ಲಿ ಕಟ್ಟಿಗೆಯ ಮೇಲೆ ಇಟ್ಟನು. ಮತ್ತು ಅಬ್ರಹಾಮನು ಕೈಚಾಚಿ, ತನ್ನ ಮಗನನ್ನು ಕಡಿಯುವದಕ್ಕೆ ಕತ್ತಿ ತಕ್ಕೊಂಡನು. ಆಗ ಯೆಹೋವನ ದೂತನು ಆಕಾಶದೊಳಗಿಂದ ಅವನ



ನ್ನು ಕರೆದು: ಅಬ್ರಹಾಮನೇ, ಅಬ್ರಹಾಮನೇ, ಹುಡುಗನ ಮೇಲೆ ಕೈ ಚಾಚ ಬೇಡ; ಅವನಿಗೆ ಏನೂ ಮಾಡ ಬೇಡ; ಯಾಕಂದರೆ ನೀನು ದೇವರಿಗೆ ಭಯ ಪಡುತ್ತೀ ಎಂದು ಈಗ ತಿಳಿದಿದ್ದೇನೆ. ನಿನ್ನ ಒಬ್ಬನೇ ಮಗನನ್ನು ನನಗೆ ಕೊಡ ತಡೆಯಲಿಲ್ಲ, ಅಂದನು. ಆಗ ಅಬ್ರಹಾಮನು ತನ್ನ ಕಣ್ಣುಗಳನ್ನೆತ್ತಿ ನೋಡಿದನು; ಅಗೋ, ಅವನ ಹಿಂದೆ ಒಂದು ಹೋತು ಕೊಂಬುಗಳಿಂದ ಪೊದೆಯಲ್ಲಿ ಶಿಕ್ಕಿ ಕೊಂಡಿತ್ತು.

ಅಬ್ರಹಾಮನು ಹೋಗಿ, ಆ ಹೋತು ತೆಗದು ಕೊಂಡು, ಅದನ್ನು ತನ್ನ ಮಗನಿಗೆ ಬದಲಾಗಿ ಹೋಮವಾಗಿ ಅರ್ಪಿಸಿದನು. ಆಗ ಕರ್ತನ ದೂತನು ಆಕಾಶದೊಳಗಿಂದ ಎರಡನೇ ಸಾರಿ ಅಬ್ರಹಾಮನನ್ನು ಕರೆದು, ಹೇಳಿದ್ದೇನಂದರೆ:—ನೀನು ಈ ಕಾರ್ಯವನ್ನು ಮಾಡಿ, ನಿನ್ನ ಒಬ್ಬನೇ ಮಗನನ್ನು ನನಗೆ ಕೊಡ ತಡೆಯದೆ ಇದ್ದದರಿಂದ, ನಿನ್ನನ್ನು ಆಶೀರ್ವದಿಸೇ ಆಶೀರ್ವದಿಸುವೆನು; ನಿನ್ನ ಬೀಜವನ್ನು ಆಕಾಶದ ನಕ್ಷತ್ರಗಳ ಹಾಗೆಯೂ ಸಮುದ್ರದ ತೀರದಲ್ಲಿರುವ ಮರಳಿನ ಹಾಗೆಯೂ ಹೆಚ್ಚಿಸೇ ಹೆಚ್ಚಿಸುವೆನು; ನೀನು ನನ್ನ ಶಬ್ದವನ್ನು ಕೇಳಿದ್ದರಿಂದ, ಭೂಮಿಯ ಜನಾಂಗಗಳೆಲ್ಲಾ ನಿನ್ನ ಬೀಜದಿಂದ ಆಶೀರ್ವದಿಸಲ್ಪಡುವವು ಎಂದು, ನನ್ನ ಮೇಲೆ ಆಣೆ ಇಟ್ಟು ಕೊಂಡಿದ್ದೇನೆಂಬದಾಗಿ ಯೆಹೋವನು ಹೇಳಿದ್ದಾನೆ, ಅಂದನು. ಆ ಮೇಲೆ ಅಬ್ರಹಾಮನು ತನ್ನ ಸೇವಕರ ಬಳಿಗೆ ತಿರುಗಿ ಬಂದನು. ಆಗಲವರು ಎದ್ದು, ಕೂಡಾ ಬೆರ್ಷೇಬಕ್ಕೆ ಹೋದರು.

ಬಾ. 155. 14. II. 22.

---

## ೧೧. ಸಾರಳ ಮರಣವು.

(ಉತ್ಪತ್ತಿ. ೨೩.)

ಸಾರಳ ಆಯುಷ್ಯ ೧೨೭ ವರುಷವಾಗಿತ್ತು. ಮತ್ತು ಅವಳು ಕಾನಾನ್ ದೇಶದಲ್ಲಿರುವ ಹೆಬ್ರೋನೆಂಬ ಕಿರ್ಯತರ್ಬದಲ್ಲಿ ಸತ್ತಳು. ಆಗ ಅಬ್ರಹಾಮನು ಸಾರಳಿಗೋಸ್ಕರ ಗೋಳಾಡುವದಕ್ಕೂ ಅಳುವದಕ್ಕೂ ಬಂದನು. ಆ ಮೇಲೆ ಅಬ್ರಹಾಮನು ತನ್ನ ಹೆಣದ ಬಳಿಯಿಂದ ಎದ್ದು, ಹೇತನ ಮಕ್ಕಳ ಸಂಗಡ ಮಾತಾಡಿದ್ದೇನಂದರೆ:—ನಾನು ನಿಮ್ಮ ಬಳಿಯಲ್ಲಿ ಪರದೇಶಸ್ಥನೂ ಪರವಾಸಿಯೂ ಆಗಿದ್ದೇನೆ; ನನಗೆ ನಿಮ್ಮ ಬಳಿಯಲ್ಲಿ ಸಮಾಧಿಯ ಸ್ವಾಸ್ಥ್ಯವನ್ನು ಕೊಡಿರಿ; ಆಗ ನನ್ನ ಹೆಣವನ್ನು ಹೂಣಿಡುವೆನು. ಆಗ ಹೇತನ ಮಕ್ಕಳು ಆ

ಬ್ರಹಾಮನಿಗೆ ಉತ್ತರ ಕೊಟ್ಟು: ಸ್ವಾಮೀ, ನಮ್ಮ ಮಾತು ಕೇಳು; ನೀನು ನಮ್ಮ ಮಧ್ಯದಲ್ಲಿ ದೇವರ ಪ್ರಭುವಾಗಿದ್ದೀ; ನಮ್ಮ ಸಮಾಧಿಗಳೊಳಗೆ ಉತ್ತಮವಾದದರಲ್ಲಿ ನಿನ್ನ ಹೆಣವನ್ನು ಹೂಣಿಡು, ಅಂದರು. ಮತ್ತು ಅಬ್ರಹಾಮನು ಎದ್ದು, ಹೇತನ ಮಕ್ಕಳಾದ ಆ ದೇಶದ ಜನಕ್ಕೆ ಅಡ್ಡ ಬಿದ್ದು, ಅವರ ಸಂಗಡ ಮಾತಾಡಿದ್ದೇನಂದರೆ:— ನಾನು ನನ್ನ ಹೆಣವನ್ನು ಹೂಣಿಡುವ ಹಾಗೆ ಎಫ್ರೋನನು ತನ್ನ ಹೊಲದ ಅಂಚಿನಲ್ಲಿರುವ ಮಕ್ಫೆಲ ಗವಿಯನ್ನು ನನಗೆ ಕೊಡುವ ಹಾಗೆ ಅವನನ್ನು ನನಗೋಸ್ಕರ ಬೇಡಿ ಕೊಳ್ಳಿರಿ; ತಕ್ಕ ಕ್ರಯಕ್ಕೆ ಅವನು ಅದನ್ನು ನಿಮ್ಮ ಮಧ್ಯದಲ್ಲಿ ಸಮಾಧಿಯ ಸ್ವಾಸ್ಥ್ಯವಾಗಿ ನನಗೆ ಕೊಡಲಿ. ಅದಕ್ಕೆ ಎಫ್ರೋನನು ಅಬ್ರಹಾಮನಿಗೆ ಪ್ರತ್ಯುತ್ತರವಾಗಿ: ಸ್ವಾಮೀ, ಹಾಗಲ್ಲ, ನನ್ನ ಮಾತು ಕೇಳು; ಆ ಹೊಲವನ್ನೂ ಅದರಲ್ಲಿರುವ ಗವಿಯನ್ನೂ ನನ್ನ ಜನರ ದೃಷ್ಟಿಯಲ್ಲಿ ನಿನಗೆ ಕೊಡುತ್ತೇನೆ; ನಿನ್ನ ಹೆಣವನ್ನು ಹೂಣಿಡು, ಅಂದನು. ಆಗ ಅಬ್ರಹಾಮನು ಆ ದೇಶದ ಜನರ ಮುಂದೆ ಅಡ್ಡ ಬಿದ್ದು, ಎಫ್ರೋನನಿಗೆ ಹೇಳಿದ್ದೇನಂದರೆ:— ನೀನು ನನಗೆ ದಯ ಮಾಡ ಬೇಕೆಂದಿದ್ದರೆ, ನನ್ನ ಮಾತು ಕೇಳು. ಹೊಲದ ಕ್ರಯವನ್ನು ಕೊಡುತ್ತೇನೆ; ಅದನ್ನು ನನ್ನಿಂದ ತಕ್ಕೋ; ಆಗ ನನ್ನ ಹೆಣವನ್ನು ಅಲ್ಲಿ ಹೂಣಿಡುವೆನು. ಆ ಮೇಲೆ ಅಬ್ರಹಾಮನು ನಾನೂರು ಸೇಕೆಲ್ (ರೂಪಾಯಿ) ತೂಕ ಮಾಡಿ ಕೊಟ್ಟನು. ಹೀಗೆ ಮಮ್ರೆಗೆ ಎದುರಾಗಿರುವ ಮಕ್ಫೆಲದಲ್ಲಿರುವ ಎಫ್ರೋನನ ಹೊಲವೂ ಅದರಲ್ಲಿರುವ ಗವಿಯೂ ಅಬ್ರಹಾಮನಿಗೆ ಆಸ್ತಿಯಾಗಿ ಸ್ಥಿರವಾಯಿತು. ಮತ್ತು ಅಬ್ರಹಾಮನು ತನ್ನ ಹೆಂಡತಿಯಾದ ಸಾರಳನ್ನು ಆ ಹೊಲದ ಗವಿಯಲ್ಲಿ ಹೂಣಿಟ್ಟನು.

II. 51. 57.

---

# ೧೨. ಇಸಾಕನ ಮದುವೆ.

(ಉತ್ಪತ್ತಿ. ೨೪.)

೧) ಅಬ್ರಹಾಮನು ಮುದುಕನಾಗಿದ್ದನು. ಯೆಹೋವನು ಅಬ್ರಹಾಮನನ್ನು ಎಲ್ಲಾದರಲ್ಲಿ ಆಶೀರ್ವದಿಸಿ ಇದ್ದನು. ಆಗ ಅಬ್ರಹಾಮನು ತನ್ನ ಮನೆಯ ಹಿರೀ ಸೇವಕನಾದ ಎಲಿಯೇಜರನಿಗೆ ಹೇಳಿದ್ದೇನಂದರೆ:—ನಿನ್ನ ಕೈಯನ್ನು ನನ್ನ ತೊಡೆಯಡಿಯಲ್ಲಿಡು; ನೀನು ನನ್ನ ಸುತ್ತಲು ವಾಸವಾಗಿರುವ ಕಾನಾನ್ಯರ ಮಕ್ಕಳಲ್ಲಿಂದ ನನ್ನ ಮಗನಿಗೆ ಹೆಂಡತಿಯನ್ನು ತಕ್ಕೊಳ್ಳದೆ, ನನ್ನ ದೇಶಕ್ಕೂ ಬಂಧುಗಳ ಬಳಿಗೂ ಹೋಗಿ, ನನ್ನ ಮಗನಾದ ಇಸಾಕನಿಗೆ ಹೆಂಡತಿಯನ್ನು ತಕ್ಕೊಳ್ಳುವಿ ಎಂದು, ಆಕಾಶಕ್ಕೂ ಭೂಮಿಗೂ ದೇವರಾಗಿರುವ ಯೆಹೋವನ ಮೇಲೆ ನಿನ್ನನ್ನು ಪ್ರಮಾಣ ಮಾಡಿಸುತ್ತೇನೆ. ಆ ಸೇವಕನು ಅವನಿಗೆ: ಒಂದು ವೇಳೆ ನನ್ನನ್ನು ಹಿಂಬಾಲಿಸಿ ಈ ದೇಶಕ್ಕೆ ಬರುವದಕ್ಕೆ ಆ ಸ್ತ್ರೀಗೆ ಮನಸ್ಸಿಲ್ಲದೆ ಇದ್ದೀತು; ಹಾಗಾದರೆ, ನಿನ್ನ ಮಗನನ್ನು ನೀನು ಬಿಟ್ಟು ಬಂದ ದೇಶಕ್ಕೆ ತಿರಿಗಿ ತಕ್ಕೊಂಡು ಹೋಗ ಬೇಕೋ? ಅಂದನು. ಅಬ್ರಹಾಮನು ಅವನಿಗೆ ಹೇಳಿದ್ದೇನಂದರೆ:—ನನ್ನ ಮಗನನ್ನು ತಿರಿಗಿ ಅಲ್ಲಿಗೆ ತಕ್ಕೊಂಡು ಹೋಗದ ಹಾಗೆ ನೋಡಿಕೋ. ನನ್ನ ತಂದೆಯ ಮನೆಯಿಂದಲೂ ಬಂಧುಗಳ ದೇಶದೊಳಗಿಂದಲೂ ನನ್ನನ್ನು ತೆಗೆದು ಕೊಂಡು, ನನ್ನ ಸಂಗಡ ಮಾತಾಡಿ, ನಿನ್ನ ಬೀಜಕ್ಕೆ ಈ ದೇಶವನ್ನು ಕೊಡುವೆನೆಂದು ನನಗೆ ಪ್ರಾಮಾಣ ಮಾಡಿದ, ಆಕಾಶದ ದೇವರಾದ ಯೆಹೋವನೇ, ತನ್ನ ದೂತನನ್ನು ನಿನ್ನ ಮುಂದೆ ಕಳುಹಿಸುವನು; ಹೀಗೆ ನನ್ನ ಮಗನಿಗೆ ಹೆಂಡತಿಯನ್ನು ತೆಗೆದು ಕೊಳ್ಳುವಿ. ಆದರೆ ಆ ಸ್ತ್ರೀಗೆ ಬರುವದಕ್ಕೆ ಮನಸ್ಸಿಲ್ಲದಿದ್ದರೆ, ನನಗೆ ಮಾಡಿದ ಪ್ರಮಾಣದಿಂಧ ಬಿಡುಗಡೆಯಾಗಿರುವಿ; ನನ್ನ ಮಗನನ್ನು ಅಲ್ಲಿಗೆ ತಿರಿಗಿ ತಕ್ಕೊಂಡು ಹೋಗ ಬೇಡ, ಅಷ್ಟೇ. ಆಗ ಆ ಸೇವಕನು ಅವನಿಗೆ ಪ್ರಮಾಣ ಮಾಡಿದನು. ಇದಲ್ಲದೆ ಎಲಿಯೇಜರನ ಕೈಯಲ್ಲಿ

ಆತನ ಯಜಮಾನನ ಯಾವತ್ತು ಒಡವೆಗಳಿದ್ದದರಿಂದ, ಅವನು ತನ್ನ ಯಜಮಾನನ ಒಂಟೆಗಳಲ್ಲಿ ೧೦ ತಕ್ಕೊಂಡು, ಎದ್ದು, (ಪ್ರಾತು, ತಿಗ್ರಿಸೆಂಬ) ನದಿಗಳ ನಡುವೆಯ ಅರಾಮುದಲ್ಲಿರುವ ನಾಹೋರನ ಪಟ್ಣಕ್ಕೆ ಹೋದನು. ಮತ್ತು ಸಂಜೇ ವೇಳೆಯಲ್ಲಿ, ನೀರು ಶೇದುವ ಹೆಂಗಸರು ಹೊರಗೆ ಬರುವ ವೇಳೆಯಲ್ಲಿ, ಪಟ್ಣದ ಹೊರಗೆ ನೀರಿನ ಭಾವಿಯ ಬಳಿಯಲ್ಲಿ ಒಂಟೆಗಳನ್ನು ಮಲಗಿಸಿ, ಹೇಳಿ ಕೊಂಡದ್ದೇನಂದರೆ:—ನನ್ನ ಯಜಮಾನನಾದ ಅಬ್ರಹಾಮನ ದೇವರಾಗಿರುವ ಯೆಹೋವನೇ, ದಯ ಮಾಡಿ ಈ ಹೊತ್ತು ನನಗೆ ಅನುಕೂಲವನ್ನು ಉಂಟು ಮಾಡಿ, ನನ್ನ ಯಜಮಾನನಾದ ಅಬ್ರಹಾಮನಿಗೆ ಕೃಪೆ ಮಾಡು. ಇಗೋ, ನಾನು ನೀರಿನ ಬುಗ್ಗೆಯ ಬಳಿಯಲ್ಲಿ ನಿಂತು ಕೊಂಡಿದ್ದೇನೆ; ಊರಿನ ಜನರ ಕುಮಾರ್ತೆಗಳು ನೀರು ಶೇದುವದಕ್ಕೆ ಹೊರಗೆ ಬರುತ್ತಾರೆ. ನಿನ್ನ ಕೊಡವನ್ನು ನಾನು ಕುಡಿಯುವ ಹಾಗೆ, ದಯ ಮಾಡಿ ಇಳಿಸು ಎಂದು ನಾನು ಹೇಳಿದ ಮೇಲೆ, ಯಾವ ಹುಡುಗಿ, ನೀನು ಕುಡಿ, ನಿನ್ನ ಒಂಟೆಗಳಿಗೆ ಕುಡಿಯ ಕೊಡುತ್ತೇನೆ ಎಂದು ಹೇಳುವಳೊ, ಅವಳನ್ನೇ ನಿನ್ನ ಸೇವಕನಾದ ಇಸಾಕನಿಗೆ ನೇಮಿಸಿದ್ದೀ ಎಂಬುವದಾಗಲಿ; ನೀನು ನನ್ನ ಯಜಮಾನನಿಗೆ ಕೃಪೆ ಮಾಡಿದಿ ಎಂದು ಇದರಿಂದ ತಿಳುಕೊಳ್ಳುವೆನು. ಆಗ ಅವನು ಈ ಮಾತು ಮುಗಿಸುವದಕ್ಕಿಂತ ಮುಂಚೆ ಆದದ್ದೇನಂದರೆ, ಅಗೋ, ಅಬ್ರಹಾಮನ ಸಹೋದರನಾದ ನಾಹೋರನ ಹೆಂಡತಿಯಾಗಿರುವ ಮಿಲ್ಕಳ ಮಗನಾದ ಬೆತುವೇಲನಿಗೆ ಹುಟ್ಟಿದ ರೆಬೆಕ್ಕಳು ಹೊರಗೆ ಬಂದಳು. ಆ ಹುಡುಗಿ ನೋಟಕ್ಕೆ ಬಹು ಸೌಂದರ್ಯವಾಗಿರುವ ಕನ್ಯೆಯಾಗಿದ್ದಳು. ಅವಳು ಬುಗ್ಗೆಯ ಹತ್ತರ ಇಳಿದು ಹೋಗಿ, ತನ್ನ ಕೊಡವನ್ನು ತುಂಬಿ ಕೊಂಡು, ಮೇಲೆ ಬಂದಳು. ಆಗ ಆ ಸೇವಕನು ಅವಳೆದುರಿಗೆ ಓಡಿ: ದಯ ಮಾಡಿ ನಿನ್ನ ಕೊಡದೊಳಗಿಂದ ಸ್ವಲ್ಪ ನೀರು ನನಗೆ ಕುಡಿಯ ಕೊಡು, ಅಂದನು. ಅವಳು: ಅಯ್ಯಾ, ಕುಡಿ ಎಂದು ಹೇಳಿ, ತ್ವರೆ ಪಟ್ಟು, ತನ್ನ ಕೊಡವನ್ನು ಕೈಯ ಮೇಲೆ ಇಳಿಸಿ, ಅವನಿಗೆ ಕುಡಿಯ ಕೊ



ಟ್ಟಳು. ಅವನಿಗೆ ಕುಡಿಯ ಕೊಟ್ಟಾದ ಮೇಲೆ, ಅವಳು: ನಿನ್ನ ಒಂಟೆಗಳಿಗೂ, ಅವು ಕುಡಿದು ತೀರುವ ಪರ್ಯಂತರ, ಶೇದುತ್ತೇನೆ ಎಂದು ಹೇಳಿ, ತ್ವರೆ ಪಟ್ಟು, ತನ್ನ ಕೊಡವನ್ನು ದೋಣಿಯಲ್ಲಿ ಹೊಯಿದು, ಮತ್ತೂ ಶೇದುವದಕ್ಕೆ ಭಾವಿಯ ಬಳಿಗೆ ಓಡಿ, ಅವನ ಎಲ್ಲಾ ಒಂಟೆಗಳಿಗೋಸ್ಕರ ಶೇದಿದಳು. ಆಗ ಆ ಮನುಷ್ಯನು, ಯೆಹೋವನು ತನ್ನ ಮಾರ್ಗವನ್ನು ಅನುಕೂಲ ಮಾಡಿದನೋ? ಏನೋ? ಎಂದು ತಿಳಿಯುವದಕ್ಕೆ, ಮಾತಾಡದೆ, ಅವಳ ಮೇಲೆ ದೃಷ್ಟಿ ಇಟ್ಟನು. ಒಂಟೆಗಳು ಕುಡಿದಾದ ಮೇಲೆ ಆ ಮನುಷ್ಯನು ಚಿನ್ನದ ಮೂಗುತಿಯನ್ನೂ ಎರಡು ಕಡಗಗಳನ್ನೂ ತೆಗೆದು, ಅವಳಿಗೆ ತೊಡಿಸಿದನು. ಮತ್ತೆ: ನೀನು ಯಾರ ಮಗಳು? ನನಗೆ ಹೇಳು; ನಿನ್ನ ತಂದೆಯ ಮನೆಯಲ್ಲಿ ನಮಗೆ ಇಳು ಕೊಳ್ಳುವ ಸ್ಥಳ ಉಂಟೋ? ಅಂದನು. ಅವಳವನಿಗೆ: ನಾನು ಬೆತುವೇಲನ ಮಗಳು; ಮತ್ತು ಹುಲ್ಲೂ ಮೇವೂ ನಮ್ಮಲ್ಲಿ ಬಹಳ ಉಂಟು, ಇಳು ಕೊಳ್ಳುವದಕ್ಕೆ ಸ್ಥಳ ಸಹ ಉಂಟು ಎಂದು ಅವನಿಗೆ ಹೇಳಿದಳು. ಆಗ ಆ ಮನುಷ್ಯನು ಬಾಗಿ, ಯೆಹೋವನಿಗೆ ಅಡ್ಡ ಬಿದ್ದು: ನನ್ನ ಯಜಮಾನನಾದ ಅಬ್ರಹಾಮನ ದೇವರಾದ ಯೆಹೋವನಿಗೆ ಸ್ತೋತ್ರವಾಗಲಿ; ಅವನು ನನ್ನ ಯಜಮಾನನಿಗೆ ಮಾಡುವ ಕೃಪೆಯನ್ನೂ ಸತ್ಯವನ್ನೂ ಬಿಡಲಿಲ್ಲ;

ನಾನು ಮಾರ್ಗದಲ್ಲಿ ಇರಲಾಗಿ ಯೆಹೋವನು ನನ್ನನ್ನು ನನ್ನ ಯಜಮಾನನ ಸಹೋದರರ ಮನೆಗೆ ನಡಿಸಿದ್ಧಾನೆ, ಅಂದನು.

೨) ಆಗ ಆ ಹುಡುಗಿ ಓಡಿ, ಈ ಮಾತುಗಳನ್ನು ತನ್ನ ಮನೆಯಲ್ಲಿ ತಿಳಿಸಿದಳು. ಆ ಮೇಲೆ ರೆಬೆಕ್ಕಳ ಸಹೋದರನಾದ ಲಾಬಾನನು ಬುಗ್ಗೆಯ ಹತ್ತರ ಇರುವ ಆ ಮನುಷ್ಯನ ಬಳಿಗೆ ಹೊರಗೆ ಬಂದು, ಅವನಿಗೆ: ಯೆಹೋವನಿಂದ ಆಶೀರ್ವದಿಸಲ್ಪಟ್ಟವನೇ, ಬಾ, ಯಾಕೆ ಹೊರಗೆ ನಿಂತಿರುತ್ತೀ? ಅಂದನು. ಆಗ ಎಲಿಯೇಜರನು ಮನೆಗೆ ಬಂದನು. ಮತ್ತು ಊಟಕ್ಕೆ ಅವನ ಮುಂದೆ ಇಟ್ಟಾಗ, ಅವನು: ನಾನು ನನ್ನ ಮಾತುಗಳನ್ನು ಹೇಳುವ ಮಟ್ಟಿಗೂ ಉಣ್ಣುವದಿಲ್ಲ, ಅಂದನು. ಅದಕ್ಕೆ ಲಾಬಾನನು: ಹೇಳು, ಅಂದಾಗ, ಅವನು ಅಬ್ರಹಾಮನ ಎಲ್ಲಾ ವರ್ತಮಾನವನ್ನೂ ತಾನು ಬಂದ ಕಾರಣವನ್ನೂ ಹೇಳಿ: ಹಾಗಾದರೆ ಈಗ ನೀವು ನನ್ನ ಯಜಮಾನನಿಗೆ ಕೃಪೆಯನ್ನೂ ಸತ್ಯವನ್ನೂ ನಡಿಸ ಬೇಕಂದರೆ, ನನಗೆ ತಿಳಿಸಿರಿ; ಇಲ್ಲದಿದ್ದರೆ ನನಗೆ ತಿಳಿಸಿರಿ ಎಂದು ಹೇಳಿದನು. ಆಗ ಲಾಬಾನನೂ ಬೆತುವೇಲನೂ ಪ್ರತ್ಯುತ್ತರವಾಗಿ ಹೇಳಿದ್ದೇನಂದರೆ:—ಯೆಹೋವನಿಂದ ಈ ಕಾರ್ಯವು ಉಂಟಾಯಿತು; ಇಗೋ, ರೆಬೆಕ್ಕಳು ನಿನ್ನ ಮುಂದೆ ಇದ್ದಾಳೆ; ಅವಳನ್ನು ತಕ್ಕೊಂಡು ಹೋಗು. ಯೆಹೋವನು ಹೇಳಿದ ಹಾಗೆ ಅವಳು ನಿನ್ನ ಯಜಮಾನನ ಮಗನಿಗೆ ಹೆಂಡತಿಯಾಗಲಿ. ಎಲಿಯೇಜರನು ಈ ಮಾತುಗಳನ್ನು ಕೇಳಿದಾಗ ಯೆಹೋವನಿಗೆ ಅಡ್ಡ ಬಿದ್ದನು. ಮತ್ತು ಬೆಳ್ಳಿಯ ಭಂಗಾರದ ಒಡವೆಗಳನ್ನೂ ವಸ್ತ್ರಗಳನ್ನೂ ಹೊರಗೆ ತಂದು, ರೆಬೆಕ್ಕಳಿಗೂ ಅವನ ಸಹೋದರನಿಗೂ ತಾಯಿಗೂ ಕೊಟ್ಟನು. ಆಗ ಆ ಸೇವಕನು ಅವರಿಗೆ: ನನ್ನನ್ನು ತಡೆಯ ಬೇಡಿರಿ. ನನ್ನ ಯಜಮಾನನ ಬಳಿಗೆ ಹೋಗುವ ಹಾಗೆ ನನ್ನನ್ನು ಕಳುಹಿಸಿರಿ, ಅಂದಾಗ, ಅವರು ಹುಡುಗಿಯನ್ನು ಕರೆದು, ಅವಳಿಗೆ: ಈ ಮನುಷ್ಯನ ಸಂಗಡ ಹೋಗುವಿಯೋ? ಅಂದರು; ಅವಳು: ಹೋಗುವೆನು, ಅಂದಳು. ಆಗ ಅವರು ಅವಳನ್ನು ಆಶೀರ್ವದಿಸಿ, ಅವಳಿಗೆ ಹೇಳಿದ್ದೇನಂದರೆ:—ನಮ್ಮ ಸಹೋ

ದರಿಯೇ, ನೀನು ಸಹಸ್ರ ಸಹಸ್ರಗಳಾಗು; ನಿನ್ನ ಬೀಜವು ಅವರ ಹಗೆಯವರ ಬಾಗಲನ್ನು ಸ್ವತಂತ್ರಿಸಿ ಕೊಳ್ಳಲಿ. ಆ ಮೇಲೆ ಆ ಸೇವಕನು ರೆಬೆಕ್ಕಳನ್ನು ಕರಕೊಂಡು ಹೋದನು. ಇಸಾಕನು ಸಾಯಂಕಾಲದಲ್ಲಿ ಹೊಲದಲ್ಲಿ ಧ್ಯಾನಿಸುವದಕ್ಕೆ ಹೋದಾಗ, ತನ್ನ ಕಣ್ಣುಗಳನ್ನೆತ್ತಿ ನೋಡಲು, ಅವರು ಬರುವದನ್ನು ಕಂಡನು. ರೆಬೆಕ್ಕಳು ಇಸಾಕನನ್ನು ನೋಡಿದಾಗ, ಒಂಟೆಯಿಂದಿಳಿದು, ಆ ಸೇವಕನಿಗೆ: ನಮಗೆದುರಾಗಿ ಬರುವ ಆ ಮನುಷ್ಯನು ಯಾರು? ಅಂದಳು. ಸೇವಕನು: ಅವನೇ ನನ್ನ ಯಜಮಾನನು ಅಂದಾಗ, ಅವಳು ಮುಸಕು ಹಾಕಿ ಕೊಂಡಳು. ಆಗ ಸೇವಕನು ಇಸಾಕನಿಗೆ ತಾನು ಮಾಡಿದ ಕಾರ್ಯಗಳನ್ನೆಲ್ಲಾ ತಿಳಿಸಿದನು. ಇಸಾಕನು ಅವಳನ್ನು ತನ್ನ ತಾಯಿಯಾದ ಸಾರಳ ಗುಡಾರಕ್ಕೆ ಕರಕೊಂಡು, ಅವಳನ್ನು ಹೆಂಡತಿಯಾಗಿ ಅಂಗೀಕರಿಸಿ, ಪ್ರೀತಿ ಮಾಡಿದನು. ಹೀಗೆ ಇಸಾಕನು ತನ್ನ ತಾಯಿಯ ವಿಷಯವಾಗಿ ಆದರಣೆ ಹೊಂದಿದನು.

II. 72. 36. 41.

---

## ೧೩. ಯಾಕೋಬನೂ ಏಸಾವನೂ.

(ಉತ್ಪತ್ತಿ. ೨೫. ೨೭.)

೧) ಇಸಾಕನು ರೆಬೆಕ್ಕಳನ್ನು ತನಗೆ ಹೆಂಡತಿಯಾಗಿ ತಕ್ಕೊಳ್ಳುವಾಗ ನಾಲ್ವತ್ತು ವರುಷದವನಾಗಿದ್ದನು. ಮತ್ತು ಅವಳು ಬಂಜೆಯಾಗಿದ್ದದರಿಂದ, ಯೆಹೋವನನ್ನು ಬೇಡಿ ಕೊಂಡನು. ಯೆಹೋವನು ಅವನ ಬಿನ್ನಹವನ್ನು ಆಲೈಸಿದನು; ಆಗ ರೆಬೆಕ್ಕಳು ಬಸುರಾದಳು. ಇದಲ್ಲದೆ ಅವಳ ಗರ್ಭದಲ್ಲಿ ಮಕ್ಕಳು ನೂಕಿ ಕೊಂಡಾಗ, ಅವಳು ಯೆಹೋವನ ಬಳಿಗೆ ವಿಚಾರಿಸಿ ಕೊಳ್ಳುವದಕ್ಕೆ ಹೋದಳು. ಯೆಹೋವನು ಅವಳಿಗೆ ಹೇಳಿದ್ದೇನಂದರೆ:—ನಿನ್ನ ಹೊಟ್ಟೆಯಲ್ಲಿ ಎರಡು ಜನಾಂಗಗಳು ಅವೆ. ನಿನ್ನಗರ್ಭದೊಳಗಿಂದ ಎರಡು ಪ್ರಜೆಗಳು

ಬೇರೆ ಆಗುವವು. ಒಂದು ಪ್ರಜೆಗಿಂತ ಇನ್ನೊಂದು ಪ್ರಜೆ ಬಲಗೊಳ್ಳುವದು. ಮತ್ತು ಹಿರಿಯನು ಕಿರಿಯನನ್ನು ಸೇವಿಸುವನು. ಅವಳು ಹೆರುವದಕ್ಕೆ ದಿನಗಳು ಪೂರ್ತಿಯಾದಾಗ, ಅವಳು ಅವಳಿ ಮಕ್ಕಳು ಹೆತ್ತಳು. ಮೊದಲನೆಯವನು ಕೆಂಪಾಗಿಯೂ ಎಲ್ಲಾ ರೋಮ ವಸ್ತ್ರದ ಹಾಗೆ ಇರುವವನಾಗಿಯೂ ಇದ್ದದರಿಂದ, ಅವನಿಗೆ ಏಸಾವನೆಂದು ಹೆಸರಿಟ್ಟರು. ಅವನ ತಮ್ಮನು ಏಸಾವನ ಹಿಮ್ಮಡಿಯನ್ನು ಕೈಯಿಂದ ಹಿಡು ಕೊಂಡದರಿಂದ ಅವನಿಗೆ ಯಾಕೋಬನೆಂದು ಹೆಸರಿಟ್ಟರು. (ಯಾಕೋಬನು ಅಂದರೆ ಹಿಮ್ಮಡಿಯನ್ನು ಹಿಡು ಕೊಳ್ಳುವವನು.) ರೆಬೆಕ್ಕಳು ಇವರನ್ನು ಹೆರುವಾಗ ಇಸಾಕನು ೬೦ ವರುಷದವನಾಗಿದ್ದನು. ಆ ಹುಡುಗರು ಬೆಳೆದಾಗ ಏಸಾವನು ಬೇಟೆಗಾರನೂ ಅಡವಿಯ ಮನುಷ್ಯನೂ ಆಗಿದ್ದನು; ಯಾಕೋಬನು ಗುಡಾರಗಳಲ್ಲಿ ವಾಸ ಮಾಡುವ ಗುಣವಂತನಾದ ಮನುಷ್ಯನಾಗಿದ್ದನು. ಮತ್ತು ಇಸಾಕನು ಅವನು ಬೇಟೆಯಾಡಿದ್ದನ್ನು ತಿಂದದರಿಂದ ಏಸಾವನನ್ನು ಪ್ರೀತಿ ಮಾಡಿದನು. ಆದರೆ ರೆಬೆಕ್ಕಳು ಯಾಕೋಬನನ್ನು ಪ್ರೀತಿ ಮಾಡಿದಳು.

ಇದಲ್ಲದೆ ಯಾಕೋಬನು ಒಂದು ಅಡಿಗೆಯನ್ನು ಅಟ್ಟಾಗ, ಏಸಾವನು ದಣಿದವನಾಗಿ ಅಡವಿಯಿಂದ ಬಂದನು. ಏಸಾವನು ಯಾಕೋಬನಿಗೆ: ಆ ಕೆಂಪಾದ ಪದಾರ್ಥವನ್ನು ತಿನ್ನುವದಕ್ಕೆ ನನಗೆ ಕೊಡು; ಯಾಕಂದರೆ ನಾನು ದಣಿದಿದ್ದೇನೆ, ಅಂದನು. ಆಗ ಯಾಕೋಬನು: ಈ ಹೊತ್ತು ನಿನ್ನ ಚೊಚ್ಚಲತನವನ್ನು ನನಗೆ ಮಾರು, ಅಂದನು. ಏಸಾವನು ಇಗೋ, ನಾನು ಸಾಯುತ್ತಾ ಇದ್ದೇನೆ; ಚೊಚ್ಚಲತನವು ನನಗೆ ಯಾಕೆ? ಅಂದನು. ಯಾಕೋಬನು: ಈ ಹೊತ್ತು ನನಗೆ ಪ್ರಮಾಣ ಮಾಡು, ಅಂದಾಗ, ಅವನು ಅವನಿಗೆ ಪ್ರಮಾಣ ಮಾಡಿ, ತನ್ನ ಚೊಚ್ಚಲತನವನ್ನು ಯಾಕೋಬನಿಗೆ ಮಾರಿದನು. ಹಾಗೆಯೇ ಏಸಾವನು ಚೊಚ್ಚಲತನವನ್ನು ಉದಾಸೀನ ಮಾಡಿದನು.

೨) ಆ ಮೇಲೆ ಆದದ್ದೇನಂದರೆ—ಇಸಾಕನು ಮುದುಕನಾಗಿ,

ನೋಡದ ಹಾಗೆ, ಅವನ ಕಣ್ಣು ಮೊಬ್ಬಾಯಿತು. ಆಗ ಅವನು ತನ್ನ ಹಿರೀ ಮಗನಾದ ಏಸಾವನನ್ನು ಕರೆದು, ಅವನಿಗೆ: ಇಗೋ, ನಾನು ಮುದುಕನಾಗಿದ್ಧೇನೆ; ನಾನು ಸಾಯುವ ದಿವಸವನ್ನು ಅರಿಯೆ; ಹಾಗಾದರೆ ಅಡವಿಗೆ ಹೋಗಿ, ನನಗೋಸ್ಕರ ಬೇಟೆಯಾಡಿ, ನಾನು ಮೆಚ್ಚುವ ಸವಿ ಊಟವನ್ನು ನನಗೋಸ್ಕರ ಸಿದ್ಧ ಮಾಡಿ, ತಕ್ಕೊಂಡು ಬಾ; ಆಗ ನಾನು ಸಾಯುವದಕ್ಕಿಂತ ಮುಂಚೆ ನನ್ನ ಪ್ರಾಣವು ನಿನ್ನನ್ನು ಆಶೀರ್ವದಿಸುವ ಹಾಗೆ ಅದನ್ನು ಉಣ್ಣುವೆನು, ಅಂದನು. ಇಸಾಕನು ತನ್ನ ಮಗನಾದ ಏಸಾವನಿಗೆ ಹೇಳಿದ್ದನ್ನು ರೆಬೆಕ್ಕಳು ಕೇಳಿದಳು. ಅದು ಕಾರಣ ಅವಳು ತನ್ನ ಮಗನಾದ ಯಾಕೋಬನಿಗೆ ಹೇಳಿದ್ದೇನಂದರೆ: ಇಗೋ, ನಿನ್ನ ತಂದೆ ನಿನ್ನ ಅಣ್ಣನಾದ ಏಸಾವನಿಗೆ—ನನಗೆ ಮೃಗಮಾಂಸವನ್ನು ತಕ್ಕೊಂಡು, ಊಟವನ್ನು ಸಿದ್ಧ ಮಾಡು; ಆಗ ನಾನು ನಿನ್ನನ್ನು ಆಶೀರ್ವದಿಸುವೆನು ಎಂದು ಹೇಳಿದ್ದನ್ನು ನಾನು ಕೇಳಿದ್ಧೇನೆ. ಹಾಗಾದರೆ ನೀನು ಮಂದೆಯ ಬಳಿಗೆ ಹೋಗಿ, ಅಲ್ಲಿಂದ ನನಗೆ ಎರಡು ಒಳ್ಳೇ ಮೇಕೆ ಮರಿಗಳನ್ನು ತಕ್ಕೊಂಡು ಬಾ, ಆಗ ನಾನು ಅವುಗಳನ್ನು ನಿನ್ನ ತಂದೆಗೋಸ್ಕರ ಅವನು ಮೆಚ್ಚುವ ಸವಿ ಊಟವನ್ನು ಸಿದ್ಧ ಮಾಡುವೆನು. ಮತ್ತು ನೀನು ಅದನ್ನು ನಿನ್ನ ತಂದೆಯ ಬಳಿಗೆ ತಕ್ಕೊಂಡು ಹೋಗ ಬೇಕು. ಅವನು ಸಾಯುವದಕ್ಕಿಂತ ಮುಂಚೆ ನಿನ್ನನ್ನು ಆಶೀರ್ವದಿಸುವ ಹಾಗೆ ಉಣ್ಣಲಿ. ಯಾಕೋಬನು ತನ್ನ ತಾಯಿಯಾದ ರೆಬೆಕ್ಕಳಿಗೆ: ಇಗೋ, ನನ್ನ ಸಹೋದರನಾದ ಏಸಾವನು ರೋಮವುಳ್ಳ ಮನುಷ್ಯನಾಗಿದ್ಧಾನೆ; ನಾನು ನುಣುಪಾದ ಮನುಷ್ಯನು; ಒಂದು ವೇಳೆ ನನ್ನ ತಂದೆ ನನ್ನನ್ನು ಮುಟ್ಟಿದರೆ, ಅವನಿಗೆ ವಂಚಕನಾಗಿ ಕಾಣುವೆನು; ಮತ್ತು ಆಶೀರ್ವಾದವನ್ನಲ್ಲ, ಶಾಪವನ್ನು ನನ್ನ ಮೇಲೆ ಬರ ಮಾಡಿ ಕೊಳ್ಳುವೆನು, ಅಂದನು. ಅವನ ತಾಯಿ ಅವನಿಗೆ: ನನ್ನ ಮಗನೇ, ನಿನ್ನ ಶಾಪವು ನನ್ನ ಮೇಲೆ ಇರಲಿ; ನನ್ನ ಮಾತು ಮಾತ್ರ ಕೇಳು, ಅಂದಳು. ಆಗಲವನು ಹೋಗಿ, ಅವುಗಳನ್ನು ತೆಗೆದು, ತನ್ನ ತಾಯಿಗೆ ತಂದು ಕೊ

ಟ್ಟನು. ಅವಳು ಅವನ ತಂದೆ ಮೆಚ್ಚುವ ಸವಿ ಊಟವನ್ನು ಸಿದ್ಧ ಮಾಡಿದಳು. ಆ ಮೇಲೆ ರೆಬೆಕ್ಕಳು ಏಸಾವನ ಒಳ್ಳೇ ವಸ್ತ್ರಗಳನ್ನು ತಕ್ಕೊಂಡು, ಯಾಕೋಬನಿಗೆ ಉಡಿಸಿ, ಮೇಕೆಯ ಮರಿಗಳ ತೊಗಲುಗಳನ್ನು ಅವನ ಕೈಗಳ ಮೇಲೆಯೂ ಕೊರಳಿನ ಮೇಲೆಯೂ ಕಟ್ಟಿ, ತಾನು ಮಾಡಿದ್ದ ಸವಿ ಊಟವನ್ನೂ ರೊಟ್ಟಿಯನ್ನೂ ಯಾಕೋಬನ ಕೈಯಲ್ಲಿ ಕೊಟ್ಟಳು. ಹೀಗೆ ಅವನು ತನ್ನ ತಂದೆಯ ಬಳಿಗೆ ಹೋಗಿ: ನನ್ನ ತಂದೆಯೇ, ಅಂದನು. ಅವನು: ಇಗೋ, ಇದ್ದೇನೆ; ನನ್ನ ಮಗನೇ, ನೀನು ಯಾರು? ಅಂದನು. ಯಾಕೋಬನು ತನ್ನ ತಂದೆಗೆ: ನಾನು ನಿನ್ನ ಹಿರೀ ಮಗನಾದ ಏಸಾವನು; ನೀನು ನನಗೆ ಹೇಳಿದ ಹಾಗೆ ಮಾಡಿದ್ದೇನೆ; ಎದ್ದು, ಕೂತುಕೋ; ನಿನ್ನ ಪ್ರಾಣವು ನನ್ನನ್ನು ಆಶೀರ್ವದಿಸುವ ಹಾಗೆ, ನನ್ನ ಮೃಗಮಾಂಸವನ್ನು ಉಣ್ಣು, ಅಂದನು. ಇಸಾಕನು ತನ್ನ ಮಗನಿಗೆ: ಇಷ್ಟು ಬೇಗ ನಿನಗೆ ಹ್ಯಾಗೆ ಶಿಕ್ಕಿತು? ಅನ್ನಲು, ಅವನು: ಯೆಹೋವನು ಅದು ಬರುವ ಹಾಗೆ ಮಾಡಿದನು, ಅಂದನು. ಆಗ ಇಸಾಕನು: ನನ್ನ ಮಗನೇ, ನೀನು ನನ್ನ ಮಗನಾದ ಏಸಾವನೋ? ಅಲ್ಲವೋ? ಎಂದು, ನಿನ್ನನ್ನು ಮುಟ್ಟಿ ನೋಡುವ ಹಾಗೆ, ಹತ್ತರ ಬರ ಬೇಕು, ಅಂದನು. ಯಾಕೋಬನು ತನ್ನ ತಂದೆಯ ಬಳಿಗೆ ಬಂದಾಗ, ಅವನು ಅವನನ್ನು ಮುಟ್ಟಿ: ಶಬ್ದವು ಯಾಕೋಬನ ಶಬ್ದವೇ, ಕೈಗಳು ಏಸಾವನ ಕೈಗಳೇ ಎಂದು, ಹೇಳಿ: ನೀನು ನನ್ನ ಮಗನಾದ ಏಸಾವನೋ, ಹೌದೋ? ಎಂದು ಕೇಳಿದಾಗ, ಅವನು: ನಾನೇ, ಅಂದನು. ಆಗ ಇಸಾಕನು ಉಂಡು,



ಕುಡಿದು, ಯಾಕೋಬನಿಗೆ: ಹತ್ತರ ಬಂದು, ನನಗೆ ಮುದ್ದಿಡು, ಅಂದನು. ಆಗಲವನು ಹತ್ತರ ಬಂದು, ಅವನಿಗೆ ಮುದ್ದಿಟ್ಟನು. ಇಸಾಕನು ಅವನನ್ನು ಆಶೀರ್ವದಿಸಿ, ಹೇಳಿದ್ದೇನಂದರೆ:—ದೇವರು ನಿನಗೆ ಆಕಾಶದ ಮಂಜಿನಲ್ಲಿ ಮತ್ತು ಭೂಮಿಯ ಪುಷ್ಟಿಯಲ್ಲಿ ಪಾಲನ್ನೂ ಧಾನ್ಯದ ದ್ರಾಕ್ಷೇ ರಸದ ಪರಿಪೂರ್ಣತೆಯನ್ನೂ ಕೊಡಲಿ. ಜನಗಳು ನಿನ್ನನ್ನು ಸೇವಿಸಲಿ; ಪ್ರಜೆಗಳು ನಿನಗೆ ಅಡ್ಡ ಬೀಳಲಿ. ನಿನ್ನ ಸಹೋದರರಿಗೆ ಧೊರೆಯಾಗಿರು. ನಿನ್ನ ತಾಯಿಯ ಮಕ್ಕಳು ನಿನಗೆ ಅಡ್ಡ ಬೀಳಲಿ. ನಿನ್ನನ್ನು ಶಪಿಸುವವರಿಗೆ ಶಾಪವು, ನಿನ್ನನ್ನು ಆಶೀರ್ವದಿಸುವವರಿಗೆ ಆಶೀರ್ವಾದವು ಆಗಲಿ.

೩) ಯಾಕೋಬನು ತನ್ನ ತಂದೆಯಾದ ಇಸಾಕನ ಸಮುಖದಿಂದ ಹೊರಟಾಗಲೇ, ಏಸಾವನು ಬೇಟೆಯಿಂದ ಬಂದನು. ಅವನು ಸಹ ಸವಿ ಊಟವನ್ನು ಸಿದ್ಧ ಮಾಡಿ, ತಂದೆಯ ಬಳಿಗೆ ತಂದು: ನನ್ನ ತಂಡೆ ಎದ್ದು, ನಿನ್ನ ಪ್ರಾಣವು ನನ್ನನ್ನು ಆಶೀರ್ವದಿಸುವ ಹಾಗೆ, ನನ್ನ ಮೃಗಮಾಂಸವನ್ನು ಉಣ್ಣಲಿ, ಅಂದನು. ಆಗ ಇಸಾಕನು ಬಹಳವಾಗಿ ಹೆದರಿ, ಹೇಳಿದ್ದೇನಂದರೆ:— ನೀನು ಬರುವದಕ್ಕಿಂತ ಮುಂಚೆ, ಬೇಟೆಯಾಡಿ ನನಗೆ ತಂದವನು ಯಾರೋ? ಎಲ್ಲಿಯೋ? ನಾನು ಎಲ್ಲಾ ಉಂಡು, ಅವನನ್ನು ಆಶೀರ್ವದಿಸಿದ್ದೇನೆ. ಅವನು ಆಶೀರ್ವದಿಸಲ್ಪಟ್ಟಿರಲಿ, ಅಂದನು. ಆಗ ಏಸಾವನು ಬಹಳ ಕಠಿಣವಾದ ದೊಡ್ಡ ಕೂಗಿನಿಂದ ಕೂಗಿ: ತಂದೆಯೇ, ನನ್ನನ್ನು ಕೂಡಾ ಆಶೀರ್ವದಿಸು, ಅಂದನು. ಇಸಾಕನು ಅವನಿಗೆ: ನಿನ್ನ ತಮ್ಮನು ಮೋಸದಿಂದ ಬಂದು, ನಿನ್ನ ಆಶೀರ್ವಾದವನ್ನು ತಕ್ಕೊಂಡಿದ್ದಾನೆ, ಅಂದಾಗ, ಏಸಾವನು: ಅವನಿಗೆ ಯಾಕೋಬನೆಂಬ ಹೆಸರು ಸರಿಯಲ್ಲವೋ? ಎರಡು ಸಾರಿ ನನ್ನ ಹಿಮ್ಮಡಿಯನ್ನು ಬೊಡಿದಿದ್ದಾನೆ. ನೀನು ನನಗೋಸ್ಕರ ಆಶೀರ್ವಾದವನ್ನು ಉಳಿಸಲಿಲ್ಲವೋ? ಅಂದಾಗ, ಇಸಾಕನು: ಇಗೋ, ನಿನ್ನ ನಿವಾಸವು ಭೂಮಿಯ ಪುಷ್ಟಿಯಿಂದಲೂ, ಮೇಲಿನ ಆಕಾಶದ ಮಂಜಿನಿಂದಲೂ ಇರುವದು. ನಿನ್ನ ಕತ್ತಿಯಿಂದಲೇ ಬ

ದುಕಿ, ನಿನ್ನ ತಮ್ಮನಿಗೆ ಸೇವಕನಾಗಿರುವಿ. ಆದರೆ ನಿನಗೆ ಯಜಮಾನತ್ವ ಉಂಟಾಗುವಾಗ, ಅವನ ನೊಗವನ್ನು ನಿನ್ನ ಕೊರಳಿನಿಂದ ಮುರಿದು ಹಾಕುವಿ ಎಂದು ಹೇಳಿದನು. ಆದರೆ ಏಸಾವನು ಯಾಕೋಬನನ್ನು ಹಗೆ ಮಾಡಿ: ನನ್ನ ತಂದೆಗೋಸ್ಕರ ದುಖ್ಖ ಪಡುವ ದಿವಸಗಳು ಸಮಿಾಪವಾಗಿವೆ; ನಾನು ನನ್ನ ತಮ್ಮನಾದ ಯಾಕೋಬನನ್ನು ಕೊಲ್ಲುವೆನೆಂದು ಹೇಳಿದನು. ಆಗ ರೆಬೆಕ್ಕಳು ಯಾಕೋಬನನ್ನು ಕರೆದು, ಅವನಿಗೆ: ಇಗೋ, ಏಸಾವನು ನಿನ್ನನ್ನು ಕೊಲ್ಲುವದಕ್ಕೆ ಇದ್ಧಾನೆ. ಹಾಗಾದರೆ, ನನ್ನ ಮಗನೇ, ನೀನು ಎದ್ದು, ನನ್ನ ಸಹೋದರನಾದ ಲಾಬಾನನ ಬಳಿಗೆ ಹಾರಾನಿಗೆ ಓಡಿ ಹೋಗು. ನಿನ್ನ ಅಣ್ಣನ ಉರಿ ತೊಲಗುವ ಪರಿಯಂತರ ಕೆಲವು ದಿನ ಅಲ್ಲಿ ವಾಸ ಮಾಡು; ಆ ಮೇಲೆ ನಾನು ನಿನ್ನನ್ನು ಅಲ್ಲಿಂದ ಕರಿಸುವೆನು, ಅಂದಳು. ಮತ್ತು ಇಸಾಕನು ಯಾಕೋಬನನ್ನು ಆಶೀರ್ವದಿಸಿ, ಹೇಳಿದ್ದೇನಂ



ದರೆ:—ಕಾನಾನ್ಯರ ಕುಮಾರ್ತೆಗಳಲ್ಲಿ ಹೆಂಡತಿಯನ್ನು ತಕ್ಕೊಳ್ಳಬೇಡ; ನಿನ್ನ ತಾಯಿಯ ತಂದೆಯಾದ ಬೆತುವೇಲನ ಬಳಿಗೆ ಹೋಗಿ, ಅಲ್ಲಿಂದ ನಿನಗೆ ಹೆಂಡತಿಯನ್ನು ತಕ್ಕೋ. ಸರ್ವ ಶಕ್ತನಾದ ದೇವರು ನಿನ್ನನ್ನು ಆಶೀರ್ವದಿಸಿ, ನೀನು ಜನಗಳ ಸಮೂಹವಾಗುವ ಹಾಗೆ ಅಭಿವೃದ್ಧಿ ಮಾಡಿ, ಹೆಚ್ಚಿಸಲಿ. ದೇವರು ನಿನಗೂ ನಿನ್ನ ಬೀಜಕ್ಕೂ

ಅಬ್ರಹಾಮನ ಆಶೀರ್ವಾದವನ್ನು ಕೊಡಲಿ. ಹೀಗೆ ಇಸಾಕನು ಯಾಕೋಬನನ್ನು ಕಳುಹಿಸಿದನು.

(ಯಾಕೋಬನು ಓಡಿ ಹೋಗುವಾಗ ಸುಮಾರು ೭೭ ವರುಷದವನಾಗಿದ್ದನು.)

ಬಾ. 14. 112. II. 55.

## ೧೪. ಯಾಕೋಬನ ಪ್ರಯಾಣವೂ ಪರವಾಸವೂ.

(ಉತ್ಪತ್ತಿ. ೨೮—೩೩.)

೧) ಯಾಕೋಬನು ಬೆರ್ಶೇಬದಿಂದ ಹೊರಟು, ಹಾರಾನಿಗೆ ಹೋಗುವಾಗ, ಒಂದು ಸ್ಥಳಕ್ಕೆ ಶೇರಿ, ಸೂರ್ಯನು ಮುಣುಗಿದ್ದರಿಂದ, ಅಲ್ಲಿ ಇಳು ಕೊಂಡನು. ಅಲ್ಲಿ ಒಂದು ಕಲ್ಲನ್ನು ತೆಗೆದು, ತನ್ನ ತಲೆಗಿಂಬಾಗಿ ಇಟ್ಟು ಕೊಂಡು, ಆ ಸ್ಥಳದಲ್ಲಿ ಮಲಗಿದನು. ಆಗಲವನು ಕನಸು ಕಂಡನು. ಅದೇನಂದರೆ:—ಅಗೋ, ಒಂದು ಏಣಿಯು ಭೂಮಿಯಲ್ಲಿ ಇಟ್ಟಿತ್ತು; ಅದರ ತುದಿ ಆಕಾಶಕ್ಕೆ ಮುಟ್ಟುತ್ತಿತ್ತು. ಮತ್ತು ದೇವರ ದೂತರು ಅದರ ಮೇಲೆ ಏರುತ್ತಾ ಇಳಿಯುತ್ತಾ ಇದ್ದರು. ಮತ್ತು ಅಗೋ, ಯೆಹೋವನು ಅದರ ಮೇಲೆ ನಿಂತು ಕೊಂಡು, ಹೇಳಿದ್ದೇನಂದರೆ: ನಿನ್ನ ತಂದೆಯಾದ ಅಬ್ರಹಾಮನ ದೇವರೂ ಇಸಾಕನ ದೇವರೂ ಆಗಿರುವ ಯೆಹೋವನು ನಾನೇ; ನೀನು ಮಲಗಿರುವ ಭೂಮಿಯನ್ನು ನಿನಗೂ ನಿನ್ನ ಬೀಜಕ್ಕೂ ಕೊಡುವೆನು, ನಿನ್ನ ಬೀಜವು ಭೂಮಿಯ ಧೂಳಿನ ಹಾಗೆ ಆಗುವದು; ಮತ್ತು ನಿನ್ನಲ್ಲಿಯೂ ನಿನ್ನ ಬೀಜದಲ್ಲಿಯೂ ಭೂಮಿಯ ಕುಲಗಳೆಲ್ಲಾ ಆಶೀರ್ವದಿಸಲ್ಪಡುವವು. ಇಗೋ, ನಾನು ನಿನ್ನ ಸಂಗಡ ಇದ್ದೇನೆ; ನೀನು ಹೋಗುವ ಎಲ್ಲೆಲ್ಲಿಯೂ ನಿನ್ನನ್ನು ಕಾಪಾಡಿ, ಈ ದೇಶಕ್ಕೆ ತಿರಿಗಿ ಬರಮಾಡುವೆನು. ಆಗ ಯಾಕೋಬನು ನಿದ್ದೆ ತಿಳಿದು: ನಿಶ್ಚಯವಾಗಿ ಈ ಸ್ಥಳದಲ್ಲಿ ಯೆಹೋವನು ಇದ್ದಾನೆ; ಇದನ್ನು ನಾನು ಅರಿಯಲಿಲ್ಲವೆಂದು ಹೇಳಿ, ಭಯ ಪಟ್ಟು: ಈ ಸ್ಥಳವು ಎಷ್ಟೋ ಭಯಂಕರವಾ

ದದ್ದು! ಇದು ದೇವರ ಮನೆಯೇ ಹೊರ್ತು ಬೇರೆ ಅಲ್ಲ; ಇದೇ ಆಕಾಶದ ಬಾಗಲು, ಅಂದು ಕೊಂಡನು. ಮತ್ತು ಯಾಕೋಬನು ಬೆಳಿಗ್ಯೆ ಎದ್ದು, ತನ್ನ ತಲೆಗಿಂಬಾಗಿ ಇಟ್ಟು ಕೊಂಡ ಕಲ್ಲು ತೆಗದು, ಅದನ್ನು ಸ್ತಂಭವಾಗಿ ಇಟ್ಟು, ಅದರ ತುದಿಯ ಮೇಲೆ ಎಣ್ಣೆ ಹೊಯಿದು, ಆ ಸ್ಥಳಕ್ಕೆ ಬೆತೇಲ್ (ದೇವರ ಮನೆ) ಎಂದು ಹೆಸರಿಟ್ಟನು. ಆಗ ಯಾಕೋಬನು ಹರಿಕೆ ಮಾಡಿ ಹೇಳಿದ್ದೇನಂದರೆ:—ದೇವರು ನನ್ನ ಸಂಗಡ ಇದ್ದು, ನಾನು ಹೋಗುವ ಈ ಮಾರ್ಗದಲ್ಲಿ ನನ್ನನ್ನು ಕಾಪಾಡಿ, ರೊಟ್ಟಿಯನ್ನೂ ವಸ್ತ್ರವನ್ನೂ ನನಗೆ ಕೊಟ್ಟರೆ, ಮತ್ತು ನಾನು ಸಮಾಧಾನವಾಗಿ ನನ್ನ ತಂದೆಯ ಮನೆಗೆ ತಿರಿಗಿ ಬಂದರೆ, ಆಗ ಯೆಹೋವನೇ ನನಗೆ ದೇವರಾಗಿರುವನು. ಮತ್ತು ಸ್ತಂಭವಾಗಿ ನಾನು ಇಟ್ಟ ಈ ಕಲ್ಲು ದೇವರ ಮನೆಯಾಗಿರುವದು. ಆ ಮೇಲೆ ಯಾಕೋಬನು ಹೊರಟು, ಒಂದು ಭಾವಿಯ ಹತ್ತರ ಬಂದನು. ಅಲ್ಲಿಗೆ ಕುರಿಗಳ ಮಂದೆಗಳು ಕೂಡಿ ಬಂದಾಗ, ಯಾಕೋಬನು ಅವುಗಳನ್ನು ಕಾಯುವವರಿಗೆ: ನೀವು ಎಲ್ಲಿಯವರು? ಅಂದಾಗ, ಅವರು: ನಾವು ಹಾರಾನಿನವರು, ಅಂದರು. ಅದಕ್ಕವನು: ನಾಹೋರನ ಮಗನಾದ ಲಾಬಾನನನ್ನು ಬಲ್ಲಿರೋ? ಎಂದು ಕೇಳಿದಾಗ, ಅವರು: ಬಲ್ಲೆವು; ಇಗೋ, ಅವನ ಮಗಳಾದ ರಾಹೆಲಳು ಕುರಿಗಳನ್ನು ಹೊಡಕೊಂಡು ಬರುತ್ತಾಳೆ, ಅಂದರು. ಆಗ ಯಾಕೋಬನು ರಾಹೆಲಳಿಗೆ ಮು



ದ್ದಿಟ್ಟು, ತನ್ನ ಶಬ್ದವನ್ನೆತ್ತಿ, ಅತ್ತನು. ತಾನು ರೆಬೆಕ್ಕಳ ಮಗನೆಂದು ಅವಳಿಗೆ ತಿಳಿಸಿದನು. ಅವಳು ಓಡಿ, ತನ್ನ ತಂದೆಯಾದ ಲಾಬಾನನಿಗೆ ತಿಳಿಸಿದಾಗ, ಅವನು ಓಡಿ ಬಂದು, ಯಾಕೋಬನನ್ನು ಮನೆಗೆ ಕರ ಕೊಂಡನು. ಯಾಕೋಬನು ಲಾಬಾನನ ಹತ್ತರ ವಸ್ತಿಯಾಗಿ, ಅವನ ಕುರಿಗಳನ್ನು ಮೇಯಿಸಿದನು. ಆಗ ಲಾಬಾನನು ಯಾಕೋಬನಿಗೆ: ನೀನು ನನ್ನ ತಮ್ಮನಲ್ಲವೋ? ನನಗೆ ಸುಮ್ಮನೆ ಸೇವೆ ಮಾಡಬೇಕೋ? ನಿನ್ನ ಸಂಬಳ ಏನೆಂದು ನನಗೆ ತಿಳಿಸು, ಅಂದನು. ಆದರೆ ಲಾಬಾನನಿಗೆ ಇಬ್ಬರು ಕುಮಾರ್ತೆಗಳು ಇದ್ದರು. ಹಿರಿಯಳ ಹೆಸರು ಲೇಯಳು, ಕಿರಿಯಳ ಹೆಸರು ರಾಹೆಲಳು. ಲೇಯಳ ಕಣ್ಣುಗಳು ಮೃದುವಾಗಿದ್ದವು; ಅದರೆ ರಾಹೆಲಳು ರೂಪವತಿಯಾಗಿದ್ದಳು. ಹೀಗಿರುವದರಿಂದ ಯಾಕೋಬನು ರಾಹೆಲಳನ್ನು ಪ್ರೀತಿ ಮಾಡಿ, ಲಾಬಾನನಿಗೆ: ನಿನ್ನ ಮಗಳಾದ ರಾಹೆಲಳಿಗೋಸ್ಕರ ನಿನಗೆ ಏಳು ವರುಷ ಸೇವೆ ಮಾಡುವೆನು, ಅಂದನು. ಈ ಪ್ರಕಾರ ಅವನು ರಾಹೆಲಳಿಗೋಸ್ಕರ ಏಳು ವರುಷ ಸೇವೆ ಮಾಡಿದನು. ಆದರೆ ಆ ಏಳು ವರುಷ ಆದ ಮೇಲೆ ಲಾಬಾನನು ಅವನಿಗೆ ಲೇಯಳನ್ನು ಕೊಟ್ಟನು. ಆಗ ಯಾಕೋಬನು ಲಾಬಾನನಿಗೆ: ಯಾಕೆ ನನಗೆ ಮೋಸ ಮಾಡಿದ್ದೀ? ಅಂದಾಗ, ಲಾಬಾನನು: ಹಿರಿಯಳಿಗಿಂತ ಮುಂಚೆ ಕಿರಿಯಳನ್ನು ಕೊಡುವದು ನಮ್ಮ ಸ್ಥಳದಲ್ಲಿ ಮರ್ಯಾದೆ ಇಲ್ಲ. ಆದರೆ ನೀನು ನನಗೆ ಇನ್ನು ಏಳು ವರುಷ ಪರಿಯಂತರ ಸೇವೆ ಮಾಡಿದರೆ, ಅವಳನ್ನು ಸಹ ನಿನಗೆ ಕೊಡುತ್ತೇನೆ, ಅಂದನು. ಯಾಕೋಬನು ಹಾಗೆ ಮಾಡಿದನು. ಆಗ ಲಾಬಾನನು ರಾಹೆಲಳನ್ನು ಅವನಿಗೆ ಹೆಂಡತಿಯಾಗಿ ಕೊಟ್ಟನು. ಮತ್ತು ಯಾಕೋಬನಿಗೆ: ಹನ್ನೆರಡು ಮಂದಿ ಮಗಂದಿರು ಹುಟ್ಟಿದರು. ಅವರ ಹೆಸರುಗಳು ಯಾವವಂದರೆ—ರೂಬೆನನು, ಸಿಮೆಯೋನನು, ಲೇವಿ, ಯೆಹೂದನು, ದಾನನು, ನೆಪ್ತಲಿ, ಗಾಡನು, ಅಶೇರನು, ಇಸ್ಸಕಾರನು, ಜೆಬುಲೋನನು, ಯೋಸೆಫನು, ಬೆನ್ಯಮೀನನು, ಮತ್ತು ದೈನಳೆಂಬ ಮಗಳು.

೨) ಆಗ ಯಾಕೋಬನು ಲಾಬಾನನಿಗೆ: ನನಗೆ ಅಪ್ಪಣೆ ಕೊಡು; ನನ್ನ ಸ್ವದೇಶಕ್ಕೆ ಹೋಗುತ್ತೇನೆ, ಅಂದನು. ಲಾಬಾನನು ಅವನಿಗೆ: ನಾನು ನಿನ್ನ ಕಣ್ಣುಗಳಲ್ಲಿ ದಯ ಹೊಂದಿದ್ದಾದರೆ, ಇನ್ನು ತಡೆಯ ಬೇಕು; ಯಾಕಂದರೆ ಯೆಹೋವನು ನಿನಗೋಸ್ಕರ ನನ್ನನ್ನು ಆಶೀರ್ವದಿಸುತ್ತಾನೆಂತ ತಿಳು ಕೊಳ್ಳುತ್ತೇನೆ; ನಿನ್ನ ಸಂಬಳವನ್ನು ನನಗೆ ನಿರ್ಣಯಿಸು; ಆಗ ನಾನು ಕೊಡುವೆನು, ಅಂದನು. ಹೀಗೆ ಯಾಕೋಬನು ಇನ್ನು ಆರು ವರುಷ ಮಟ್ಟಿಗೂ ಮುಂದೆಗೋಸ್ಕರ ಸೇವೆ ಮಾಡಿದನು. ಈ ಪ್ರಕಾರ ಬಹು ಕುರಿಗಳೂ ದಾಸ ದಾಸಿಯರೂ ಒಂಟೆಗಳೂ ಕತ್ತೆಗಳೂ ಅವನಿಗೆ ಆದವು. ಅದಕ್ಕಾಗಿ ಲಾಬಾನನೂ ಅವನ ಮಕ್ಕಳೂ ಯಾಕೋಬನ ಮೇಲೆ ಹೊಟ್ಟೆಕಿಚ್ಚು ಮಾಡಿದರು. ಆಗ ಯೆಹೋವನು ಯಾಕೋಬನಿಗೆ: ಲಾಬಾನನು ನಿನಗೆ ಮಾಡಿದ್ದನ್ನೆಲ್ಲ ನೋಡಿದ್ದೇನೆ; ಎದ್ದು ನಿನ್ನ ದೇಶಕ್ಕೆ ತಿರಿಗಿ ಹೋಗು, ಅಂದನು. ಆದಕಾರಣ ಯಾಕೋಬನು ಕಾನಾನ್ ದೇಶಕ್ಕೆ ತನ್ನ ತಂದೆಯಾದ ಇಸಾಕನ ಬಳಿಗೆ ಹೋಗಲಿಕ್ಕೆ ಎದ್ದು, ತನ್ನ ಮಕ್ಕಳನ್ನೂ ತನ್ನ ಹೆಂಡರನ್ನೂ ಒಂಟೆಗಳ ಮೇಲೆ ಏರಿಸಿ, ತನ್ನ ಎಲ್ಲಾ ಪಶುಗಳನ್ನೂ ತಾನು ಸಂಪಾದಿಸಿದ ಎಲ್ಲಾ ಸಂಪತ್ತನ್ನೂ ವೈದನು. ಮೂರನೇ ದಿವಸದಲ್ಲಿ ಯಾಕೋಬನು ಓಡಿ ಹೋದನೆಂದು ಲಾಬಾನಿಗೆ ತಿಳಿಸಿದಾಗ, ಅವನು ಏಳು ದಿವಸ ಪ್ರಯಾಣ ಅವನ ಹಿಂದೆ ಹತ್ತಿ, ಗಿಲ್ಯಾದ್ ಪರ್ವತದಲ್ಲಿ ಅವನನ್ನು ಕಲತನು. ಆದರೆ ದೇವರು ಸ್ವಪ್ನದಲ್ಲಿ ಲಾಬಾನನ ಬಳಿಗೆ ಬಂದು: ನೀನು ಯಾಕೋಬನ ಸಂಗಡ ಒಳ್ಳೇದನ್ನಾಗಲಿ ಕೆಟ್ಟದ್ದನ್ನಾಗಲಿ ಮಾತಾಡದ ಹಾಗೆ ನೋಡಿಕೋ, ಅಂದನು. ಲಾಬಾನನು ಯಾಕೋಬನನ್ನು ಕಲತಾಗ, ಅವನಿಗೆ: ಯಾಕೆ ಮರೆಯಾಗಿ ಓಡಿ ಹೋಗಿದ್ಧೀ? ಅಂದನು. ಅದಕ್ಕೆ ಯಾಕೋಬನು: ನಾನು ಭಯ ಪಟ್ಟದರಿಂದ ಬಂದೆನು. ಮತ್ತು ಯಾಕೋಬನೂ ಲಾಬಾನನೂ ಒಂದು ಒಡಂಬಡಿಕೆಯನ್ನು ಮಾಡಿ ಕೊಂಡರು. ಹೊತ್ತಾರೆ ಲಾಬಾನನು ಎದ್ದು, ತನ್ನ ಕುಮಾರರಿಗೂ ಕುಮಾರ್ತೆಗಳಿಗೂ ಮುದ್ದಿಟ್ಟು,

ಅವರನ್ನು ಆಶೀರ್ವದಿಸಿ, ತನ್ನ ಸ್ಥಳಕ್ಕೆ ತಿರಿಗಿ ಹೋದನು. ಯಾಕೋಬನು ತನ್ನ ಮಾರ್ಗವಾಗಿ ಹೋಗುತ್ತಿರುವಾಗ, ದೇವರ ದೂತರು ಅವನೆದುರಿಗೆ ಬಂದರು. ಯಾಕೋಬನು ಅವರನ್ನು ನೋಡಿದಾಗ, ಇದು ದೇವರ ದಂಡು ಎಂದು ಹೇಳಿ, ಆ ಸ್ಥಳಕ್ಕೆ ಮಹಾನಾಯಿಮ್ (ಅಂದರೆ ಎರಡು ದಂಡುಗಳು) ಎಂದು ಹೆಸರಿಟ್ಟನು.

೩) ಆಗ ಯಾಕೋಬನು ಸೇಯಿರ್ ಎಂಬ ದೇಶದಲ್ಲಿರುವ ತನ್ನ ಅಣ್ಣನಾದ ಏಸಾವನ ಬಳಿಗೆ ಜನರನ್ನು ತನ್ನ ಮುಂದಾಗಿ ಕಳುಹಿಸಿ, ತಾನು ಬರುವದನ್ನು ಅವನಿಗೆ ತಿಳಿಸಿದನು. ಆ ಜನರು ತಿರಿಗಿ ಯಾಕೋಬನ ಬಳಿಗೆ ಬಂದು, ಅವನಿಗೆ: ಏಸಾವನು ನಾನೂರು ಮಂದಿಯನ್ನು ಕರಕೊಂಡು ನಿನ್ನೆದುರಿಗೆ ಬರುತ್ತಾನೆ, ಅಂದರು. ಆಗ ಯಾಕೋಬನು ಬಹಳ ಭಯ ಪಟ್ಟು, ತನ್ನ ಸಂಗಡ ಇದ್ದ ಜನರನ್ನೂ ಮಂದೆಗಳನ್ನೂ ಎರಡು ಗುಂಪಾಗಿ ವಿಭಾಗಿಸಿದನು. ಯಾಕಂದರೆ, ಏಸಾವನು ಒಂದು ಗುಂಪಿನ ಮೇಲೆ ಬಿದ್ದು, ಅದನ್ನು ಹೊಡದರೆ, ಉಳಿದ ಗಂಪು ತಪ್ಪಿಸಿ ಕೊಂಡು ಹೋದೀತೆಂದು, ಅಂದು ಕೊಂಡನು. ಮತ್ತು ಯಾಕೋಬನು ಹೇಳಿದ್ದೇನಂದರೆ:—ನನ್ನ ತಂದೆಯಾದ ಅಬ್ರಹಾಮನಿಗೂ ಇಸಾಕನಿಗೂ ದೇವರಾಗಿರುವ ಯೆಹೋವನೇ, ನಿನ್ನ ದೇಶಕ್ಕೂ ನಿನ್ನ ಬಂಧುಗಳ ಬಳಿಗೂ ತಿರಿಗಿ ಹೋಗು, ಆಗ ನಿನಗೆ ಒಳ್ಳೇದನ್ನು ಮಾಡುವೆನೆಂದು ನನಗೆ ಹೇಳಿದವನೇ! ನೀನು ನಿನ್ನ ದಾಸನಿಗೆ ಮಾಡಿದ ಎಲ್ಲಾ ಕೃಪೆಗಳಿಗೂ ಎಲ್ಲಾ ಸತ್ಯಕ್ಕೂ ಅಯೋಗ್ಯನಾಗಿದ್ಧೇನೆ; ಯಾಕಂದರೆ ನನ್ನ ಕೋಲನ್ನೇ ಹಿಡಿದು ಕೊಂಡು, ಈ ಯೊರ್ದನನ್ನು ದಾಟಿ ಹೋದೆನು; ಮತ್ತು ಈಗ ಎರಡು ಗುಂಪಾದೆನು. ದಯ ಮಾಡಿ ಏಸಾವನ ಕೈಗೆ ನನ್ನನ್ನು ತಪ್ಪಿಸು; ಯಾಕಂದರೆ ಅವನು ಬಂದು, ನನ್ನನ್ನು ಮಕ್ಕಳ ಸಂಗಡ ತಾಯಿಯನ್ನೂ ಹೊಡೆಯುವನೇನೋ? ಎಂದು, ಅವನಿಗೆ ಭಯ ಪಡುತ್ತೇನೆ. ನಿನಗೆ ಒಳ್ಳೇದನ್ನು ಮಾಡುವೆನೆಂದೂ, ಸಮುದ್ರದ ಮರಳಿನ ಹಾಗೆ ನಿನ್ನ ಬೀಜವನ್ನು ಮಾಡುವೆನೆಂದೂ, ನೀನು ಹೇಳಿದಿಯಲ್ಲ?

ಮತ್ತು ಯಾಕೋಬನು ತನ್ನ ಅಣ್ಣನಾದ ಏಸಾವನಿಗೆ ತನ್ನ ಮಂದೆಗಳಿಂದ ಕಾಣಿಕೆಯನ್ನು ಕಳುಹಿಸಿದನು. ಮತ್ತು ರಾತ್ರಿಯಲ್ಲಿ ಎದ್ದು, ತನ್ನ ಇಬ್ಬರು ಹೆಂಡರನ್ನೂ ಮಕ್ಕಳನ್ನೂ ತನಗಿದ್ದದ್ದನ್ನೆಲ್ಲಾ ಯಾಬೋಕಿನ ಹೊಳೆ ದಾಟಿಸಿದನು. ಅವನು ಒಬ್ಬನೇ ಉಳಿದಾಗ, ಒಬ್ಬ ಮನುಷ್ಯನು ಉದಯವಾಗುವ ಪರಿಯಂತರ ಅವನ ಸಂಗಡ ಹೋರಾಡಿದನು. ಅವನು ಯಾಕೋಬನನ್ನು ಜಯಿಸಿದ್ದನ್ನು ನೋಡಿ, ಅವನ ತೊಡೆಯ ಕೀಲು ಮುಟ್ಟಿದನು. ಹೀಗೆ ಆ ಕೀಲು ತಪ್ಪಿತು. ಆ ಮನುಷ್ಯನು ಅವನಿಗೆ: ಉದಯವಾಯಿತು, ನನ್ನನ್ನು ಹೋಗ ಬಿಡು, ಅಂದಾಗ, ಯಾಕೋಬನು: ನೀನು ನನ್ನನ್ನು ಆಶೀರ್ವದಿಸಿದರೆ ಹೊರ್ತು, ನಿನ್ನನ್ನು ಹೋಗ ಬಿಡೆನು, ಅಂದನು. ಅವನು ಅವನಿಗೆ: ನಿನ್ನ ಹೆಸರೇನು? ಅಂದಾಗ, ಅವನು: ಯಾಕೋಬನು, ಅಂದನು. ಆ ಮನುಷ್ಯನು: ನಿನಗೆ ಇನ್ನು ಯಾಕೋಬನೆಂದಲ್ಲ, ಇಸ್ರಯೇಲನೆಂದು ಹೆಸರಿಡಬೇಕು. ಯಾಕಂದರೆ ನೀನು ದೇವರ ಸಂಗಡಲೂ, ಮನುಷ್ಯರ ಸಂಗಡಲೂ ಹೋರಾಡಿ ಜೈಸಿದಿ, ಅಂದನು. (ಇಸ್ರಯೇಲ್ ಅಂದರೆ ದೇವರ ಸಂಗಡ ಹೋರಾಡಿದವನು.) ಆಗ ಯಾಕೋಬನು ಆ ಸ್ಥಳಕ್ಕೆ ಪಿನಿಯೇಲ್ (ಅಂದರೆ ದೇವರ ಸಮುಖವು) ಎಂದು ಹೆಸರಿಟ್ಟನು. ಯಾಕಂದರೆ ನಾನು ದೇವರನ್ನು ಮುಖಾಮುಖಿಯಾಗಿ ನೋಡಿದ್ದರೂ, ನನ್ನ ಪ್ರಾಣವು ತಪ್ಪಿಸಿ ಕೊಂಡಿತು ಎಂದು ಹೇಳಿದನು.

ಮತ್ತು ಯಾಕೋಬನು ತನ್ನ ಕಣ್ಣುಗಳನ್ನೆತ್ತಿ ನೋಡಿದಾಗ, ಅಗೋ, ಏಸಾವನು ನಾನೂರು ಮಂದಿಯ ಸಂಗಡ ಬರುತ್ತಿದ್ದನು. ಮತ್ತು ಅವನು ಅವರ ಮುಂದೆ ಹೋಗಿ, ತನ್ನ ಅಣ್ಣನ ಬಳಿಗೆ ಬರುವ ಪರಿಯಂತರ ಏಳು ಸಾರಿ ಅಡ್ಡ ಬಿದ್ದನು. ಆಗ ಏಸಾವನು ಅವನೆದುರಾಗಿ ಓಡಿ ಬಂದು, ಅವನನ್ನು ಅಪ್ಪಿ ಕೊಂಡು, ಅವನ ಕೊರಳಿನ ಮೇಲೆ ಬಿದ್ದು, ಅವನಿಗೆ ಮುದ್ದಿಟ್ಟನು. ಅವರಿಬ್ಬರು ಅತ್ತರು. ಆಗ ಯಾಕೋಬನ ಹೆಂಡರೂ ದಾಸಿಗಳೂ ಮಕ್ಕಳೂ ಹತ್ತರ ಬಂದು, ಅಡ್ಡ ಬಿದ್ದರು. ಆ ಕಾಣಿಕೆಯನ್ನು ತಕ್ಕೊಳ್ಳಲಿಕ್ಕೆ ಏಸಾವನಿಗೆ ಮ

ನಸ್ಸಿರಲಿಲ್ಲ; ಆದರೆ ಯಾಕೋಬನು ಅವನಿಗೆ ಬಲವಂತ ಮಾಡಿದ್ದರಿಂದ ಅವನು ತಕ್ಕೊಂಡನು.

ಮತ್ತು ಯಾಕೋಬನು ತನ್ನ ತಂದೆಯಾದ ಇಸಾಕನ ಬಳಿಗೆ ಮಮ್ರೆಗೆ ಬಂದನು. ಇಸಾಕನು ನೂರ ಎಪ್ಪತ್ತು ವರುಷದವನಾಗಿದ್ದಾಗ, ತೀರಿ ಹೋಗಿ, ತನ್ನ ಜನರ ಸಂಗಡ ಕೂಡಿಸಲ್ಪಟ್ಟನು. ಅವನ ಮಕ್ಕಳಾದ ಏಸಾವನೂ ಯಾಕೋಬನೂ ಅವನನ್ನು ಹೂಣಿಟ್ಟರು.

II. 20. III. 9. ಬಾ. 65. ಬಾ. 81.

---

## ೧೫. ಯೋಸೇಫನನ್ನು ಮಾರಿದ್ದು.

(ಉತ್ಪತ್ತಿ. ೩೭.)

೧) ಯಾಕೋಬನು ತನ್ನ ತಂದೆ ಪರವಾಸವಾಗಿದ್ದ ಕಾನಾನ್ ದೇಶದಲ್ಲಿ ವಾಸಿಸಿದನು. ಅವನ ಮಗನಾದ ಯೋಸೇಫನು ಹದಿನೇಳು ವರುಷದವನಾಗಿದ್ದಾಗ, ತನ್ನ ಸಹೋದರರ ಸಂಗಡ ಮಂದೆಗಳನ್ನು ಮೇಯಿಸುತ್ತಿದ್ದನು. ಮತ್ತು ಅವರ ಕೆಟ್ಟ ಸುದ್ದಿಯನ್ನು ಅವರ ತಂದೆಗೆ ತಿಳಿಸುತ್ತಿದ್ದನು. ಆದರೆ ಇಸ್ರಯೇಲನು ಯೋಸೇಫನನ್ನು, ಅವನು ಮುದಿ ಪ್ರಾಯದಲ್ಲಿ ಹುಟ್ಟಿದ ಮಗನಾಗಿರುವದರಿಂದ, ತನ್ನ ಎಲ್ಲಾ ಮಕ್ಕಳಿಗಿಂತಲೂ ಹೆಚ್ಚು ಪ್ರೀತಿ ಮಾಡಿ, ಅವನಿಗೆ ಚಿತ್ರವರ್ಣದ ಅಂಗಿಯನ್ನು ಮಾಡಿಸಿದನು. ಅದು ಕಾರಣ ಅವನ ಸಹೋದರರು ಅವನನ್ನು ಹಗೆ ಮಾಡಿ, ಅವನ ಸಂಗಡ ಸಮಾಧಾನವಾಗಿ ಮಾತಾಡಲಾರದೆ ಇದ್ದರು. ಮತ್ತು ಯೋಸೇಫನು ಒಂದು ಕನಸು ಕಂಡು, ತನ್ನ ಸಹೋದರರಿಗೆ ತಿಳಿಸಿ, ಹೇಳಿದ್ದೇನಂದರೆ:—ಇಗೋ, ನಾವು ಹೊಲದಲ್ಲಿ ಸೂಡುಗಳನ್ನು ಕಟ್ಟುತ್ತಾ ಇದ್ದೆವು. ಆಗ, ಇಗೋ, ನನ್ನ ಸೂಡು ಎದ್ದು, ನಿಂತಿತು; ನಿಮ್ಮ ಸೂಡುಗಳು ತಿರಿಗಿ ಕೊಂಡು, ನನ್ನ ಸೂಡಿಗೆ ಅಡ್ಡ ಬಿದ್ದವು. ಆಗಲವನ ಸಹೋದರರು ಅವನಿಗೆ: ನೀನು ನಮ್ಮ ಮೇಲೆ ನಿಶ್ಚಯವಾಗಿ ಅರಸನಾಗ ಬೇಕೇ? ಎಂದು ಹೇಳಿ,

ಅವನಿಗೆ ಇನ್ನು ಹೆಚ್ಚಾಗಿ ಹಗೆ ಮಾಡಿದರು. ಮತ್ತು ಅವನು ಬೇರೊಂದು ಕನಸು ಕಂಡು, ತನ್ನ ಸಹೋದರರಿಗೆ ತಿಳಿಸಿ, ಹೇಳಿದ್ದೇನಂದರೆ:—ಇಗೋ, ಸೂರ್ಯನೂ ಚಂದ್ರನೂ ಹನ್ನೊಂದು ನಕ್ಷತ್ರಗಳೂ ನನಗೆ ಅಡ್ಡ ಬಿದ್ದವು. ಅದಕ್ಕೆ ಅವನ ತಂದೆ ಅವನನ್ನು ಗದರಿಸಿ: ನಾನೂ ನಿನ್ನ ತಾಯಿಯೂ ನಿನ್ನ ಸಹೋದರರೂ ನಿನಗೆ ಅಡ್ಡ ಬೀಳುವದಕ್ಕೆ ಬರ ಬೇಕೇ? ಅಂದನು. ಆಗಲವನ ಸಹೋದರರು ಅವನಲ್ಲಿ ಹೊಟ್ಟೆಕಿಚ್ಚು ಪಟ್ಟರು; ಆದರೆ ಅವನ ತಂದೆ ಆ ಮಾತನ್ನು ಮನಸ್ಸಿನಲ್ಲಿಟ್ಟು ಕೊಂಡನು.

೨) ಮತ್ತು ಅವನ ಸಹೋದರರು ಶೇಕೆಮಿನಲ್ಲಿ ತಮ್ಮ ತಂದೆಯ ಮಂದೆಯನ್ನು ಮೇಯಿಸುವದಕ್ಕೆ ಹೋದರು. ಆಗ ಇಸ್ರಾಯೇಲನು ಯೋಸೇಫನಿಗೆ: ಇಗೋ, ಹೋಗಿ, ನಿನ್ನ ಸಹೋದರರ ಕ್ಷೇಮ ಸಮಾಚಾರವನ್ನು ಕೇಳಿ ಕೊಂಡು ಬಾ ಎಂದು ಹೇಳಿ, ಅವನನ್ನು ಕಳುಹಿಸಿದನು. ಅವನ ಸಹೋದರರು ದೂರದಿಂದ ಅವನನ್ನು ನೋಡಿದಾಗ, ಅವನನ್ನು ಕೊಂದು ಹಾಕ ಬೇಕೆಂದು ಆಲೋಚನೆ ಮಾಡಿ ಕೊಂಡು: ಅಗೋ, ಆ ಕನಸಿನವನು ಬರುತ್ತಾನೆ; ಈಗ ಬನ್ನಿರಿ, ಅವನನ್ನು ಕೊಂದು ಹಾಕುವ; ಆ ಮೇಲೆ ಅವನ ಕನಸುಗಳು ಏನಾಗುವವೋ? ನೋಡುವೆವು, ಅಂದು ಕೊಂಡರು. ಆದರೆ ರೂಬೇನನು ಅವರಿಗೆ: ರಕ್ತ ಚೆಲ್ಲ ಬೇಡಿರಿ; ಕಾಡಿನಲ್ಲಿರುವ ಒಂದು ಕುಣಿಯಲ್ಲಿ ಅವನನ್ನು ಹಾಕಿರಿ, ಅಂದನು. ಯಾಕಂದರೆ ಅವನನ್ನು ಅವರ ಕೈಗೆ ತಪ್ಪಿಸಿ, ತನ್ನ ತಂದೆಯ ಬಳಿಗೆ ತಿರಿಗಿ ತರ ಬೇಕೆಂದು ಅವನಿಗೆ ಮನಸ್ಸಿತ್ತು. ಆಗ ಅವರು ಯೋಸೇಫನ ಅಂಗಿಯನ್ನು ತೆಗೆದು ಬಿಟ್ಟು, ಅವನನ್ನು ಕುಣಿಯಲ್ಲಿ ಹಾಕಿದರು. ಮತ್ತು ಅವರು ಊಟಕ್ಕೆ ಕೂತು ಕೊಂಡಾಗ, ಐಗುಪ್ತಕ್ಕೆ ಹೋಗುವ ಇಷ್ಮಯೇಲ್ಯರಾದ ವರ್ತಕರು ಬಂದರು. ಆಗ ಯೆಹೂದನು ತನ್ನ ಸಹೋದರರಿಗೆ: ನಾವು ನಮ್ಮ ತಮ್ಮನನ್ನು ಮಾರುವ, ಅಂದನು. ಅವನ ಸಹೋದರರು ಆ ಮಾತನ್ನು ಕೇಳಿ, ಯೋಸೇಫನನ್ನು ಕುಣಿಯೊಳಗಿಂದ ಮೇಲೆ ಎಳೆ

ದು, ಅವನನ್ನು ಇಷ್ಮಯೇಲ್ಯರಿಗೆ ಇಪ್ಪತ್ತು ರೂಪಾಯಿಗೆ ಮಾರಿದರು. ಇವರು ಯೋಸೇಫನನ್ನು ಐಗುಪ್ತಕ್ಕೆ ತಕ್ಕೊಂಡು ಹೋದರು.



ರೂಬೇನನು ಕುಣಿಗೆ ತಿರಿಗಿ ಬಂದಾಗ, ಯೋಸೇಫನು ಅದರಲ್ಲಿ ಇರಲಿಲ್ಲ. ಅದಕ್ಕವನು ತನ್ನ ವಸ್ತ್ರಗಳನ್ನು ಹರ ಕೊಂಡು, ತನ್ನ ಸಹೋದರರ ಬಳಿಗೆ ಹೋಗಿ: ಆ ಹುಡುಗನಿಲ್ಲ, ಹಾಗಾದರೆ ನಾನು ಎಲ್ಲಿಗೆ ಹೋಗಲಿ? ಅಂದನು. ಆಗಲವರು ಯೋಸೇಫನ ಅಂಗಿಯನ್ನು ತಕ್ಕೊಂಡು, ಮೇಕೆಯ ಮರಿಯನ್ನು ಕೊಯಿದು, ಆ ಅಂಗಿಯನ್ನು ರಕ್ತದಲ್ಲಿ ಅದ್ದಿ, ತಮ್ಮ ತಂದೆಗೆ ತಂದು: ಇದೇ ನಮಗೆ ಶಿಕ್ಕಿತು; ಇದು ನಿನ್ನ ಮಗನ ಅಂಗಿಯೋ? ಅಲ್ಲವೋ? ನೋಡು ಎಂದು ಹೇಳಿದರು. ಅವನು ಅದನ್ನು ಗುರುತು ಹಿಡಿದು: ನನ್ನ ಮಗನ ಅಂಗಿ, ಹೌದು; ದುಷ್ಟ ಮೃಗವು ಅವನನ್ನು ತಿಂದು ಬಿಟ್ಟಿತು ಎಂದು ಹೇಳಿ, ತನ್ನ ವಸ್ತ್ರಗಳನ್ನು ಹರ ಕೊಂಡು, ಒಂದು ಗೋಣಿಯನ್ನು ಕಟ್ಟಿ ಕೊಂಡು, ತನ್ನ ಮಗನಿಗೋಸ್ಕರ ಬಹು ದಿವಸ ದುಃಖ ಪಟ್ಟನು. ಆಗ ಅವನ



ಎಲ್ಲಾ ಮಕ್ಕಳು ಅವನನ್ನು ಆದರಿಸುವದಕ್ಕೆ ಬಂದರು. ಆದರೆ ಅವನು ಆದರಣೆ ಹೊಂದಲೊಲ್ಲದೆ: ನನ್ನ ಮಗನ ಬಳಿಗೆ ಪಾತಾಳಕ್ಕೆ ದುಖ್ಖದಿಂದಲೇ ಇಳಿದು ಹೋಗುವೆನೆಂದು ಹೇಳಿ, ಅವನಿಗೋಸ್ಕರ ಅತ್ತನು.

ಬಾ. 108. II. 55. III. 17.

---

## ೧೬. ಯೋಸೆಫನು ಐಗುಪ್ತ ದೇಶದಲ್ಲಿ ಇದ್ದದ್ದು.

(ಉತ್ಪತ್ತಿ ೩೯—೪೧.)

೧) ಆ ಇಷ್ಮಯೇಲ್ಯರು ಯೋಸೆಫನನ್ನು ಐಗುಪ್ತಕ್ಕೆ ವೈದು, ಅಲ್ಲಿ ಫರೋನನ ರಾಣುವೆಯ ಅಧಿಪತಿಯಾಗಿರುವ ಪೊಟಿಫಾರನಿಗೆ ಮಾರಿದರು. ಮತ್ತು ಯೆಹೋವನು ಯೋಸೆಫನ ಸಂಗಡ ಇದ್ದನು. ಅವನ ಯಜಮಾನನು ಇದನ್ನು ನೋಡಿದರಿಂದ ಯೋಸೆಫನು ಅವನ ದೃಷ್ಟಿಯಲ್ಲಿ ದಯ ಹೊಂದಿದನು. ಪೊಟಿಫಾರನು ಅವನನ್ನು ತನ್ನ ಮನೆಗೆ ವಿಚಾರಣಾಕರ್ತನಾಗಿ ನೇಮಿಸಿ, ತನಗಿದ

ದ್ದನ್ನೆಲ್ಲಾ ಅವನ ಕೈಗೆ ಒಪ್ಪಿಸಿದನು. ಆ ಮೇಲೆ ಯೆಹೋವನು ಐಗು ಪ್ತ್ಯನ ಮನೆಯನ್ನು ಯೋಸೇಫನಿಗೋಸ್ಕರ ಆಶೀರ್ವದಿಸಿದನು. ಯೋಸೇಫನು ಒಳ್ಳೇ ರೂಪದವನಾಗಿದ್ದದರಿಂದ ಪೊಟೆಫಾರನ ಹೆಂಡತಿ ಅವನ ಮೇಲೆ ಕಣ್ಣಿಟ್ಟು: ನನ್ನ ಸಂಗಡ ಮಲಗು, ಅಂದಳು. ಆದರೆ ಅವನು ಒಲ್ಲದೆ: ಇಗೋ, ನಾನು ಈ ದೊಡ್ಡ ಕೇಡನ್ನು ಮಾಡಿ, ದೇವರಿಗೆ ಪಾಪ ಮಾಡುವದು ಹ್ಯಾಗೆ? ಅಂದನು. ಆದರೆ ಅವಳು ದಿನಾಲು ಯೋಸೇಫನ ಸಂಗಡ ಮಾತಾಡಿದಳು. ಇವನು ಅವಳ ಮಾತನ್ನು ಕೇಳದೆ ಇರುವಾಗ, ಆ ಸಮಯದಲ್ಲಿ ಆದದ್ದೇನಂದರೆ:— ಅವನು ತನ್ನ ಕೆಲಸ ಮಾಡುವದಕ್ಕೆ ಮನೆಯಲ್ಲಿ ಪ್ರವೇಶಿಸಿದಾಗ, ಮನೆಯವರಲ್ಲಿ ಯಾವನಾದರೂ ಆ ಕಡೆಯಲ್ಲಿ ಇರಲಿಲ್ಲ. ಆಗ ಅವಳು ಅವನ ವಸ್ತ್ರವನ್ನು ಹಿಡು ಕೊಂಡು: ನನ್ನ ಸಂಗಡ ಮಲಗು, ಅಂದಳು. ಆದರೆ ಅವನು ತನ್ನ ವಸ್ತ್ರವನ್ನು ಅವಳ ಕೈಯಲ್ಲಿ ಬಿಟ್ಟು ಬಿಟ್ಟು, ಹೊರಗೆ ಓಡಿ ಹೋದನು. ಯಜಮಾನನು ಮನೆಗೆ ಬರುವ ಪರಿಯಂತರ ಅವಳು ಯೋಸೇಫನ ವಸ್ತ್ರವನ್ನು ತನ್ನ ಬಳಿಯಲ್ಲಿ ಇಟ್ಟು ಕೊಂಡು, ಅವನಿಗೆ ಹೇಳಿದ್ದೇನಂದರೆ:—ನೀನು ನಮ್ಮ ಬಳಿಗೆ ತಂದ ಇಬ್ರಿಯನಾದ ದಾಸನು ನನಗೆ ಹಾಸ್ಯ ಮಾಡುವದಕ್ಕೆ ನನ್ನ ಬಳಿಗೆ ಬಂದನು. ಆದರೆ ನಾನು ಕೂಗಿದಾಗ, ಅವನು ತನ್ನ ವಸ್ತ್ರವನ್ನು ನನ್ನ ಬಳಿಯಲ್ಲಿ ಬಿಟ್ಟು ಹೊರಗೆ ಓಡಿ ಹೋದನು. ಪೊಟೆಫಾರನು ತನ್ನ ಹೆಂಡತಿಯ ಮಾತು ಕೇಳಿದಾಗ, ಅವನ ಕೋಪ ಉರಿಯಿತು. ಆದ ಕಾರಣ ಯೋಸೇಫನನ್ನು ತಕ್ಕೊಂಡು, ಅರಸನ ಶೆರೆ ಮನೆಯಲ್ಲಿ ಹಾಕಿದನು. ಆದರೆ ಯೆಹೋವನು ಯೋಸೇಫನ ಸಂಗಡ ಇದ್ದು, ಅವನ ಮೇಲೆ ಕೃಪೆ ಇಟ್ಟು, ಶೆರೆಮನೆಯ ಯಜಮಾನನ ಮುಂದೆ ಅವನಿಗೆ ದಯವಾಗುವ ಹಾಗೆ ಮಾಡಿದನು. ಹೀಗಿರುವದರಿಂದ ಇವನು ಶೆರೆಮನೆಯಲ್ಲಿ ಕಟ್ಟಿ ಹಾಕಿರುವವರೆಲ್ಲರನ್ನು ಯೋಸೇಫನ ಕೈಯಲ್ಲಿ ಕೊಟ್ಟನು. ಯಾಕಂದರೆ ಅವನು ಮಾಡುವದನ್ನೆಲ್ಲಾ ಯೆಹೋವನು ಸಫಲವಾಗುವ ಹಾಗೆ ಮಾಡಿದನು.

೨) ಇವುಗಳಾದ ಮೇಲೆ ಐಗುಪ್ತದ ಅರಸನ ಪಾನದಾಯಕನೂ ರೊಟ್ಟಿಗಾರನೂ ತಮ್ಮ ಯಜಮಾನನಿಗೆ ಪಾಪ ಮಾಡಿದರು. ಆಗ ಫರೋನನು ಅವರ ಮೇಲೆ ಶಿಟ್ಟು ಮಾಡಿ, ಅವರನ್ನು ಯೋಸೆಫನು ಇದ್ದ ಶೆರೆಮನೆಯಲ್ಲಿ ಇಟ್ಟನು. ಯೋಸೆಫನು ಅವರಿಗೆ ಸೇವೆ ಮಾಡುತ್ತಿದ್ದನು. ಆಗಲವರಿಬ್ಬರು ಒಂದೇ ರಾತ್ರಿಯಲ್ಲಿ ಕನಸು ಕಂಡರು. ಯೋಸೆಫನು ಬೆಳಿಗ್ಯೆ ಅವರ ಹತ್ತರ ಬಂದು, ಅವರನ್ನು ಚಿಂತೆಯುಳ್ಳವರಾಗಿ ನೋಡಿದಾಗ, ಅವರಿಗೆ: ನಿಮಗೆ ಏನು? ಎಂದು ಕೇಳಿದನು. ಅವರು ಅವನಿಗೆ: ಕನಸು ಕಂಡಿದ್ದೇವೆ, ಅದರ ಅರ್ಥ ಹೇಳುವವನಿಲ್ಲ, ಅಂದರು. ಯೋಸೆಫನು ಅವರಿಗೆ: ಅರ್ಥ ಹೇಳುವದು ದೇವರದಲ್ಲವೋ? ಆದರೆ ದಯ ಮಾಡಿ ನನಗೆ ಹೇಳಿರಿ, ಅಂದನು. ಆಗ ಪಾನದಾಯಕನು ತನ್ನ ಕನಸನ್ನು ಯೋಸೆಫನಿಗೆ ತಿಳಿಸಿ, ಹೇಳಿದ್ದೇನಂದರೆ:—ನನ್ನ ಕನಸಿನಲ್ಲಿ, ಅಗೋ, ನನ್ನ ಮುಂದೆ ಒಂದು ದ್ರಾಕ್ಷೇ ಗಿಡ; ಅದರಲ್ಲಿ ಮೂರು ಬಳ್ಳಿಗಳು. ಅವು ಮೊಳಿತು, ಹೂವರಳಿತು; ಅದರ ಗೊಂಚಲುಗಳು ಹಣ್ಣಾದವು. ಮತ್ತು ಫರೋನನ ಪಾತ್ರೆ ನನ್ನ ಕೈಯಲ್ಲಿರಲಾಗಿ, ನಾನು ಆ ದ್ರಾಕ್ಷೇ ಹಣ್ಣುಗಳನ್ನು ತೆಗೆದು, ಆ ಪಾತ್ರೆಯಲ್ಲಿ ಹಿಂಡಿ, ಆ ಪಾತ್ರೆಯನ್ನು ಫರೋನನ ಕೈಯಲ್ಲಿ ಕೊಟ್ಟೆನು. ಯೋಸೆಫನು ಹೇಳಿದ್ದೇನಂದರೆ: ಅದರ ಅರ್ಥ ಇದೇ—ಆ ಮೂರು ಬಳ್ಳಿಗಳು ಮೂರು ದಿನಗಳಾಗಿವೆ; ಇನ್ನು ಮೂರು ದಿನಗಳಾದ ಮೇಲೆ ಫರೋನನು ನಿನ್ನ ತಲೆಯನ್ನು ಎತ್ತಿ, ನಿನ್ನನ್ನು ತಿರಿಗಿ ನಿನ್ನ ಸ್ಥಳದಲ್ಲಿ ಇಡುವನು. ಆದರೆ ನೀನು ಸುಖದಿಂದಿರುವಾಗ, ನನ್ನನ್ನು ನೆನಪು ಮಾಡಿ ಕೊಂಡು, ಫರೋನನ ಬಳಿಯಲ್ಲಿ ನನ್ನನ್ನು ತಿಳಿಯ ಮಾಡಿ, ಈ ಮನೆಯೊಳಗಿಂದ ನನ್ನನ್ನು ಹೊರಗೆ ಬರ ಮಾಡ ಬೇಕು. ಅವನು ಒಳ್ಳೇ ಅರ್ಥ ಹೇಳಿದನೆಂದು ರೊಟ್ಟಿಗಾರನು ನೋಡಿದಾಗ, ಅವನು ಯೋಸೆಫನಿಗೆ: ನನ್ನ ಕನಸಿನಲ್ಲಿಯೂ, ಅಗೋ, ಮೂರು ರೊಟ್ಟಿ ಪುಟ್ಟಿಗಳು ನನ್ನ ತಲೆಯ ಮೇಲೆ ಇದ್ದವು; ಮೇಲಿನ ಪುಟ್ಟಿಯಲ್ಲಿ ಫರೋನನಿಗೋಸ್ಕರ

ಎಲ್ಲಾ ವಿಧವಾದ ಆಹಾರವಿತ್ತು; ಮತ್ತು ನನ್ನ ತಲೆಯ ಮೇಲೆ ಇರುವ ಪುಟ್ಟಿಯೊಳಗಿಂದ ಪಕ್ಷಿಗಳು ಅದನ್ನು ತಿಂದವು, ಅಂದನು. ಆಗ ಯೋಸೆಫನು ಪ್ರತ್ಯುತ್ತರವಾಗಿ: ಅದರ ಅರ್ಥ ಇದೇ—ಆ ಮೂರು ಪುಟ್ಟಿಗಳು ಮೂರು ದಿನಗಳು. ಇನ್ನು ಮೂರು ದಿನಗಳಾದ ಮೇಲೆ ಫರೋನನು ನಿನ್ನ ತಲೆಯನ್ನು ನಿನ್ನಿಂದ ಎತ್ತಿ, ನಿನ್ನನ್ನು ಮರದ ಮೇಲೆ ತೂಗ ಹಾಕುವನು; ಮತ್ತು ಪಕ್ಷಿಗಳು ನಿನ್ನ ಮಾಂಸವನ್ನು ತಿಂದು ಬಿಡುವವು, ಅಂದನು. ಮೂರನೇ ದಿವಸದಲ್ಲಿ ಫರೋನನು ತನ್ನ ಸೇವಕರೆಲ್ಲರಿಗೆ ಔತಣವನ್ನು ಮಾಡಿಸಿ, ಪಾನದಾಯಕನನ್ನು ತಿರಿಗಿ ಉದ್ಯೋಗದಲ್ಲಿ ಇರಿಸಿ, ರೊಟ್ಟಿಗಾರನನ್ನು ತೂಗ ಹಾಕಿಸಿದನು. ಆದಾಗ್ಯೂ ಪಾನದಾಯಕನು ಯೋಸೆಫನನ್ನು ನೆನಪು ಮಾಡಿ ಕೊಳ್ಳದೆ, ಅವನನ್ನು ಮರತು ಬಿಟ್ಟನು.

೩) ಎರಡು ವರುಷಗಳಾದ ಮೇಲೆ ಫರೋನನು ಕನಸು ಕಂಡನು—ಅಗೋ, ಅವನು ನದಿಯ ಬಳಿಯಲ್ಲಿ ನಿಂತಿರಲಾಗಿ, ನದಿಯೊಳಗಿಂದ ಒಳ್ಳೇ ಆಕಾರವೂ ಕೊಬ್ಬಿದ ಮಾಂಸವೂ ಉಳ್ಳ ಏಳು ಹಸಗಳು ಏರಿ ಬಂದು, ಹುಲ್ಲಿನಲ್ಲಿ ಮೇಯುತ್ತಿದ್ದವು. ಮತ್ತು ಅಗೋ, ಕೆಟ್ಟ ಆಕಾರವುಳ್ಳ ಮಾಂಸಹೀನವಾದ ಬೇರೆ ಏಳು ಹಸಗಳು ಅವುಗಳ ಹಿಂದೆ ನದಿಯೊಳಗಿಂದ ಏರಿ ಬಂದು, ಆ ಏಳು ಒಳ್ಳೇ ಹಸಗ



ಳನ್ನು ತಿಂದು ಬಿಟ್ಟವು. ಆಗ ಫರೋನನು ಎಚ್ಚತ್ತನು. ಮತ್ತು ಅವನು ನಿದ್ದೆ ಮಾಡಿ, ಎರಡನೇ ಸಾರಿ ಕನಸು ಕಂಡನು—ಅಗೋ, ಒಂದೇ ದಂಟಿನಲ್ಲಿ ಏಳು ಒಳ್ಳೇ ತೆನೆಗಳು ಇದ್ದವು. ಅವುಗಳ ಹಿಂದೆ ಹೀನವಾದಂಥ, ಮೂಡಣ ಘಾಳಿಯಿಂದ ಶೀದು ಹೋದಂಥ ಏಳು

ತೆನೆಗಳು ಮೊಳಿತವು. ಆ ಹೀನ ತೆನೆಗಳು ಪುಷ್ಟಿಯುಳ್ಳ ಕೊಬ್ಬಿದ ಏಳು ತೆನೆಗಳನ್ನು ನುಂಗಿ ಬಿಟ್ಟವು. ಆಗ ಫರೋನನು ಎಚ್ಚತ್ತು, ಅದು ಸ್ವಪ್ನವೆಂದು ತಿಳು ಕೊಂಡನು. ಬೆಳಿಗ್ಯೆ ಅವನು ಐಗುಪ್ತದ ಎಲಾ ಮಂತ್ರಗಾರರನ್ನೂ ಜ್ಞಾನಿಗಳನ್ನೂ ಕರಿಸಿ, ಅವರಿಗೆ ತನ್ನ ಕನಸು ತಿಳಿಸಿದನು; ಆದರೆ ಅವುಗಳ ಅರ್ಥವನ್ನು ಫರೋನನಿಗೆ ಹೇಳುವವನ್ಯಾವನೂ ಇರಲಿಲ್ಲ. ಆಗ ಪಾನದಾಯಕನು ಫರೋನನಿಗೆ ಹೇಳಿದ್ದೇನಂದರೆ:—ನಾನೂ ರೊಟ್ಟಿಗಾರನೂ ಶೆರೆಮನೆಯಲ್ಲಿ ಇದ್ದಾಗ, ಒಂದೇ ರಾತ್ರಿಯಲ್ಲಿ ಕನಸನ್ನು ಕಂಡೆವು. ಅಲ್ಲಿ ನಮ್ಮ ಸಂಗಡ ಇದ್ದ ಇಬ್ರಿಯನಾದ ಯೌವನಸ್ಥನು ನಮ್ಮಲ್ಲಿ ಒಬ್ಬೊಬ್ಬನಿಗೆ ಕನಸಿನ ಅರ್ಥವನ್ನು ಹೇಳಿದನು. ಮತ್ತು ಅವನು ಹೇಳಿದ ಅರ್ಥದ ಹಾಗೆಯೇ ಆಯಿತು. ಆಗ ಫರೋನನು ಯೋಸೇಫನನ್ನು ಕರೇ ಕಳುಹಿಸಿದನು. ಯೋಸೇಫನು ಅವನ ಬಳಿಗೆ ಬಂದಾಗ: ಇಗೋ, ನಾನು ಕನಸು ಕಂಡಿದ್ದೇನೆ; ಅದರ ಅರ್ಥ ಹೇಳುವವನಿಲ್ಲ. ಆದರೆ ನೀನೇ ಕನಸು ಕೇಳಿ, ಅದರ ಅರ್ಥ ಹೇಳುತ್ತೀ ಎಂಬ ವರ್ತಮಾನವನ್ನು ಕೇಳಿದ್ದೇನೆ, ಅಂದನು. ಅದಕ್ಕೆ ಯೋಸೇಫನು: ಅದು ನನ್ನಿಂದಾಗದು, ದೇವರು ಫರೋನನ ಕ್ಷೇಮಕ್ಕೆ ಉತ್ತರ ಕೊಡುವನು, ಅಂದನು. ಆಗ ಫರೋನನು ಯೋಸೇಫನಿಗೆ ತಾನು ಕಂಡ ಕನಸುಗಳನ್ನು ತಿಳಿಸಿದನು. ಆಗ ಯೋಸೇಫನು ಫರೋನನಿಗೆ ಹೇಳಿದ್ದೇನಂದರೆ:—ಫರೋನನ ಎರಡು ಕನಸುಗಳು ಒಂದೇ. ಆ ಏಳು ಒಳ್ಳೇ ಹಸಗಳು ಏಳು ವರುಷಗಳು; ಆ ಏಳು ಒಳ್ಳೇ ತೆನೆಗಳು ಏಳು ವರುಷಗಳು. ಅದು ಒಂದೇ ಕನಸು. ಮತ್ತು ಆ ಹೀನವಾದ ಕೆಟ್ಟ ಏಳು ಹಸಗಳು ಏಳು ವರುಷಗಳು. ಮತ್ತು ಆ ಏಳು ಬಡ ತೆನೆಗಳು ಬರವು ಇರುವ ಏಳು ವರುಷಗಳು. ಇಗೋ, ಐಗುಪ್ತ ದೇಶದಲ್ಲೆಲ್ಲಾ ಮಹಾ ಸುಭಿಕ್ಷೆ ಇರುವ ಏಳು ವರುಷಗಳು ಬರುತ್ತವೆ, ಮತ್ತು ಅವುಗಳ ಮೇಲೆ ಬರವು ಉಳ್ಳ ಏಳು ವರುಷಗಳು ಬರುತ್ತವೆ; ಅದರಲ್ಲಿ ಆ ಸುಭಿಕ್ಷೆ ಎಲ್ಲಾ ಮರತು ಹೋಗುವದು. ಇದಲ್ಲದೆ ಆ ಕನಸು ಫರೋ

ನನಿಗೆ ಎರಡು ಸಾರಿ ಬಿದ್ದದರಿಂದ, ಆ ಕಾರ್ಯವು ದೇವರಿಂದ ಸ್ಥಿರವಾಗಿ ಅವನು ಅದನ್ನು ಮಾಡ ತ್ವರೆ ಪಡುವನು. ಹೀಗಿರುವದರಿಂದ. ಈಗ ಫರೋನನು ವಿವೇಕಿಯಾದ ಬುದ್ಧಿಯುಳ್ಳ ಮನುಷ್ಯನನ್ನು ನೋಡಿ ಕೊಂಡು, ಐಗುಪ್ತ ದೇಶದ ಮೇಲೆ ಇಡಲಿ. ಇವನು ಆ ಸುಭಿಕ್ಷೆಯ ಏಳು ವರುಷಗಳಲ್ಲಿ ಆಗುವ ಆಹಾರದ ಐದರಲ್ಲಿ ಒಂದು ಪಾಲು ತಕ್ಕೊಂಡು, ಕೂಡಿಸಿ, ಪಟ್ಣಗಳಲ್ಲಿ ಇಟ್ಟು ಕೊಂಡು, ಕಾಯಲಿ. ಆ ಆಹಾರವು ಬರಲಿಕ್ಕಿರುವ ಬರದ ಏಳು ವರುಷಗಳಿಗೋಸ್ಕರ ಇರಲಿ; ಹೀಗೆ ದೇಶವು ಬರದಿಂದ ಹಾಳಾಗದು.

ಈ ಮಾತು ಫರೋನನಿಗೆ ಒಳ್ಳೇದೆಂದು ತೋಚಿತು. ಅವನು ಯೋಸೆಫನಿಗೆ: ನಿನ್ನ ಹಾಗೆ ವಿವೇಕಿಯೂ ಬುದ್ಧಿವಂತನೂ ಇಲ್ಲ; ನೀನೇ ನನ್ನ ಮನೆತನದ ಮೇಲೆಯೂ ಐಗುಪ್ತ ದೇಶದ ಎಲ್ಲಾದರ ಮೇಲೆಯೂ ಇರ ಬೇಕು; ಸಿಂಹಾಸನದಲ್ಲಿ ಮಾತ್ರ ನಾನು ನಿನಗಿಂತ ದೊಡ್ಡವನಾಗಿರುವೆನು, ಅಂದನು. ಮತ್ತು ಫರೋನನು ತನ್ನ ಕೈಯೊಳಗಿನ ಉಂಗರವನ್ನು ತೆಗೆದು, ಯೋಸೆಫನ ಕೈಯಲ್ಲಿ ಇಟ್ಟನು. ನಾರು ಮಡಿಯ ವಸ್ತ್ರಗಳನ್ನು ಅವನಿಗೆ ಹೊದ್ದಿಸಿ, ಚಿನ್ನದ ಸರಪಣಿಯನ್ನು ಅವನ ಕೊರಳಿಗೆ ಹಾಕಿ, ತನಗಿದ್ದ ಎರಡನೇ ರಥದ ಮೇಲೆ ಅವನನ್ನು ಏರಿಸಿದನು. ಮತ್ತು: ಮೊಣಕಾಲೂರಿರಿ ಎಂದು, ಅವನ ಮುಂದೆ ಕೂಗಿದರು. ಇದಲ್ಲದೆ ಫರೋನನು ಯೋಸೆಫನಿಗೆ: ನಾನೇ ಫರೋನನು, ನಿನ್ನ ಅಪ್ಪಣೆ ಇಲ್ಲದೆ ಐಗುಪ್ತ ದೇಶದಲ್ಲೆಲ್ಲಾ ಯಾವನಾದರೂ ಕೈಯನ್ನಾಗಲಿ, ಕಾಲನ್ನಾಗಲಿ ಎತ್ತ ಬಾರದು, ಅಂದನು. ಮತ್ತು ಅವನು ಓನಿನ ಯಾಜಕನಾದ ಪೋಟಿಫಾರನ ಮಗಳಾಗಿರುವ ಅಸಿನಾತಳನ್ನು ಹೆಂಡತಿಯಾಗಿ ಕೊಟ್ಟನು. ಆ ಮೇಲೆ ಯೋಸೆಫನು ಐಗುಪ್ತ ದೇಶವನ್ನೆಲ್ಲಾ ಹಾದು ಹೋದನು. ಯೋಸೆಫನು ಫರೋನನ ಮುಂದೆ ನಿಂತಾಗ ಮೂವತ್ತು ವರುಷದವನಾಗಿದ್ದನು.

II. 12. 14. III. 4. 41.

# ೧೭. ಯೋಸೆಫನ ಸಹೋದರರು ಐಗುಪ್ತಕ್ಕೆ ಬಂದದ್ದು.

(ಉತ್ಪತ್ತಿ. ೪೨.)

ಆ ದೇಶವು ಸುಭಿಕ್ಷೆಯ ಏಳು ವರುಷಗಳಲ್ಲಿ ರಾಶಿಯಾಗಿ ಫಲ ಕೊಟ್ಟಿತು. ಹೀಗಿರಲಾಗಿ ಯೋಸೆಫನು ಸಮುದ್ರದ ಮರಳಿನ ಹಾಗೆ ಬಹು ಹೆಚ್ಚಾಗಿರುವ ಧಾನ್ಯವನ್ನು ಲೆಖ್ಖವಿಲ್ಲದಷ್ಟು ಕೂಡಿಸಿಟ್ಟನು. ಇದಲ್ಲದೆ ಬರದ ವರುಷಗಳು ಬರುವದಕ್ಕಿಂತ ಮುಂಚೆ ಯೋಸೆಫನಿಗೆ ಇಬ್ಬರು ಮಕ್ಕಳು ಹುಟ್ಟಿದರು. ಚೊಚ್ಚಲನಿಗೆ ಮನಾಸೆಯೆಂದೂ ಎರಡನೆಯವನಿಗೆ ಎಫ್ರಾಯಿಮನೆಂದೂ ಹೆಸರಿಟ್ಟನು. ಮತ್ತು ಯೋಸೆಫನು ಹೇಳಿದ ಹಾಗೆ ಬರದ ಏಳು ವರುಷಗಳು ಆರಂಭವಾದವು. ಹೀಗೆ ಎಲ್ಲಾ ದೇಶಗಳಲ್ಲಿ ಬರ ಬಂತು. ಆದರೆ ಐಗುಪ್ತ ದೇಶದಲ್ಲೆಲ್ಲ ರೊಟ್ಟಿ ಇತ್ತು. ಎಲ್ಲಾ ಭೂಮಿಯ ಮೇಲೆ ಬರವು ಕಠಿಣವಾಗಿದ್ದದರಿಂದ ಎಲ್ಲಾ ದೇಶದವರು ಯೋಸೆಫನಿಂದ ಧಾನ್ಯ ಕೊಂಡು ಕೊಳ್ಳುವದಕ್ಕೆ ಬಂದರು. ಆಗ ಯಾಕೋಬನು ಐಗುಪ್ತದಲ್ಲಿ ಧಾನ್ಯ ಉಂಟೆಂದು ಕಂಡಾಗ, ತನ್ನ ಮಕ್ಕಳಿಗೆ: ನಾವು ಸಾಯದೆ ಬದುಕುವ ಹಾಗೆ, ನೀವು ಐಗುಪ್ತಕ್ಕೆ ಇಳಿದು ಹೋಗಿ, ನಮಗೆ ಅಲ್ಲಿಂದ ಧಾನ್ಯವನ್ನು ಕೊಂಡು ಕೊಳ್ಳಿರಿ, ಅಂದನು. ಹೀಗೆ ಯೋಸೆಫನ ಹತ್ತು ಮಂದಿ ಅಣ್ಣಂದಿರು ಐಗುಪ್ತದಲ್ಲಿ ಧಾನ್ಯವನ್ನು ಕೊಂಡು ಕೊಳ್ಳುವದಕ್ಕೆ ಹೋದರು. ಆದರೆ ಯೋಸೆಫನ ತಮ್ಮನಾದ ಬೆನ್ಯಮೀನನನ್ನು ಯಾಕೋಬನು ಕಳುಹಿಸಲಿಲ್ಲ. ಯೋಸೆಫನು ದೇಶವೆಲ್ಲಾದರ ಮೇಲೆ ಅಧಿಕಾರಿಯಾಗಿದ್ದದರಿಂದ ಜನರಿಗೆಲ್ಲಾ ಧಾನ್ಯವನ್ನು ಮಾರುವವನು ಅವನೇ. ಹೀಗಿರಲಾಗಿ ಅವನ ಅಣ್ಣಂದಿರು ಬಂದು, ಅವನಿಗೆ ಅಡ್ಡ ಬಿದ್ದರು. ಅವನು ಅವರನ್ನು ನೋಡಿ, ಅವರನ್ನು ತಿಳಿದು, ತಿಳಿಯದವನ ಹಾಗೆ ಅವರಿಗೆ ನಡಿಸಿ, ಕಠಿಣವಾದ



ಮಾತುಗಳನ್ನಾಡಿ, ಅವರಿಗೆ: ಎಲ್ಲಿಂದ ಬಂದಿರಿ? ಅಂದನು. ಅದಕ್ಕವರು: ಆಹಾರವನ್ನು ಕೊಂಡು ಕೊಳ್ಳುವದಕ್ಕೆ ಕಾನಾನ್ ದೇಶದಿಂದ ಬಂಧೆವು, ಅಂದರು. ಮತ್ತು ಯೋಸೆಫನು, ತಾನು ಅವರನ್ನು ಕುರಿತು ಕಂಡ ಕನಸುಗಳನ್ನು ನೆನಪು ಮಾಡಿ ಕೊಂಡು, ಅವರಿಗೆ: ನೀವು ಚಾರರು, ಅಂದನು. ಆಗಲವರು: ಅಲ್ಲ, ಸ್ವಾಮಿಾ, ನಿನ್ನ ದಾಸರು ಆಹಾರ ಕೊಂಡು ಕೊಳ್ಳುವದಕ್ಕೆ ಬಂದಿದ್ಧಾರೆ. ನಾವೆಲ್ಲರು ಒಬ್ಬ ಮನುಷ್ಯನ ಮಕ್ಕಳು. ನಾವು ಯಥಾರ್ಥರು; ನಿನ್ನ ದಾಸರು ಚಾರರಲ್ಲ; ನಾವು ಹನ್ನೆರಡು ಮಂದಿ ಮಕ್ಕಳು ಆಗಿದ್ಧೇವೆ. ಇಗೋ, ಚಿಕ್ಕವನು ನಮ್ಮ ತಂದೆಯ ಸಂಗಡ ಇದ್ಧಾನೆ; ಮತ್ತು ಒಬ್ಬನು ಇಲ್ಲವೆಂದು ಹೇಳಿದರು. ಆಗ ಯೋಸೆಫನು: ನಿಮ್ಮನ್ನು ಪರೀಕ್ಷಿಸುತ್ತೇನೆ, ಹ್ಯಾಗಂದರೆ—ನಿಮ್ಮ ಚಿಕ್ಕ ಸಹೋದರನನ್ನು ಕರಕೊಳ್ಳಲಿಕ್ಕೆ ನಿಮ್ಮಲ್ಲಿಂದ ಒಬ್ಬನನ್ನು ಕಳುಹಿಸಿರಿ. ಆದರೆ ನೀವು ಕಟ್ಟಲ್ಪಡ ಬೇಕೆಂದು ಹೇಳಿ, ಅವರನ್ನು ಮೂರು ದಿನ ಕಾವಲಿಯಲ್ಲಿ ಇಟ್ಟನು. ಮೂರನೇ ದಿವಸದಲ್ಲಿ ಯೋ

ಸೇಫನು ಅವರಿಗೆ: ಇದನ್ನು ಮಾಡಿ ಬದುಕಿರಿ. ನಾನು ದೇವರಿಗೆ
ಭಯ ಪಡುವವನಾಗಿದ್ದೇನೆ. ನೀವು ಯಥಾರ್ಥರಾಗಿದ್ದರೆ, ನಿಮ್ಮ
ಲ್ಲಿ ಒಬ್ಬನು ನೀವು ಇದ್ದ ಕಾವಲಿ ಮನೆಯಲ್ಲಿ ಇರಲಿ. ಆದರೆ ನೀವು
ಹೋಗಿ, ನಿಮ್ಮ ಮನೆಯ ಅವಶ್ಯಕ್ಕೆ ಧಾನ್ಯವನ್ನು ತಕ್ಕೊಂಡು ಹೋ
ಗಿರಿ. ಮತ್ತು ನಿಮ್ಮ ತಮ್ಮನನ್ನು ನನ್ನ ಬಳಿಗೆ ಕರ ಕೊಂಡು ಬನ್ನಿರಿ;
ಆಗ ನಿಮ್ಮ ಮಾತು ನಿಶ್ಚಯವೆಂದು ಕಂಡು ಬರುವದು; ನೀವು ಸಾ
ಯದೆ ಇರುವಿರಿ, ಅಂದನು. ಆಗಲವರು ತಮ್ಮೊಳಗೆ: ನಿಶ್ಚಯವಾಗಿ
ನಮ್ಮ ತಮ್ಮನಿಗೋಸ್ಕರ ನಮ್ಮ ಮೇಲೆ ಅಪರಾಧ ಉಂಟು; ಅವನು
ನಮ್ಮನ್ನು ಬೇಡಿ ಕೊಂಡಾಗ, ಅವನ ಪ್ರಾಣಸಂಕಟವನ್ನು ನೋ
ಡಿ, ಆಲೈಸದೆ ಹೋದೆವು. ಆದ ಕಾರಣ ಈ ಸಂಕಟ ನಮ್ಮ ಮೇಲೆ
ಬಂತು, ಅಂದು ಕೊಂಡರು. ಆಗ ರೂಬೆನನು ಅವರಿಗೆ: ಹುಡು
ಗನ ವಿಷಯದಲ್ಲಿ ಪಾಪ ಮಾಡ ಬೇಡಿರೆಂದು, ನಾನು ನಿಮಗೆ ಹೇಳಲಿ
ಲ್ಲವೋ? ಆದರೆ ನೀವು ಕೇಳಲಿಲ್ಲ. ಆದ ಕಾರಣ ಈಗ, ಇಗೋ, ಅವ
ನ ರಕ್ತ ವಿಚಾರಿಸಲ್ಪಟ್ಟದೆ, ಅಂದನು. ಆದರೆ ಯೋಸೇಫನು ಅದನ್ನು
ಕೇಳುತ್ತಾನೆಂದು, ಅವರಿಗೆ ತಿಳಿಯಲಿಲ್ಲ; ಯಾಕಂದರೆ ದ್ವಿಭಾಷಿ ಅ
ವರ ಮಧ್ಯದಲ್ಲಿ ಇದ್ದನು. ಆಗಲವನು ಅವರ ಕಡೆಯಿಂದ ತೊಲಗಿ
ಹೋಗಿ, ಅತ್ತನು. ಮತ್ತು ತಿರಿಗಿ ಅವರ ಬಳಿಗೆ ಬಂದು, ಅವರ ಸಂಗ
ಡ ಮಾತಾಡಿ, ಸಿಮೆಯೋನನನ್ನು ತೆಗೆದು, ಅವರ ಮುಂದೆ ಕಟ್ಟಿ
ಹಾಕಿಸಿದನು. ಆ ಮೇಲೆ ಯೋಸೇಫನು ಅವರ ಚೀಲಗಳಲ್ಲಿ ಧಾನ್ಯ
ತುಂಬಿಸಿ: ಒಬ್ಬೊಬ್ಬನ ಚೀಲದಲ್ಲಿ ಅವನವನ ಹಣವನ್ನು ತಿರಿಗಿ ಇ
ಡಿಸಿ, ಮಾರ್ಗಕೋಸ್ಕರ ಅವರಿಗೆ ಆಹಾರ ಕೊಡ ಬೇಕೆಂದು ಆಜ್ಞಾ
ಪಿಸಿದನು. ಹಾಗೆಯೇ ಅವರು ಹೊರಟು ಹೋದರು. ಮತ್ತು ಅ
ವರು ತಮ್ಮ ತಂದೆಯಾದ ಯಾಕೋಬನ ಬಳಿಗೆ ಬಂದಾಗ, ತಮಗೆ
ಸಂಭವಿಸಿದ್ದನ್ನೆಲ್ಲಾ ಅವನಿಗೆ ತಿಳಿಸಿದರು. ಮತ್ತು ಅವರು ತಮ್ಮ ಚೀ
ಲಗಳನ್ನು ಬರಿದು ಮಾಡುವಾಗ, ಅಗೋ, ಒಬ್ಬೊಬ್ಬನ ಹಣದ ಗಂ
ಟು ಅವನವನ ಚೀಲದಲ್ಲಿ ಇತ್ತು. ಅವರೂ ಅವರ ತಂದೆಯೂ

ಇದನ್ನು ನೋಡಿ, ಭಯ ಪಟ್ಟರು. ಮತ್ತು ಯಾಕೋಬನು: ನೀವು ನನ್ನನ್ನು ಮಕ್ಕಳಿಲ್ಲದವನಾಗ ಮಾಡಿದ್ಧೀರಿ; ಯೋಸೆಫನೂ ಇಲ್ಲ, ಸಿಮೆಯೋನನೂ ಇಲ್ಲ, ಬೆನ್ಯಮೀನನನ್ನು ಕರಕೊಂಡು ಹೋಗುವದಕ್ಕೆ ಇದ್ಧೀರಿ. ಇದೆಲ್ಲಾ ನನಗೆ ವಿರೋಧವಾಗಿದೆ; ನನ್ನ ಮಗನು ನಿಮ್ಮ ಸಂಗಡ ಹೋಗ ಬಾರದು ಎಂದು ಹೇಳಿದನು.

II. 18. 64.

---

## ೧೮. ಯೋಸೆಫನ ಸಹೋದರರು ಎರಡನೇ ಸಾರಿ ಐಗುಪ್ತಕ್ಕೆ ಬಂದದ್ದು.

(ಉತ್ಪತ್ತಿ. ೪೩—೪೫.)

೧) ಆದರೆ ಆ ಬರವು ದೇಶದಲ್ಲಿ ಘೋರವಾಯಿತು. ಮತ್ತು ಅವರು ಐಗುಪ್ತದಿಂದ ತಂದ ಧಾನ್ಯವು ತೀರಿದ ಮೇಲೆ, ಯಾಕೋಬನು ತನ್ನ ಮಕ್ಕಳಿಗೆ: ತಿರಿಗಿ ಹೋಗಿ, ನಮಗೆ ಸ್ವಲ್ಪ ಆಹಾರ ಕೊಂಡುಕೊಳ್ಳಿರಿ, ಅಂದನು. ಆಗ ಯೆಹೂದನು ಹೇಳಿದ್ದೇನಂದರೆ: ಆ ಮನುಷ್ಯನು ನಮಗೆ— ನಿಮ್ಮ ತಮ್ಮನು ನಿಮ್ಮ ಸಂಗಡ ಇದ್ದರೆ ಹೊರ್ತು, ನನ್ನ ಮುಖವನ್ನು ನೋಡ ಕೂಡದೆಂದು ನಮಗೆ ದೃಢವಾಗಿ ನಿರ್ಣಯಿಸಿ, ಹೇಳಿದನು. ಅದಕ್ಕೆ ಇಸ್ರಯೇಲನು: ಯಾಕೆ ಆ ಮನುಷ್ಯನಿಗೆ ನಿಮಗೆ ಇನ್ನೊಬ್ಬ ತಮ್ಮನಿದ್ಧಾನೆಂದು ಹೇಳಿ, ನನಗೆ ಕೇಡು ಮಾಡಿದಿರಿ? ಅಂದಾಗ, ಅವರು: ಆ ಮನುಷ್ಯನು ನಮ್ಮ ವಂಶವನ್ನೆಲ್ಲಾ ಕೇಳಿದದರಿಂದ, ನಾವು ತಿಳಿಸ ಬೇಕಾಯಿತು. ಮತ್ತು ಯೆಹೂದನು: ಆ ಹುಡುಗನನ್ನು ನನ್ನ ಸಂಗಡ ಕಳುಹಿಸು; ನಾನು ಅವನಿಗೋಸ್ಕರ ಹೊಣೆಯಾಗಿರುವೆನು, ಅಂದನು. ಆಗ ಅವರ ತಂದೆ: ಹಾಗಿದ್ದರೆ, ದೇಶದ ಉತ್ತಮವಾದ ವಸ್ತುಗಳನ್ನು ನಿಮ್ಮ ಪಾತ್ರೆಗಳಲ್ಲಿ ತಕ್ಕೊಂಡು, ಆ ಮನುಷ್ಯನಿಗೆ ಕಾಣಿಕೆಯಾಗಿ ಕೊಡಿರಿ. ಮತ್ತು ಎರಡಷ್ಟು ಹಣ ನಿಮ್ಮ ಕೈಯಲ್ಲಿ ತಕ್ಕೊಳ್ಳಿರಿ. ನಿಮ್ಮ ಚೀಲಗಳಲ್ಲಿ ಹಾಕಿ,

ಹಿಂದಕ್ಕೆ ಕೊಟ್ಟ ಹಣವನ್ನು ಸಹ ತಿರಿಗಿ ತಕ್ಕೊಂಡು ಹೋಗಿರಿ. ಒಂ
ದು ವೇಳೆ ಅದು ತಪ್ಪಾಗಿದ್ದೀತು. ಮತ್ತು ನಿಮ್ಮ ತಮ್ಮನನ್ನು ತ
ಕ್ಕೊಂಡು, ಆ ಮನುಷ್ಯನ ಬಳಿಗೆ ಹೋಗಿರಿ. ಸರ್ವ ಶಕ್ತನಾದ ದೇ
ವರು ಅವನ ಸನ್ನಿಧಿಯಲ್ಲಿ ನಿಮಗೆ ದಯ ಕೊಟ್ಟು, ಅವನು ಸಿಮೆ
ಯೋನನನ್ನೂ ಬೆನ್ಯಮೀನನನ್ನೂ ಕಳುಹಿಸಿ ಬಿಡುವ ಹಾಗೆ ಮಾಡ
ಲಿ. ಆದರೆ ನಾನು ಮಕ್ಕಳಿಲ್ಲದವನಾಗ ಬೇಕಾದರೆ, ಆಗುತ್ತೇನೆ, ಅಂ
ದನು. ಹೀಗೆ ಅವರು ಐಗುಪ್ತಕ್ಕೆ ಇಳಿದು ಹೋಗಿ, ಯೋಸೇಫನ
ಮುಂದೆ ನಿಂತರು. ಅವನು ಬೆನ್ಯಮೀನನನ್ನು ಅವರ ಸಂಗಡ ಕಂ
ಡಾಗ, ತನ್ನ ಉಗ್ರಾಣದವನಿಗೆ: ಈ ಮನುಷ್ಯರನ್ನು ನನ್ನ ಮನೆಗೆ
ಕರ ಕೊಂಡು ಬಂದು, ಮಾಂಸ ಕೊಯಿದು, ಸಿದ್ಧ ಮಾಡು. ಯಾ
ಕಂದರೆ ಅವರು ಮಧ್ಯಾಹ್ನದಲ್ಲಿ ನನ್ನ ಸಂಗಡ ಉಣ್ಣ ಬೇಕು, ಅಂ
ದನು. ಅವರು ಇದನ್ನು ನೋಡಿ, ಭಯ ಪಟ್ಟರು. ಮತ್ತು ಯೋಸೇ
ಫನಿಗೆ ತಾವು ತಕ್ಕೊಂಡ ಕಾಣಿಕೆಯನ್ನು ಕೊಟ್ಟು, ಅವನ ಮುಂದೆ
ಅಡ್ಡ ಬಿದ್ದರು. ಆಗಲವನು ಅವರ ಕ್ಷೇಮ ಸಮಾಚಾರವನ್ನು ಕೇ
ಳಿ: ನೀವು ಹೇಳಿದ ಮುದುಕನಾದ ನಿಮ್ಮ ತಂದೆಗೆ ಕ್ಷೇಮ ಉಂ
ಟೋ? ಅಂದನು. ಅವರು: ಕ್ಷೇಮ ಉಂಟು ಎಂದು ಹೇಳಿ, ಬೊಗ್ಗಿ
ಕೊಂಡು, ಅಡ್ಡ ಬಿದ್ದರು. ಆಗಲವನು ತನ್ನ ತಮ್ಮನಾದ ಬೆನ್ಯಮೀ
ನನನ್ನು ನೋಡಿ: ನೀವು ನನಗೆ ಹೇಳಿದ ನಿಮ್ಮ ಚಿಕ್ಕ ತಮ್ಮನು ಇವ
ನೋ? ಎಂದು ಹೇಳಿ: ನನ್ನ ಮಗನೇ, ದೇವರು ನಿನಗೆ ದಯ ಮಾ
ಡಲಿ, ಅಂದನು. ಮತ್ತು ಯೋಸೇಫನು ಅವಸರ ಪಟ್ಟು, ಅಳುವದಕ್ಕೆ
ಸ್ಥಳ ಹುಡಿಕಿ, ಕೋಣೆಯಲ್ಲಿ ಶೇರಿ, ಅತ್ತನು. ಆಗ ತನ್ನ ಮುಖವನ್ನು
ತೊಳ ಕೊಂಡು, ಹೊರಗೆ ಬಂದು, ಮನಸ್ಸು ಬಿಗಿ ಹಿಡಿದು ಕೊಂಡು:
ರೊಟ್ಟಿ ಇಕ್ಕಿರಿ, ಅಂದನು. ಮತ್ತು ಅವರು ತಮ್ಮ ತಮ್ಮ ಪ್ರಾಯದ
ಪ್ರಕಾರ ಅವನ ಮುಂದೆ ಕೂತಿರಲಾಗಿ, ತಮ್ಮೊಳಗೆ ಆಶ್ಚರ್ಯ ಪಟ್ಟ
ರು. ಮತ್ತು ಅವನು ಅವರಿಗೆ ತನ್ನ ಸನ್ನಿಧಿಯಿಂದ ಮಾನದ ಆಹಾ
ರವನ್ನು ಕಳುಹಿಸಿದಾಗ, ಬೆನ್ಯಮೀನನದು ಅವರೆಲ್ಲರ ಪಾಲಿಗಿಂತ

ಐದಷ್ಟು ದೊಡ್ಡದಾಗಿತ್ತು. ಮತ್ತು ಅವನ ಸಂಗಡ ತಿಂದು ಕುಡಿದು, ತೃಪ್ತರಾದರು.

೨) ಮತ್ತು ಯೋಸೆಫನು ತನ್ನ ಮನೆಯ ಉಗ್ರಾಣದವನಿಗೆ: ಈ ಮನುಷ್ಯರ ಚೀಲಗಳಲ್ಲಿ ಆಹಾರ ತುಂಬಿಸಿ, ಒಬ್ಬೊಬ್ಬನ ಹಣವನ್ನು ಅವನವನ ಚೀಲದ ಬಾಯಿಯಲ್ಲಿ ಇಡು. ಮತ್ತು ನನ್ನ ಬೆಳ್ಳಿಯ ಪಾತ್ರೆಯನ್ನು ಚಿಕ್ಕವನ ಚೀಲದ ಬಾಯಿಯಲ್ಲಿ ಇಡು ಎಂದು ಆಜ್ಞಾಪಿಸಿದನು. ಬೆಳಿಗ್ಯೆ ಅವರು ಪಟ್ಣವನ್ನು ಬಿಟ್ಟು ಹೋದರು. ದೂರ ಹೋಗುವದಕ್ಕಿಂತ ಮುಂಚೆ ಯೋಸೆಫನು ಮನೆಯ ಉಗ್ರಾಣದವನಿಗೆ: ಎದ್ದು, ಆ ಮನುಷ್ಯರ ಹಿಂದೆ ಹತ್ತು; ಅವರು ಶಿಕ್ಕಿದಾಗ: ಯಾಕೆ ನೀವು ಒಳ್ಳೇದಕ್ಕೆ ಪ್ರತಿಯಾಗಿ ಕೇಡನ್ನು ಮಾಡಿದಿರಿ? ಅದು ನನ್ನ ಸ್ವಾಮಿ ಕುಡಿಯುವಂಥಾದ್ದಲ್ಲವೋ? ನೀವು ಹೀಗೆ ಮಾಡಿದದರಿಂದ ಕೆಟ್ಟದ್ದನ್ನು ಮಾಡಿದ್ಧೀರಿ, ಎಂದು ಹೇಳು, ಅಂದನು. ಅವನವರನ್ನು ಹಿಡಿದು, ಈ ಮಾತುಗಳನ್ನು ಅವರಿಗೆ ಹೇಳಿದನು. ಅವರು ಅವನಿಗೆ: ನಮ್ಮ ಸ್ವಾಮಿ ಯಾಕೆ ಇಂಥ ಮಾತುಗಳನ್ನಾಡುತ್ತಾನೆ? ಈ ಪ್ರಕಾರ ಮಾಡುವದು ನಿನ್ನ ದಾಸರಿಗೆ ದೂರವಾಗಿರಲಿ. ಅದು ನಿನ್ನ ದಾಸರಲ್ಲಿ ಯಾವನ ಹತ್ತರ ಶಿಕ್ಕುವದೋ, ಅವನು ಸಾಯಲಿ; ಮತ್ತು ನಾವು ನಮ್ಮ ಸ್ವಾಮಿಗೆ ದಾಸರಾಗಿರುವೆವು, ಅಂದರು. ಆಗ ಅವನು ಹಿರಿಯನ ಮೊದಲ್ಗೊಂಡು ಕಿರಿಯನ ಮಟ್ಟಿಗೂ ಶೋಧಿಸಲಾಗಿ, ಆ ಪಾತ್ರೆ ಬೆನ್ಯಮೀನನ ಚೀಲದಲ್ಲಿ ಶಿಕ್ಕಿತು. ಆಗಲವರು ತಮ್ಮ ವಸ್ತ್ರಗಳನ್ನು ಹರಕೊಂಡು, ಪಟ್ಣಕ್ಕೆ ತಿರಿಗಿ ಬಂದು, ಯೋಸೆಫನ ಮುಂದೆ ನೆಲದಲ್ಲಿ ಬಿದ್ದರು. ಯೋಸೆಫನು ಅವರಿಗೆ: ನೀವು ಮಾಡಿದ ಈ ಕೆಲಸವೇನು? ಅಂದಾಗ, ಯೆಹೂದನು: ನಾವು ನಮ್ಮ ಸ್ವಾಮಿಗೆ ಏನು ಹೇಳೋಣ? ಇಗೋ, ನಾವೂ ಆ ಪಾತ್ರೆ ಯಾವನ ಕೈಯಲ್ಲಿ ಶಿಕ್ಕಿತೋ, ಅವನೂ ನಮ್ಮ ಸ್ವಾಮಿಗೆ ದಾಸರಾಗಿದ್ಧೇವೆ, ಅಂದನು. ಆಗ ಯೋಸೆಫನು: ಹಾಗೆ ಮಾಡುವದು ನನಗೆ ದೂರವಾಗಿರಲಿ. ಯಾವನ ಬಳಿಯಲ್ಲಿ ಆ ಪಾತ್ರೆ

ಶಿಕ್ಕಿತೋ, ಅವನೇ ನನಗೆ ದಾಸನಾಗಿರಲಿ. ಆದರೆ ನೀವು ಸಮಾಧಾನವಾಗಿ ನಿಮ್ಮ ತಂದೆಯ ಬಳಿಗೆ ಹೋಗಿರಿ, ಅಂದನು. ಆಗ ಯೆಹೂದನು ಅವನ ಸಮಿಾಪಕ್ಕೆ ಬಂದು: ಸ್ವಾಮಿಾ, ನಿನ್ನ ದಾಸನ ಮೇಲೆ ಕೋಪ ಮಾಡದೆ ಒಂದು ಮಾತನ್ನು ಹೇಳುವದಕ್ಕೆ ನಿನ್ನ ದಾಸನಿಗೆ ಅಪ್ಪಣೆಯಾಗ ಬೇಕು. ನನ್ನ ತಂದೆಯ ಪ್ರಾಣ ಹುಡುಗನ ಪ್ರಾಣದ ಸಂಗಡ ಕಟ್ಟಲ್ಪಟ್ಟಿರುವದರಿಂದ ಹುಡುಗನು ನಮ್ಮ ಸಂಗಡ ಇರದೆ ಹೋದರೆ, ಅವನು ಸಾಯುವನು. ಮತ್ತು ನಾವು ನಮ್ಮ ತಂದೆಯ ನರೇ ಕೂದಲನ್ನು ದುಖ್ಖದಿಂದ ಪಾತಾಳಕ್ಕೆ ಇಳಿಯ ಮಾಡಿದ ಹಾಗಾಗುವದು. ಯಾಕಂದರೆ, ನಿನ್ನ ದಾಸನಾದ ನಾನು ಆ ಹುಡುಗನಿಗೋಸ್ಕರ ನನ್ನ ತಂದೆಯ ಬಳಿಯಲ್ಲಿ ಹೊಣೆಯಾಗಿ, ಅವನನ್ನು ನಿನ್ನ ಬಳಿಗೆ ತಾರದೆ ಹೋದರೆ, ಎಂದೆಂದಿಗೂ ನನ್ನ ತಂದೆಗೆ ಶಾಪಿಯಾಗಿರುವೆನೆಂದು ಹೇಳಿ ಕೊಂಡಿದ್ದೇನೆ; ಹಾಗಾದರೆ ಈಗ ಆ ಹುಡುಗನಿಗೆ ಬದಲಾಗಿ ನಾನು ನನ್ನ ಸ್ವಾಮಿಗೆ ದಾಸನಾಗಿರಲಿ. ಆ ಹುಡುಗನು ತನ್ನ ಅಣ್ಣಂದಿರ ಸಂಗಡ ಹೋಗಿ ಬಿಡಲಿ. ಯಾಕಂದರೆ ಹುಡುಗನು ನನ್ನ ಬಳಿಯಲ್ಲಿ ಇಲ್ಲದೆ, ನಾನು ಹ್ಯಾಗೆ ನನ್ನ ತಂದೆಯ ಬಳಿಗೆ ಹೋಗಲಿ? ಹೋದರೆ, ನನ್ನ ತಂದೆಗೆ ಬರುವ ಕೇಡನ್ನು ನೋಡ ಬೇಕಾದೀತು, ಅಂದನು. ಆಗ ಯೋಸೇಫನು ಮನಸ್ಸು ಬಿಗಿ ಹಿಡು ಕೊಳ್ಳಲಾರದೆ: ಎಲ್ಲರನ್ನು ನನ್ನ ಬಳಿಯಿಂದ ಹೊರಗೆ ಹೋಗ ಮಾಡಿರೆಂದು, ಕೂಗಿದನು. ಹೀಗೆ ಅವನು ತನ್ನ ಸಹೋದರರಿಗೆ ತನ್ನನ್ನು ತಿಳಿಸಿದಾಗ, ಯಾರೂ ಅವನ ಸಂಗಡ ನಿಲ್ಲಲಿಲ್ಲ. ಆಗಲವನು ತನ್ನ ಶಬ್ದವನ್ನೆತ್ತಿ, ಅತ್ತನು. ಮತ್ತು ತನ್ನ ಸಹೋದರರಿಗೆ: ನಾನು ಯೋಸೇಫನು; ನನ್ನ ತಂದೆ ಇನ್ನೂ ಬದುಕುತ್ತಾನೋ? ಅಂದನು. ಅವನ ಸಹೋದರರು ಕಳವಳ ಪಟ್ಟದರಿಂದ, ಅವನಿಗೆ ಉತ್ತರ ಕೊಡಲಾರದೆ ಹೋದರು. ಆದರೆ ಯೋಸೇಫನು ಅವರಿಗೆ: ನನ್ನ ಹತ್ತರ ಬನ್ನಿರಿ, ಅಂದನು. ಅವರು ಹತ್ತರ ಬಂದರು. ಆಗಲವನು: ನೀವು ಐಗುಪ್ತಕ್ಕೆ ಮಾರಿದ ನಿಮ್ಮ ತಮ್ಮನಾದ ಯೋ

ಸೆಫನು ನಾನೆ; ಆದರೆ ಈಗ ನೀವು ಅದಕ್ಕೆ ದುಖ್ಖ ಪಡ ಬೇಡಿ. ಯಾಕಂದರೆ ಪ್ರಾಣ ಸಂರಕ್ಷಣೆಗೋಸ್ಕರ ದೇವರು ನನ್ನನ್ನು ನಿಮ್ಮ ಮುಂದೆ ಕಳುಹಿಸಿದ್ಧಾನೆ. ಆದರೆ ಈಗ ನೀವು ಅವಸರ ಪಟ್ಟು, ನನ್ನ ತಂದೆಯ ಬಳಿಗೆ ಹೋಗಿ, ಅವನಿಗೆ ಹೇಳ ಬೇಕಾದದ್ದೇನಂದರೆ:—ನಿನ್ನ ಮಗನಾದ ಯೋಸೆಫನು ಹೇಳುವದೇನಂದರೆ: ದೇವರು ನನ್ನನ್ನು ಐಗುಪ್ತಕ್ಕೆಲ್ಲಾ ಯಜಮಾನನಾಗಿ ಇಟ್ಟಿದ್ಧಾನೆ; ತಡ ಮಾಡದೆ ನನ್ನ ಬಳಿಗೆ ಬಾ; ಗೋಷೆನ್ ದೇಶದಲ್ಲಿ ನೀನು ವಾಸವಾಗಿದ್ದು, ನಿನ್ನ ಮಕ್ಕಳೂ ಮೊಮ್ಮಕ್ಕಳೂ ದನ ಕುರಿಗಳೂ ನಿನಗಿದ್ದದ್ದೆಲ್ಲವೂ ಸಹಿತವಾಗಿ, ನನ್ನ ಸಮಿಾಪದಲ್ಲಿ ಇರ ಬೇಕು. ಅಲ್ಲಿ ನಿನ್ನನ್ನು ಸಂರಕ್ಷಿಸುವೆನು; ಯಾಕಂದರೆ ಇನ್ನು ಬರ ಉಳ್ಳ ಐದು ವರುಷಗಳವೆ. ಮತ್ತು ನೀವು ನೋಡಿದ, ನನಗಿರುವ ಎಲ್ಲಾ ಘನವನ್ನೂ ನೀವು ನೋಡಿದ ಸಮಸ್ತವನ್ನೂ ನನ್ನ ತಂದೆಗೆ ತಿಳಿಸಿ, ನನ್ನ ತಂದೆಯನ್ನು ಬೇಗವಾಗಿ ಇಲ್ಲಿ ತರ ಬೇಕು. ಮತ್ತು ಯೋಸೆಫನು ತನ್ನ ತಮ್ಮನಾದ ಬೆನ್ಯಮಿಾನನ ಕುತ್ತಿಗೆಯ ಮೇಲೆ ಬಿದ್ದು, ಅತ್ತನು;



ಬೆನ್ಯಮೀನನೂ ಅತ್ತನು; ಮತ್ತು ತನ್ನ ಸಹೋದರರೆಲ್ಲರಿಗೆ ಮುದ್ದಿಟ್ಟು, ಅತ್ತನು. ಆ ಮೇಲೆ ಅವನ ಸಹೋದರರು ಅವನ ಸಂಗಡ ಮಾತಾಡಿದರು. ಇದಲ್ಲದೆ ಯೋಸೇಫನ ಸಹೋದರರು ಬಂದರೆಂಬ ಸುದ್ದಿಯು ಫರೋನನು ಕೇಳಿದಾಗ, ಅವನು ಯೋಸೇಫನಿಗೆ ಹೇಳಿದ್ದು: ನಿನ್ನ ಸಹೋದರರಿಗೆ ಹೇಳ ಬೇಕಾದದ್ದೇನಂದರೆ—ನಿಮ್ಮ ಚಿಕ್ಕವರಿಗೋಸ್ಕರವೂ ಹೆಂಡರಿಗೋಸ್ಕರವೂ ರಥಗಳನ್ನು ತಕ್ಕೊಂಡು, ನಿಮ್ಮ ತಂದೆಯನ್ನು ತಕ್ಕೊಂಡು ಬನ್ನಿರಿ. ಯಾಕಂದರೆ ಎಲ್ಲಾ ಐಗುಪ್ತ ದೇಶದಲ್ಲಿ ಉತ್ತಮವಾದದ್ದೇ ನಿಮ್ಮದು. ಮತ್ತು ಯೋಸೇಫನು ಅವರಿಗೆ ರಥಗಳನ್ನೂ ಮಾರ್ಗಕ್ಕೋಸ್ಕರ ಆಹಾರವನ್ನೂ ಬದಲು ವಸ್ತ್ರಗಳನ್ನೂ ಬೆನ್ಯಮೀನನಿಗೆ ಮುನ್ನೂರು ರೂಪಾಯಿಗಳನ್ನೂ ಐದು ಬದಲು ವಸ್ತ್ರಗಳನ್ನೂ ಕೊಟ್ಟನು. ಹೀಗೆ ಅವನು ತನ್ನ ಸಹೋದರರನ್ನು ಕಳುಹಿಸಿ: ಮಾರ್ಗದಲ್ಲಿ ಜಗಳಾಡ ಬೇಡಿರೆಂದು ಅಪ್ಪಣೆ ಕೊಟ್ಟನು.

ಬಾ. 81.

---

## ೧೯. ಯಾಕೋಬನೂ ಅವನ ಮಕ್ಕಳೂ ಐಗುಪ್ತಕ್ಕೆ ಹೋದದ್ದು.

(ಉತ್ಪತ್ತಿ. ೪೫—೫೦.)

(ಸೃಷ್ಟಿಯಾದ ಮೇಲೆ ೨೨೯೮.)

೧) ಯೋಸೇಫನ ಸಹೋದರರು ಐಗುಪ್ತವನ್ನು ಬಿಟ್ಟು, ಕಾನಾನ್ ದೇಶಕ್ಕೆ ತಮ್ಮ ತಂದೆಯಾದ ಯಾಕೋಬನ ಬಳಿಗೆ ಬಂದು: ಯೋಸೇಫನು ಇನ್ನೂ ಜೀವದಿಂದಿದ್ದಾನೆ; ಅವನೇ ಐಗುಪ್ತ ದೇಶವನ್ನೆಲ್ಲಾ ಆಳುತ್ತಾನೆಂದು ಅವನಿಗೆ ತಿಳಿಸಿದರು. ಆದರೆ ಅವನು ನಂಬದೆ ಇದ್ದದರಿಂದ, ಅವನ ಹೃದಯವು ಕುಂದಿ ಹೋಯಿತು. ಆಗ ಯೋಸೇಫನು ತಮಗೆ ಹೇಳಿದ ಎಲ್ಲಾ ಮಾತುಗಳನ್ನು ಅವರು ಅವ

ನಿಗೆ ಹೇಳಿದಾಗಲೂ, ಅವನನ್ನು ವೈಯುವದಕ್ಕೆ ಯೋಸೆಫನು ಕಳು ಹಿಸಿದ ರಥಗಳನ್ನು ಅವನು ನೋಡಿದಾಗಲೂ, ಅವನ ಆತ್ಮವು ಉಜ್ಜೀವಿಸಿತು. ಮತ್ತು ಅವನು: ನನ್ನ ಮಗನಾದ ಯೋಸೆಫನು ಇನ್ನು ಜೀವದಿಂದ ಇರುವದೇ ಸಾಕು. ನಾನು ಸಾಯುವದಕ್ಕಿಂತ ಮುಂಚೆ ಹೋಗಿ, ಅವನನ್ನು ನೋಡುವೆನು. ಆಗ ಇಸ್ರಯೇಲನು ತನಗಿದ್ದದ್ದನ್ನೆಲ್ಲಾ ತಕ್ಕೊಂಡು, ಬೆರ್ಷೇಬಕ್ಕೆ ಬಂದು, ತನ್ನ ತಂದೆಯಾದ ಇಸಾಕನ ದೇವರಿಗೆ ಬಲಿಗಳನ್ನು ಅರ್ಪಿಸಿದನು. ಮತ್ತು ದೇವರು ಇಸ್ರಯೇಲನಿಗೆ ರಾತ್ರಿಯ ದರ್ಶನದಲ್ಲಿ: ಯಾಕೋಬನೇ, ಯಾಕೋಬನೇ, ಅಂದನು. ಅವನು: ಇಗೋ, ಇದ್ದೇನೆ, ಅಂದನು. ಆಗಲವನು: ನಿನ್ನ ತಂದೆಯ ದೇವರಾಗಿರುವ ದೇವರು ನಾನೇ; ಐಗುಪ್ತಕ್ಕೆ ಇಳಿದು ಹೋಗುವದಕ್ಕೆ ಭಯ ಪಡ ಬೇಡ; ಯಾಕಂದರೆ ಅಲ್ಲಿ ನಿನ್ನನ್ನು ದೊಡ್ಡ ಜನಾಂಗವಾಗ ಮಾಡುವೆನು. ನಾನು ನಿನ್ನ ಸಂಗಡ ಐಗುಪ್ತಕ್ಕೆ ಇಳಿದು ಹೋಗಿ, ನಿಶ್ಚಯವಾಗಿ ನಿನ್ನನ್ನು ತಿರಿಗಿ ಮೇಲೆ ಬರ ಮಾಡುವೆನು, ಅಂದನು. ಹೀಗೆ ಯಾಕೋಬನೂ ಅವನ ಸಂಗಡ ಅವನ ಎಲ್ಲಾ ಬೀಜವೂ ಐಗುಪ್ತಕ್ಕೆ ಬಂದರು. ಅಲ್ಲಿಗೆ ಬಂದ ಅವನ ಮಕ್ಕಳೂ ಮೊಮ್ಮಕ್ಕಳೂ ಎಲ್ಲಾ ಅರವತ್ತಾರು ಮಂದಿ. ಅವರು ಗೋಷೆನ್ ದೇಶಕ್ಕೆ ಬಂದ ಮೇಲೆ, ಯೋಸೆಫನು ತನ್ನ ತಂದೆಗೆದುರಾಗಿ ಹೋಗಿ, ಅವನನ್ನು ನೋಡಿ, ಅವನ ಕುತ್ತಿಗೆಯ ಮೇಲೆ ಬಿ



ದ್ದು, ಬಹಳವಾಗಿ ಅತ್ತನು. ಆಗ ಇಸ್ರಯೇಲನು ಯೋಸೆಫನಿಗೆ: ನಿನ್ನ ಮುಖವನ್ನು ನೋಡಿದ ಮೇಲೆ, ಈಗ ನಾನು ಸಾಯಲಿ, ಅಂದನು. ಆಗ ಯೋಸೆಫನು ತನ್ನ ತಂದೆಯಾದ ಯಾಕೋಬನನ್ನು ಫರೋನನ ಮುಂದೆ ಕರ ಕೊಂಡು ಹೋದನು. ಯಾಕೋಬನು ಫರೋನನನ್ನು ಆಶೀರ್ವದಿಸಿದನು. ಮತ್ತು ಫರೋನನು ಯಾಕೋಬನಿಗೆ: ನಿನ್ನ ಜೀವದ ವರುಷಗಳು ಎಷ್ಟು? ಅಂದಾಗ, ಯಾಕೋಬನು: ನನ್ನ ಪರವಾಸದ ವರುಷಗಳು ನೂರ ಮೂವತ್ತು; ಅದು ಸ್ವಲ್ಪವೂ ಕೆಟ್ಟವೂ ಆಗಿದ್ದು, ನನ್ನ ತಂದೆಗಳ ಪ್ರಾಯಕ್ಕೆ ಮುಟ್ಟಲಿಲ್ಲ, ಅಂದನು. ಆಗ ಯೋಸೆಫನು ತನ್ನ ತಂದೆಗೂ ತನ್ನ ಸಹೋದರರಿಗೂ ನಿವಾಸವನ್ನು ಕೊಟ್ಟು, ಫರೋನನ ಅಪ್ಪಣೆಯ ಪ್ರಕಾರ ಐಗುಪ್ತ ದೇಶದ ಉತ್ತಮವಾದದರಲ್ಲಿ ಸ್ವಾಸ್ಥ್ಯವನ್ನು ಕೊಟ್ಟನು. ಹೀಗೆ ಇಸ್ರಯೇಲನವರು ಗೋಷೆನ್ ಶೀಮೆಯಲ್ಲಿ ವಾಸ ಮಾಡಿ, ಅದರಲ್ಲಿ ಬೆಳೆದು, ಬಹಳ ಹೆಚ್ಚಿದರು.

೨) ಮತ್ತು ಯಾಕೋಬನು ಐಗುಪ್ತ ದೇಶದಲ್ಲಿ ಇನ್ನು ಹದಿನೇಳು ವರ್ಷ ಬದುಕಿದನು. ಅವನು ಬದುಕಿದ ವರುಷಗಳು ನೂರ ನಾಲ್ವತ್ತೇಳು. ಅವನು ಸಾಯುವದಕ್ಕಿಂತ ಮುಂಚೆ ಯೋಸೆಫನನ್ನು ಕರೆಸಿ, ಅವನಿಗೆ ಹೇಳಿದ್ದೇನಂದರೆ:—ನಿನ್ನ ಕೈಯನ್ನು ನನ್ನ ಸೊಂಟದ ಕೆಳಗಿಡು. ನನಗೆ ಕೃಪೆಯನ್ನೂ ಸತ್ಯವನ್ನೂ ಮಾಡಿ, ಐಗುಪ್ತದಲ್ಲಿ ನನ್ನನ್ನು ಹೂಣಿಡ ಬೇಡ; ನಾನು ನನ್ನ ತಂದೆಗಳ ಸಂಗಡ ಮಲಗಬೇಕು. ನೀನು ನನ್ನನ್ನು ವೈದು, ಅವರ ಸಮಾಧಿಯಲ್ಲಿ ಹೂಣಿಡು. ಆಗ ಇಸ್ರಯೇಲನಿಗೆ ಸಂಕಟ ಆದಾಗ, ಯೋಸೆಫನು ತನ್ನ ಇಬ್ಬರು ಮಕ್ಕಳಾದ ಮನಾಸೆಯನ್ನೂ ಎಫ್ರಾಯಿಮನನ್ನೂ ಕರ ಕೊಂಡು ಬಂದನು. ಅವನು ಅವರನ್ನು ನೋಡಿ, ಅವರಿಗೆ ಮುದ್ದಿಟ್ಟು, ಅವರನ್ನು ಅಪ್ಪಿ ಕೊಂಡನು. ಮತ್ತು ಯೋಸೆಫನಿಗೆ: ನಿನ್ನ ಮುಖವನ್ನು ನೋಡುವೆನೆಂದು ನಾನು ನೆನಸಲಿಲ್ಲ; ಮತ್ತು ಇಗೋ, ನಿನ್ನ ಬೀಜವನ್ನು ಸಹ ದೇವರು ನನ್ನನ್ನು ನೋಡ ಮಾಡಿದ್ದಾನೆ, ಅಂದನು.

ಆಗ ಯೋಸೆಫನು ಎಫ್ರಾಯಿಮನನ್ನು ಇಸ್ರಯೇಲನ ಎಡ ಕಡೆಗೂ ಮನಾಸೆಯನ್ನು ಅವನ ಬಲ ಕಡೆಗೂ ನಿಲ್ಲಿಸಿದನು. ಆದರೆ ಇಸ್ರಯೇಲನು ತನ್ನ ಬಲ ಕೈಯನ್ನು ಎಫ್ರಾಯಿಮನ ತಲೆಯ ಮೇಲೆಯೂ, ಎಡ ಕೈಯನ್ನು ಮನಾಸೆಯ ತಲೆಯ ಮೇಲೆಯೂ ಇಟ್ಟು, ಅವರನ್ನು ಆಶೀರ್ವದಿಸಿ, ಹೇಳಿದ್ದೇನಂದರೆ:—ನನ್ನ ತಂದೆಗಳಾದ ಅಬ್ರಹಾಮನೂ ಇಸಾಕನೂ ಯಾವನ ಮುಂದೆ ನಡೆದರೋ, ಆ ದೇವರು, ನಾನು ಹುಟ್ಟಿದಂದಿನಿಂದ ಇಂದಿನ ಪರ್ಯಂತರ ನನ್ನನ್ನು ಕಾಪಾಡಿದ ದೇವರು, ಎಲ್ಲಾ ಕೇಡಿನಿಂದ ತಪ್ಪಿಸಿದ ದೂತನು ಈ ಹುಡುಗರನ್ನು ಆಶೀರ್ವದಿಸಲಿ. ಅವರು ಭೂಮಿಯಲ್ಲಿ ಬಹಳವಾಗಿ ಹೆಚ್ಚಲಿ. ಯೋಸೆಫನು ಇದನ್ನು ನೋಡಿದಾಗ, ತನ್ನ ತಂದೆಯ ಬಲ ಕೈಯನ್ನು ಹಿಡಿದು, ಎಫ್ರಾಯಿಮನ ತಲೆಯಿಂದ ತೆಗೆದು, ಮನಾಸೆಯ ತಲೆಯ ಮೇಲೆ ಇಡಲಿಕ್ಕಿದ್ದು, ತನ್ನ ತಂದೆಗೆ: ಅಪ್ಪಾ, ಹಾಗಲ್ಲ; ಇವನೇ ಚೊಚ್ಚಲನು; ಇವನ ತಲೆಯ ಮೇಲೆ ಬಲಗೈ ಇಡು, ಅಂದಾಗ, ಅವನ ತಂದೆಯು ಒಲ್ಲದೆ: ತಿಳೀತು, ಮಗನೇ, ತಿಳೀತು; ಅವನು ಸಹ ಜನವಾಗುವನು, ಅವನು ಸಹ ದೊಡ್ಡವನಾಗುವನು; ಆದಾಗ್ಯೂ ಅವನ ತಮ್ಮನು ಅವನಿಗಿಂತ ದೊಡ್ಡವನಾಗುವನು, ಅಂದನು. ಮತ್ತು ಇಸ್ರಯೇಲನು ಯೋಸೆಫನಿಗೆ: ಇಗೋ, ನಾನು ಸಾಯುತ್ತೇನೆ; ಆದರೆ ದೇವರು ನಿಮ್ಮ ಸಂಗಡ ಇದ್ದು, ನಿಮ್ಮನ್ನು ನಿಮ್ಮ ತಂದೆಗಳ ದೇಶದಲ್ಲಿ ಶೇರಿಸುವನು, ಅಂದನು. ಆಗ ಯಾಕೋಬನು ತನ್ನ ಮಕ್ಕಳನ್ನು ಕರೆಸಿ, ಮುಂದಿನ ಕಾಲದಲ್ಲಿ ಅವರಿಗೆ ಸಂಭವಿಸುವದನ್ನು ತಿಳಿಸಿ, ಒಬ್ಬೊಬ್ಬನಿಗೆ ಒಂದು ಆಶೀರ್ವಾದದ ಮಾತನ್ನು ಹೇಳಿದನು. ಯೆಹೂದನಿಗೆ ಚೊಚ್ಚಲತನದ ಆಶೀರ್ವಾದ ಕೊಟ್ಟು, ಹೇಳಿದ್ದು ಯಾವದಂದರೆ:—ನಿನ್ನನ್ನು ನಿನ್ನ ಸಹೋದರರು ಹೊಗಳುವರು. ನಿನ್ನ ಕೈ ನಿನ್ನ ಶತ್ರುಗಳ ಹೆಡಕಿನ ಮೇಲೆ ಇರುವದು. ದಂಡವು ಯೆಹೂದನಿಂದಲೂ ಮುದ್ರೆಯ ಕೋಲು ಅವನ ಕಾಲುಗಳ ನಡುವೆಯಿಂದಲೂ ಶೀಲೋ ಬರುವ ಪರಿಯಂತರ ತೊಲ

ಗದು. ಜನಗಳು ಅವನಿಗೆ ವಿಧೇಯವಾಗಿರುವದು. (ಶೀಲೋ ಅಂದರೆ ವಿಶ್ರಾಂತಿ; ಈ ಮಾತಿನಿಂದ ಕ್ರಿಸ್ತನ ಬರುವಿಕೆ ಸೂಚಿಸಿ ಅದೆ.) ಅವನು ತನ್ನ ಮಕ್ಕಳಿಗೆ ಇದನ್ನು ಆಜ್ಞಾಪಿಸಿ ಮುಗಿಸಿದ ಮೇಲೆ ತೀರಿ ಹೋಗಿ, ತನ್ನ ಜನರ ಸಂಗಡ ಕೂಡಿಸಲ್ಪಟ್ಟನು. ಆಗ ಯೋಸೆಫನು ತನ್ನ ತಂದೆಯ ಮುಖದ ಮೇಲೆ ಬಿದ್ದು, ಅತ್ತು, ಅವನಿಗೆ ಮುದ್ದಿಟ್ಟನು. ಮತ್ತು ಯೋಸೆಫನು ತನ್ನ ತಂದೆಗೆ ಸುಗಂಧ ಹಾಕಬೇಕೆಂದು ತನ್ನ ದಾಸರಾದ ವೈದ್ಯರಿಗೆ ಅಪ್ಪಣೆ ಕೊಟ್ಟನು. ಐಗುಪ್ತ್ಯರು ಯಾಕೋಬನಿಗೋಸ್ಕರ ಎಪ್ಪತ್ತು ದಿವಸ ಅತ್ತರು. ಆ ಮೇಲೆ ಯೋಸೆಫನು ತನ್ನ ತಂದೆಯನ್ನು ಹೂಣಿಡುವದಕ್ಕೆ ಕಾನಾನ್ ದೇಶಕ್ಕೆ ಏರಿ ಹೋದನು. ಅವನ ಸಂಗಡ ಫರೋನನ ದಾಸರೂ ಐಗುಪ್ತ ದೇಶದ ಹಿರಿಯರೂ ಯೋಸೆಫನ ಮನೆಯವರೂ ಅವನ ಸಹೋದರರೂ ಏರಿ ಹೋದರು. ಹೀಗೆ ಯಾಕೋಬನ ಮಕ್ಕಳು ಅವನು ಅವರಿಗೆ ಆಜ್ಞಾಪಿಸಿದ ಪ್ರಕಾರ ಮಾಡಿ, ಅವನನ್ನು ಕಾನಾನ್ ದೇಶಕ್ಕೆ ತಕ್ಕೊಂಡು ಹೋಗಿ, ಮಕ್ಫೆಲ ಹೊಲದ ಗವಿಯಲ್ಲಿ ಹೂಣಿಟ್ಟರು. ತರುವಾಯ ಯೋಸೆಫನೂ ಅವನ ಸಂಗಡ ಹೋದವರೆಲ್ಲರೂ ತಿರಿಗಿ ಐಗುಪ್ತಕ್ಕೆ ಬಂದರು.

೩) ಆಗ ತಮ್ಮ ತಂದೆ ಸತ್ತು ಹೋದದ್ದನ್ನು ಯೋಸೆಫನ ಸಹೋದರರು ನೋಡಿದಾಗ, ಒಂದು ವೇಳೆ ಯೋಸೆಫನು ನಮ್ಮನ್ನು ಹಗೆ ಮಾಡಿ, ನಾವು ಅವನಿಗೆ ಮಾಡಿದ ಎಲ್ಲಾ ಕೇಡಿಗೋಸ್ಕರ ಪ್ರತಿ ಮಾಡ್ಯಾನು, ಅಂದರು. ಯೋಸೆಫನು ಅವರಿಗೆ: ಭಯಪಡ ಬೇಡರಿ; ನಾನು ದೇವರಿಗೆ ಅಧೀನನಾಗಿದ್ಧೇನಲ್ಲ? ನೀವು ನನಗೆ ವಿರೋಧವಾಗಿ ಕೇಡನ್ನು ಆಲೋಚಿಸಿದಿರಿ; ಆದರೆ ದೇವರು ಬಹು ಜನರನ್ನು ಬದುಕಿಸುವದಕ್ಕೋಸ್ಕರ ಮೇಲಿಗಾಗಿ ಆಲೋಚನೆ ಮಾಡಿದ್ಧಾನೆ. ನಾನು ನಿಮ್ಮನ್ನೂ ನಿಮ್ಮ ಮಕ್ಕಳನ್ನೂ ಸಂರಕ್ಷಿಸುತ್ತೇನೆಂದು, ಅವರನ್ನು ಸಂತೈಸಿ, ಶಾಂತ ಪಡಿಸಿದನು. ಹಾಗೆ ಯೋಸೆಫನೂ ತನ್ನ ತಂದೆಯ ಮನೆಯವರೂ ಐಗುಪ್ತದಲ್ಲಿ ವಾಸವಾಗಿ

ದ್ದರು. ಇದಲ್ಲದೆ ಯೋಸೇಫನು ತನ್ನ ಸಹೋದರರಿಗೆ: ನಾನು ಸತ್ತ ಮೇಲೆ, ದೇವರು ನಿಶ್ಚಯವಾಗಿ ನಿಮ್ಮನ್ನು ಪರಾಮರಿಸಿ, ತಾನು ಅಬ್ರಹಾಮ್ ಇಸಾಕ್ ಯಾಕೋಬರಿಗೆ ಪ್ರಮಾಣ ಮಾಡಿದ ದೇಶಕ್ಕೆ ಏರಿ ಹೋಗ ಮಾಡುವನು. ಆಗ ನನ್ನ ಎಲುವುಗಳನ್ನು ಇಲ್ಲಿಂದ ಮೇಲಕ್ಕೆ ತಕ್ಕೊಂಡು ಹೋಗಿರಿ ಎಂದು ಹೇಳಿ, ಅವರನ್ನು ಪ್ರಮಾಣ ಮಾಡಿಸಿದನು. ಹೀಗೆ ಯೋಸೇಫನು ನೂರಹತ್ತು ವರುಷದವನಾಗಿ ಸತ್ತನು.

III. 29. 45. 35.

---

## ೨೦. ಯೋಬನು.

೧) ಊಜ ದೇಶದಲ್ಲಿ ಯೋಬನೆಂಬ ಮನುಷ್ಯನಿದ್ದನು. ಅವನು ಸಂಪೂರ್ಣನೂ ನೆಟ್ಟನೆಯವನೂ ದೇವರಿಗೆ ಭಯ ಪಡುವವನೂ ಕೇಡನ್ನು ಬಿಟ್ಟು ತೊಲಗುವವನೂ ಆಗಿದ್ದನು. ಅವನಿಗೆ ಏಳು ಮಂದಿ ಕುಮಾರರೂ ಮೂರು ಮಂದಿ ಕುಮಾರ್ತೆಗಳೂ ಹುಟ್ಟಿದರು. ಮತ್ತು ಅವನ ಆಸ್ತಿ ಏನಂದರೆ—ಏಳು ಸಾವಿರ ಕುರಿ, ಮೂರು ಸಾವಿರ ಒಂಟೆ, ಐನೂರು ಜೋಡು ಎತ್ತು, ಐನೂರು ಹೆಣ್ಣು ಕತ್ತೆ, ಬಹು ಸೇವಕರ ಸಮೂಹವು. ಯೋಬನು ಮೂಡಣ ದೇಶದಲ್ಲಿರುವವರೆಲ್ಲರಿಗಿಂತ ದೊಡ್ಡವನಾಗಿದ್ದನು. ಅವನ ಕುಮಾರರು ಹೋಗಿ, ತಮ್ಮ ತಮ್ಮ ಮನೆಗಳಲ್ಲಿ ಅವನವನ ದಿವಸದಲ್ಲಿ ಔತಣ ಮಾಡಿಸಿ, ಅದಕ್ಕೆ ತಮ್ಮ ಸಹೋದರಿಗಳನ್ನು ಕರಿಸುತ್ತಿದ್ದರು. ಆ ಔತಣದ ದಿವಸಗಳು ಆದ ಮೇಲೆ, ಯೋಬನು: ಒಂದು ವೇಳೆ ನನ್ನ ಮಕ್ಕಳು ದೇವರನ್ನು ಶಪಿಸಿರ ಬಹುದು, ಅಂದು ಕೊಂಡು, ಅವರನ್ನು ಶುದ್ಧ ಮಾಡಿ, ಬೆಳಿಗ್ಗೆ ಎದ್ದು, ಅವರೆಲ್ಲರ ಲೆಖ್ಖದ ಪ್ರಕಾರ ಹೋಮಗಳನ್ನು ಅರ್ಪಿಸಿದನು. ಹಾಗೆಯೇ ಯೋಬನು ಯಾವಾಗಲೂ ಮಾಡುತ್ತಿದ್ದನು.

ಒಂದಾನೊಂದು ದಿನ ಏನಾಯಿತಂದರೆ—ದೇವರ ಮಕ್ಕಳು ಯೆಹೋವನ ಮುಂದೆ ನಿಂತು ಕೊಳ್ಳುವದಕ್ಕೆ ಬಂದಾಗ, ಸೈತಾನನು ಸಹ ಅವರೊಳಗೆ ಬಂದನು. ಆಗ ಯೆಹೋವನು ಅವನಿಗೆ: ಎಲ್ಲಿಂದ ಬಂದಿ? ಅಂದಾಗ, ಸೈತಾನನು ಪ್ರತ್ಯುತ್ತರವಾಗಿ: ಭೂಮಿಯಲ್ಲಿ ತಿರುಗಾಡಿ, ಅದರಲ್ಲಿ ನಡೆದಾಡಿ ಬಂದೆನು, ಅಂದನು. ಮತ್ತು ಯೆಹೋವನು ಸೈತಾನನಿಗೆ: ನನ್ನ ಸೇವಕನಾದ ಯೋಬನನ್ನು ನೋಡಿದಿಯೋ? ನಿಶ್ಚಯವಾಗಿ ಅವನ ಹಾಗೆ ಸಂಪೂರ್ಣನೂ ನೆಟ್ಟನೆಯವನೂ ದೇವರಿಗೆ ಭಯ ಪಡುವವನೂ ಕೇಡನ್ನು ಬಿಟ್ಟು ತೊಲಗುವವನೂ ಭೂಮಿಯಲ್ಲಿ ಒಬ್ಬನೂ ಇಲ್ಲ, ಅಂದನು. ಆಗ ಸೈತಾನನು ಯೆಹೋವನಿಗೆ ಪ್ರತ್ಯುತ್ತರವಾಗಿ: ಯೋಬನು ಸುಮ್ಮನೆ ದೇವರಿಗೆ ಭಯ ಪಡುತ್ತಾನೋ? ನೀನು ಅವನಿಗೂ ಅವನ ಮನೆಗೂ ಅವನಿಗೆ ಉಂಟಾದ ಎಲ್ಲವುಗಳಿಗೂ ಸುತ್ತಲೂ ಬೇಲಿ ಕಟ್ಟಲಿಲ್ಲವೋ? ಅವನ ಕೈಕೆಲಸವನ್ನು ಆಶೀರ್ವದಿಸಿದಿ; ಅವನ ಸಂಪತ್ತು ದೇಶದಲ್ಲಿ ಹಬ್ಬಿಯದೆ. ಆದರೆ ನಿನ್ನ ಕೈ ಚಾಚಿ, ಅವನಿಗೆ ಇದ್ದದ್ದನ್ನೆಲ್ಲಾ ಮುಟ್ಟು! ಅವನು ನಿನ್ನೆದುರಿನಲ್ಲಿ ನಿನ್ನನ್ನು ಶಪಿಸನೇ? ಅಂದನು. ಯೆಹೋವನು ಸೈತಾನನಿಗೆ: ಇಗೋ, ಅವನದೆಲ್ಲಾ ನಿನ್ನ ಕೈಯಲ್ಲಿ ಅದೆ; ಅವನ ಮೇಲೆ ಮಾತ್ರ ನಿನ್ನ ಕೈ ಹಾಕ ಬೇಡ, ಅಂದನು. ತರುವಾಯ ಸೈತಾನನು ಯೆಹೋವನ ಸಮ್ಮುಖದಿಂದ ಹೊರಟನು. ಮತ್ತು ಒಂದು ದಿನ ಅವನ ಕುಮಾರರೂ ಕುಮಾರ್ತೆಗಳೂ ತಮ್ಮ ಹಿರೇ ಅಣ್ಣನ ಮನೆಯಲ್ಲಿ ಉಂಡು, ದ್ರಾಕ್ಷೇ ರಸವನ್ನು ಕುಡಿಯುತ್ತಿದ್ದರು. ಆಗ ಒಬ್ಬ ಸೇವಕನು ಯೋಬನ ಬಳಿಗೆ ಬಂದು, ಹೇಳಿದ್ದೇನಂದರೆ:—ಎತ್ತುಗಳು ಹೂಡುತ್ತಾ, ಕತ್ತೆಗಳು ಅವುಗಳ ಹತ್ತರ ಮೇಯುತ್ತಾ ಇರಲಾಗಿ, ಶೇಬದವರು ಅವುಗಳ ಮೇಲೆ ಬಿದ್ದು, ಅವುಗಳನ್ನು ಸುಲು ಕೊಂಡು ಹೋದರು. ಸೇವಕರನ್ನು ಸಹ ಕತ್ತಿಯಿಂದ ಹೊಡೆದರು; ನಾನೊಬ್ಬನೇ ಮಾತ್ರ ನಿನಗೆ ತಿಳಿಸುವದಕ್ಕೆ ತಪ್ಪಿಸಿಕೊಂಡೆನು. ಅವನು ಇನ್ನೂ ಮಾತಾಡುತ್ತಿರಲು, ಮತ್ತೊಬ್ಬನು

ಬಂದು, ಹೇಳಿದ್ದೇನಂದರೆ:—ಕಸ್ದೀಯರು ಮೂರು ದಂಡುಗಳನ್ನು ಕಟ್ಟಿ, ಒಂಟೆಗಳ ಮೇಲೆ ಬಿದ್ದು, ಅವುಗಳನ್ನು ಸುಲು ಕೊಂಡು ಹೋದರು. ಸೇವಕರನ್ನು ಕತ್ತಿಯಿಂದ ಹೊಡೆದರು; ನಾನೊಬ್ಬನೇ ಮಾತ್ರ ಇದನ್ನು ತಿಳಿಸುವದಕ್ಕೆ ತಪ್ಪಿಸಿ ಕೊಂಡೆನು. ಇವನು ಇನ್ನೂ ಮಾತಾಡುತ್ತಿರಲು, ಮತ್ತೊಬ್ಬನು ಬಂದು, ಹೇಳಿದ್ದೇನಂದರೆ:—ನಿನ್ನ ಕುಮಾರರೂ ಕುಮಾರ್ತೆಗಳೂ ತಮ್ಮ ಹಿರೇ ಅಣ್ಣನ ಮನೆಯಲ್ಲಿ ಉಂಡು, ದ್ರಾಕ್ಷೇರಸವನ್ನು ಕುಡಿಯುತ್ತಿರಲು, ಅಗೋ, ಕಾಡಿನಿಂದ ದೊಡ್ಡ ಘಾಳಿ ಬಂದು, ಮನೆಯ ನಾಲ್ಕು ಮೂಲೆಗಳಿಗೆ ತಗಲಿದರಿಂದ, ಅದು ಯೌವನಸ್ಥರ ಮೇಲೆ ಬಿತ್ತು; ಅವರು ಸತ್ತರು. ನಾನೊಬ್ಬನೇ ಮಾತ್ರ ತಿಳಿಸುವದಕ್ಕೆ ತಪ್ಪಿಸಿ ಕೊಂಡೆನು. ಆಗ ಯೋಬನು ಎದ್ದು, ತನ್ನ ವಸ್ತ್ರವನ್ನು ಹರಿದು, ತನ್ನ ತಲೆ ಬೋಳಿಸಿ ಕೊಂಡು, ನೆಲಕ್ಕೆ ಬಿದ್ದು, ಹೇಳಿದ್ದೇನಂದರೆ:—ಬೆತ್ತಲೆಯಾಗಿ ನನ್ನ ತಾಯಿಯ ಗರ್ಭಧಿಂದ ಹೊರಟು ಬಂದೆನು; ಬೆತ್ತಲೆಯಾಗಿ ತಿರಿಗಿ ಹೋಗ ಬೇಕು. ಯೆಹೋವನು ಕೊಟ್ಟನು, ಯೆಹೋವನು ತಕ್ಕೊಂಡನು. ಯೆಹೋವನ ಹೆಸರಿಗೆ ಸ್ತುತಿ ಆಗಲಿ! ಇದೆಲ್ಲಾದರಲ್ಲಿ ಯೋಬನು ಪಾಪ ಮಾಡದೆ ದೇವರ ಮೇಲೆ ತಪ್ಪು ಹೊರಿಸಲಿಲ್ಲ.

೨) ಮತ್ತೊಂದು ದಿವಸದಲ್ಲಿ ಯೆಹೋವನ ಬಳಿಯಲ್ಲಿ ನಿಂತು ಕೊಳ್ಳುವದಕ್ಕೆ ದೇವರ ಮಕ್ಕಳು ಬಂದರು. ಅವರೊಳಗೆ ಸೈತಾನನೂ ಬಂದನು. ಆಗ ಯೆಹೋವನು ಸೈತಾನನಿಗೆ: ನೀನು ಎಲ್ಲಿಂದ ಬಂದಿ? ಅಂದನು. ಸೈತಾನನು ಯೆಹೋವನಿಗೆ ಪ್ರತ್ಯುತ್ತರವಾಗಿ: ನಾನು ಭೂಮಿಯಲ್ಲಿ ತಿರುಗಾಡಿ, ಅದರಲ್ಲಿ ನಡೆದಾಡಿ ಬಂದೆನು, ಅಂದನು. ಆಗ ಯೆಹೋವನು ಹೇಳಿದ್ದೇನಂದರೆ:—ನನ್ನ ಸೇವಕನಾದ ಯೋಬನನ್ನು ನೋಡಿದಿಯೋ? ಅವನ ಹಾಗೆ ಸಂಪೂರ್ಣನೂ ನೆಟ್ಟನೆಯವನೂ ದೇವರಿಗೆ ಭಯ ಪಡುವವನೂ ಕೇಡಿನಿಂದ ತೊಲಗುವವನೂ ಭೂಮಿಯಲ್ಲಿ ಯಾವನೂ ಇಲ್ಲ. ಅವನನ್ನು ಸುಮ್ಮನೆ ಕೆಡಿಸುವದಕ್ಕೆ ನೀನು ನನ್ನನ್ನು ಪ್ರೇರೇಪಿಸಿದ್ದರೂ, ಅವನು

ಇನ್ನೂ ತನ್ನ ಸಂಪೂರ್ಣತ್ವದಲ್ಲಿ ದೃಢವಾಗಿ ಇದ್ದಾನೆ. ಅದಕ್ಕೆ ಸೈತಾನನು ಪ್ರತ್ಯುತ್ತರವಾಗಿ: ತೊಗಲಿಗೆ ತೊಗಲು; ತನಗೆ ಉಂಟಾದದ್ದನ್ನೆಲ್ಲಾ ತನ್ನ ಪ್ರಾಣಕ್ಕೋಸ್ಕರ ಮನುಷ್ಯನು ಕೊಡುವನು. ಆದರೆ ನಿನ್ನ ಕೈ ಚಾಚಿ, ಅವನ ಎಲುಬನ್ನೂ ಮಾಂಸವನ್ನೂ ಮುಟ್ಟಿದರೆ, ಅವನು ನಿನ್ನ ಎದುರಿನಲ್ಲಿ ನಿನ್ನನ್ನು ಶಪಿಸನೇ? ಅಂದನು. ಆಗ ಯೆಹೋವನು ಸೈತಾನನಿಗೆ: ಇಗೋ, ಅವನು ನಿನ್ನ ಕೈಯಲ್ಲಿ ಇದ್ದಾನೆ; ಅವನ ಪ್ರಾಣ ಮಾತ್ರ ಕಾಪಾಡು, ಅಂದನು. ಆಗ ಸೈತಾನನು ಯೆಹೋವನ ಸಮುಖದಿಂದ ಹೊರಟು, ಯೋಬನಿಗೆ ಅಂಗಾಲಿನಿಂದ ನೆತ್ತಿಯ ವರೆಗೂ ಕೆಟ್ಟ ಹುಣ್ಣುಗಳು ಬರುವ ಹಾಗೆ ಹೊಡೆದನು. ಆದ ಕಾರಣ ಯೋಬನು ಬೋಕಿ ತಕ್ಕೊಂಡು, ತನ್ನನ್ನು ತುರಿಸಿ ಕೊಂಡು, ಬೂದಿಯಲ್ಲಿ ಕೂತನು. ಆಗಲವನ ಹೆಂಡತಿ ಅವನಿಗೆ: ಇನ್ನೂ ಸಂಪೂರ್ಣತ್ವದಲ್ಲಿ ಧೃಢವಾಗಿದ್ಧೀಯೋ? ದೇವರನ್ನು ಶಪಿಸಿ, ಸಾಯಿ, ಅಂದಳು. ಅವನು ಅವಳಿಗೆ: ಹುಚ್ಚು ಹೆಂಗಸರಲ್ಲಿ ಒಬ್ಬಳು ಮಾತಾಡುವ ಪ್ರಕಾರ ನೀನು ಮಾತಾಡುತ್ತೀ; ದೇವರಿಂದ ಒಳ್ಳೇದನ್ನು ಹೊಂದುತ್ತೇವಲ್ಲಾ? ಕೆಟ್ಟದ್ದನ್ನು ಕೂಡ ಹೊಂದ ಬೇಡವೋ? ಅಂದನು. ಇದೆಲ್ಲಾದರಲ್ಲಿ ಯೋಬನು ತನ್ನ ತುಟಿಗಳಿಂದ ಪಾಪ ಮಾಡಲಿಲ್ಲ.

೩.) ಮತ್ತು ಯೋಬನ ಮೂವರು ಸ್ನೇಹಿತರು—ತೇಮಾನ್ಯನಾದ ಎಲಿಪಾಜನೂ, ಶೂಹ್ಯನಾದ ಬಿಲ್ದದನೂ, ನಾಮಾಥ್ಯನಾದ ಚೋಫರನೂ, ಅವನ ಮೇಲೆ ಬಂದ ಈ ಕೇಡನ್ನೆಲ್ಲಾ ಕೇಳಿದಾಗ, ಅವನಿಗೋಸ್ಕರ ಗೋಳಾಡುವದಕ್ಕೂ ಅವನನ್ನು ಸಂತೈಸುವದಕ್ಕೂ ತಮ್ಮ ತಮ್ಮ ಸ್ಥಳಗಳಿಂದ ಬಂದರು. ಅವರು ದೂರದಿಂದ ತಮ್ಮ ಕಣ್ಣುಗಳನ್ನೆತ್ತಿ, ಅವನ ಗುರ್ತು ತಿಳಿಯದೆ ಅತ್ತು, ತಮ್ಮ ವಸ್ತ್ರಗಳನ್ನು ಹರಿದು, ತಮ್ಮ ತಲೆಗಳ ಮೇಲೆ ಧೂಳನ್ನು ಆಕಾಶದ ಕಡೆಗೆ ಹಾಕಿ ಕೊಂಡರು. ಅವರು ಅವನ ಸಂಗಡ ಏಳು ಹಗಲು ಏಳು ರಾತ್ರಿ ನೆಲದ ಮೇಲೆ ಕೂತು ಕೊಂಡು, ಒಬ್ಬನಾದರೂ ಒಂ

ದು ಮಾತನ್ನೂ ಅವನಿಗೆ ಹೇಳಲಿಲ್ಲ; ಯಾಕಂದರೆ ಅವನ ದುಃಖ ಬಹಳ ದೊಡ್ಡದೆಂದು ನೋಡಿದರು. ಆ ಸ್ನೇಹಿತರು ಯೋಬನ ದುಃಖವನ್ನು ನೋಡಿ, ಅವನು ಗೋಳಾಡುವದನ್ನು ಕೇಳಿ, ಅವನ ಮೇಲೆ ಅಪರಾಧ ಹೊರಿಸಿ: ನಿನ್ನ ಪಾಪಗಳಿಗೋಸ್ಕರ ನೀನು ದೇವರಿಂದ ಶಿಕ್ಷೆ ಹೊಂದಿದಿ ಎಂದು ಹೇಳಿದರು.. ಯೋಬನು ತನ್ನ ನೀತಿಯನ್ನು ಪ್ರಕಟ ಮಾಡಲಿಕ್ಕೆ ಪ್ರಯತ್ನ ಮಾಡುವದರಲ್ಲಿ ಅವರು ಅವನನ್ನು ಬಹಳವಾಗಿ ಗದರಿಸಿದರು.

೪) ಆ ಮೇಲೆ ಯೆಹೋವನು ಯೋಬನಿಗೆ ಬಿರುಘಾಳಿಯೊಳಗಿಂದ ಹೇಳಿದ್ದೇನಂದರೆ:—ನಡುವನ್ನು ಕಟ್ಟು; ನಾನು ನಿನ್ನನ್ನು ಕೇಳುವೆನು; ನೀನು ನನಗೆ ತಿಳಿಸು ಎಂದು ಹೇಳಿ, ಅವನಿಗೆ ಅವನ ಹೀನತೆಯನ್ನು ಮತ್ತು ತನ್ನ ನೀತಿ, ಮಹಿಮೆ, ಸರ್ವಶಕ್ತಿ, ಸರ್ವಜ್ಞಾನಗಳನ್ನು ತೋರಿಸಿ, ಅವನನ್ನು ತಗ್ಗಿಸಿದನು. ಆಗ ಯೋಬನು ಪ್ರತ್ಯುತ್ತರವಾಗಿ ಹೇಳಿದ್ದೇನಂದರೆ:—ನಿನಗೆ ಎಲ್ಲಾ ಸಾಧ್ಯವಾಗಿದೆ; ಯಾವದಕ್ಕಾದರೂ ನಿನ್ನ ಆಲೋಚನೆಗೆ ತಡವಾಗದು ಎಂದು ನಾನು ತಿಳಿದಿದ್ದೇನೆ. ನಾನು ತಿಳಿಯದಂಥ ನನಗೆ ಆಶ್ಚರ್ಯವಾದವುಗಳನ್ನು ಉಚ್ಚರಿಸಿದೆನು. ಈಗ ನಾನು ಕೇಳುತ್ತೇನೆ; ದಯ ಮಾಡಿ, ನೀನು ನನಗೆ ತಿಳಿಸು. ಕಿವಿಯಿಂದ ನಾನು ನಿನ್ನನ್ನು ಕುರಿತು ಕೇಳಿದ್ದೆನು. ಮತ್ತು ಈಗ ನನ್ನ ಕಣ್ಣು ನಿನ್ನನ್ನು ನೋಡಿ ಅದೆ. ಆದದರಿಂದ ಅಸಹ್ಯಸಿ ಕೊಂಡು, ಧೂಳಿಯಲ್ಲಿಯೂ ಬೂದಿಯಲ್ಲಿಯೂ ಕೂತು ಕೊಂಡು, ಪಶ್ಚಾತ್ತಾಪ ಪಡುತ್ತೇನೆ.

ಆ ಮೇಲೆ ಯೆಹೋವನು ತೆಮಾನ್ಯನಾದ ಎಲಿಪಾಜನಿಗೆ ಹೇಳಿದ್ದೇನಂದರೆ:—ನನ್ನ ಕೋಪ ನಿನ್ನ ಮೇಲೆಯೂ ನಿನ್ನ ಸ್ನೇಹಿತರಿಬ್ಬರ ಮೇಲೆಯೂ ಹೊತ್ತಿ ಅದೆ; ಯಾಕಂದರೆ ನೀವು ನನ್ನ ಸೇವಕನಾದ ಯೋಬನ ಪ್ರಕಾರ ನನ್ನ ವಿಷಯವಾಗಿ ನೆಟ್ಟಗಾದವುಗಳನ್ನು ಮಾತಾಡಲಿಲ್ಲ. ಹಾಗಾದರೆ ಈಗ ಏಳು ಎತ್ತು, ಏಳು ಹೋತು ನಿಮಗೋಸ್ಕರ ತಕ್ಕೊಂಡು, ನನ್ನ ಸೇವಕನಾದ ಯೋಬನ ಬಳಿಗೆ

ಬನ್ನಿರಿ; ಅವುಗಳನ್ನು ನಿಮಗೋಸ್ಕರ ಹೋಮಕ್ಕಾಗಿ ಅರ್ಪಿಸಿರಿ. ನನ್ನ ಸೇವಕನಾದ ಯೋಬನು ನಿಮಗೋಸ್ಕರ ಪ್ರಾರ್ಥನೆ ಮಾಡಲಿ; ಅವನ ಮುಖದಾಕ್ಷಿಣ್ಯ ನೋಡುವೆನು. ಹೀಗೆ ತೇಮಾನ್ಯನಾದ ಎಲಿಪಾಜನೂ ಶೂಹ್ಯನಾದ ಬಿಲ್ದದನೂ ನಾಮಾಥ್ಯನಾದ ಚೋಫರನೂ ಹೋಗಿ, ಯೆಹೋವನು ಅವರಿಗೆ ಹೇಳಿದ ಪ್ರಕಾರ ಮಾಡಿದರು. ಮತ್ತು ಯೆಹೋವನು ಯೋಬನ ಮುಖದಾಕ್ಷಿಣ್ಯ ಮಾಡಿದನು.

ಮತ್ತು ಯೋಬನು ತನ್ನ ಸ್ನೇಹಿತರಿಗೋಸ್ಕರ ಪ್ರಾರ್ಥನೆ ಮಾಡುವಾಗ, ಯೆಹೋವನು ಅವನನ್ನು ಎಲ್ಲಾ ಇಕ್ಕಟ್ಟಿನೊಳಗಿಂದ ಬಿಡಿಸಿದನು. ಇದಲ್ಲದೆ ಯೆಹೋವನು ಯೋಬನಿಗೆ ಮುಂಚೆ ಇದ್ದವುಗಳನ್ನೆಲ್ಲಾ ಇಮ್ಮಡಿಸಿ, ಅವನ ಆರಂಭಕ್ಕಿಂತ ಅವನ ಅಂತ್ಯವನ್ನು ಆಶೀರ್ವದಿಸಿದನು. ಹ್ಯಾಗಂದರೆ ಅವನಿಗೆ ಹದಿನಾಲ್ಕು ಸಾವಿರ ಕುರಿಗಳೂ, ಆರು ಸಾವಿರ ಒಂಟೆಗಳೂ, ಸಾವಿರ ಜೋಡು ಎತ್ತುಗಳೂ, ಸಾವಿರ ಹೆಣ್ಣು ಕತ್ತೆಗಳೂ ಇದ್ದವು. ಮತ್ತು ಅವನಿಗೆ ಏಳು ಮಂದಿ ಕುಮಾರರೂ ಮೂರು ಮಂದಿ ಕುಮಾರ್ತೆಗಳೂ ಇದ್ದರು. ಅವನ ಕುಮಾರ್ತೆಗಳ ಹಾಗೆ ಸೌಂದರ್ಯವಾದ ಸ್ತ್ರೀಯರು ದೇಶದಲ್ಲೆಲ್ಲಾ ಕಾಣಲಿಲ್ಲ. ಮತ್ತು ಅವರ ತಂದೆ ಅವರ ಸಹೋದರರ ಮಧ್ಯದಲ್ಲಿ ಅವರಿಗೆ ಬಾಧ್ಯತೆಯನ್ನು ಕೊಟ್ಟನು. ತರುವಾಯ ಯೋಬನು ನೂರ ನಾಲ್ವತ್ತು ವರುಷ ಬದುಕಿ, ಮಕ್ಕಳನ್ನೂ ಮೊಮ್ಮಕ್ಕಳನ್ನೂ ನಾಲ್ಕನೇ ತಲಾಂತರದ ವರೆಗೆ ನೋಡಿದನು. ಮತ್ತು ಯೋಬನು ಮುದುಕನಾಗಿಯೂ ದಿನ ತೃಪ್ತನಾಗಿಯೂ ಸತ್ತನು.

II. 20. III. 39. 40. 16. 47. IV. 19.

---

## ೨೧. ಮೋಶೆಯು.

(ಹೊರಡೋಣ. ೧--೧೦.)

(ಸೃಷ್ಟಿಯಾದ ಮೇಲೆ ೨೪೩೩, ಕ್ರಿಸ್ತನ ಜನ್ಮದ ಮುಂಚೆ ೧೫೭೦.)

೧) ಯೋಸೆಫನೂ ಅವನ ಸಹೋದರರೂ ಸತ್ತ ಮೇಲೆ, ಇಸ್ರಯೇಲ್ ಮಕ್ಕಳು ಬಹಳವಾಗಿ ಹೆಚ್ಚಿ, ದೇಶವನ್ನು ತುಂಬಿಸಿದರು. ಆಗ ಯೋಸೆಫನನ್ನು ಅರಿಯದ ಹೊಸ ಅರಸನು ಐಗುಪ್ತದಲ್ಲಿ ಇದ್ದನು. ಅವನು ತನ್ನ ಜನರಿಗೆ ಹೇಳಿದ್ದೇನಂದರೆ:—ಇಗೋ, ಇಸ್ರಯೇಲ್ ಮಕ್ಕಳ ಜನರು ನಮಗಿಂತ ಬಹಳವೂ ಬಲ ಉಳ್ಳವರೂ ಆಗಿದ್ದಾರೆ. ಯುದ್ಧವು ಬಂತಾದರೆ, ಅವರು ನಮ್ಮ ಶತ್ರುಗಳ ಸಂಗಡ ಕೂಡಿ ಕೊಂಡು, ನಮಗೆ ವಿರೋಧವಾಗಿ ಯುದ್ಧ ಮಾಡಿ, ದೇಶವನ್ನು ಬಿಟ್ಟು ಹೋಗದ ಹಾಗೆ ಅವರಿಗೆ ಯುಕ್ತಿಯುಳ್ಳವರಾಗಿರೋಣ. ಅದು ಕಾರಣ ಅವರನ್ನು ತಮ್ಮ ಬಿಟ್ಟಿಗಳಿಂದ ಶ್ರಮೆ ಪಡಿಸುವ ಹಾಗೆ ಬಿಟ್ಟಿ ಮಾಡಿಸುವ ಮುಖ್ಯಸ್ಥರನ್ನು ಅವರ ಮೇಲೆ ಇ



ಟ್ಟರು. ಆದರೆ ಇವರು ಅವರನ್ನು ಎಷ್ಟು ಶ್ರಮೆ ಪಡಿಸಿದರೋ, ಅಷ್ಟು ಅಧಿಕವಾಗಿ ಅವರು ಹೆಚ್ಚಿ ವಿಸ್ತಾರವಾದರು. ಹೀಗಿರುವದರಿಂದ ಐಗುಪ್ತ್ಯರು ಇಸ್ರಯೇಲ್ ಮಕ್ಕಳಿಂದ ಕಠಿಣವಾಗಿ ಸೇವೆ ಮಾಡಿಸಿ, ಜೇಡಿಮಣ್ಣಿನಲ್ಲಿಯೂ ಇಟ್ಟಿಗೆಗಳಲ್ಲಿಯೂ ಹೊಲದ ಎಲ್ಲಾ ಬೇಸಾಯದಲ್ಲಿಯೂ ಕಠಿಣವಾದ ಕಷ್ಟ ಪಡಿಸಿ, ಅವರ ಜೀವಗಳನ್ನು ಬೇಸರ ಮಾಡಿದರು. ಇದಲ್ಲದೆ ಅರಸು ಇಬ್ರಿಯ ಸೂಲಗಿತ್ತಿಯರ ಸಂಗಡ ಮಾತಾಡಿ, ಅವರಿಗೆ: ನೀವು ಇಬ್ರಿಯ ಹೆಂಗಸರಿಗೆ ಸಹಾಯ ಮಾಡುವಾಗ, ಗಂಡು ಮಗುವಾದರೆ ಅವನನ್ನು ಕೊಂದು ಹಾಕಿರಿ, ಹೆಣ್ಣಾದರೆ, ಬದುಕಲಿ ಎಂದು ಆಜ್ಞಾಪಿಸಿದನು. ಆದರೆ ಸೂಲಗಿತ್ತಿಯರು ದೇವರಿಗೆ ಭಯ ಪಟ್ಟು, ಅರಸನು ತಮಗೆ ಹೇಳಿದ ಪ್ರಕಾರ ಮಾಡಲಿಲ್ಲ. ಆದ ಕಾರಣ ದೇವರು ಅವರಿಗೆ ಒಳ್ಳೇದನ್ನು ಮಾಡಿ, ಅವರಿಗೆ ಮನೆಗಳನ್ನು ಉಂಟು ಮಾಡಿದನು. ಆಗ ಫರೋನನು ತನ್ನ ಜನರಿಗೆಲ್ಲಾ—ಹುಟ್ಟುವ ಗಂಡು ಮಕ್ಕಳನ್ನೆಲ್ಲಾ ನದಿಯಲ್ಲಿ ಹಾಕ ಬೇಕು; ಹೆಣ್ಣು ಮಕ್ಕಳನ್ನೆಲ್ಲಾ ಬದುಕಿಸ ಬೇಕು ಎಂದು ಅಪ್ಪಣೆ ಕೊಟ್ಟನು.

೨) ಆ ಸಮಯದಲ್ಲಿ ಲೇವಿಯ ಮನೆಯವನಾದ ಒಬ್ಬ ಮನುಷ್ಯನು (ಲೇವಿಯ ಮೊಮ್ಮಗನಾದ ಅಮ್ರಾಮ್ ಎಂಬವನು) ಹೋಗಿ, ಲೇವಿಯ ಸಂತಾನದವಳಾದ ಯೊಖೆಬೇದ್ ಎಂಬವಳನ್ನು ಮದುವೆ ಮಾಡಿ ಕೊಂಡನು. ಇವಳು ಒಬ್ಬ ಮಗನನ್ನು ಹೆತ್ತು, ಅವನು ಚಲ್ವಿಕೆಯುಳ್ಳವನೆಂದು ನೋಡಿ, ಅವನನ್ನು ಮೂರು ತಿಂಗಳು ಬಚ್ಚಿಟ್ಟಳು. ಅವನನ್ನು ಇನ್ನೂ ಬಚ್ಚಿಡಲಾರದೆ ಇದ್ದಾಗ, ಅವಳು ಒಂದು ಆಪಿನ ಪೆಟ್ಟಿಗೆಯನ್ನು ತಕ್ಕೊಂಡು, ಕೂಸನ್ನು ಅದರಲ್ಲಿ ಇಟ್ಟು, ನದಿಯ ಅಂಚಿನಲ್ಲಿರುವ ಹುಲ್ಲಿನಲ್ಲಿ ಮಡಗಿದಳು. ಮತ್ತು ಅದಕ್ಕೆ ಏನಾಗುವದೆಂದು ತಿಳು ಕೊಳ್ಳುವದಕ್ಕೆ ದೂರದಲ್ಲಿ ಅದರ ಅಕ್ಕ ನಿಂತು ಕೊಂಡಳು. ಆಗ ಫರೋನನ ಮಗಳು ನದಿಯಲ್ಲಿ ಮಿಯುವದಕ್ಕೆ ಇಳಿದು ಬಂದಳು. ಅವಳು ಹುಲ್ಲಿನಲ್ಲಿರುವ ಪೆ

ಟ್ಟಿಗೆಯನ್ನು ನೋಡಿ, ಅದನ್ನು ತೆರಿಸಿದಳು. ಅದನ್ನು ತೆರೆದಾಗ, ಕೂಸನ್ನು ನೋಡಿದಳು. ಮತ್ತು ಅಗೋ, ಕೂಸು ಅಳುತ್ತಿತ್ತು. ಆ



ಗಲವಳು ಅದರ ಮೇಲೆ ಅಂತಃಕರಣ ಪಟ್ಟು: ಅದು ಇಬ್ರಿಯರ ಮಕ್ಕಳಲ್ಲಿ ಒಂದಾಗಿದ್ಧೀತು, ಅಂದಳು. ಆಗ ಅದರ ಅಕ್ಕ ಫರೋನನ ಮಗಳಿಗೆ: ನಾನು ಹೋಗಿ, ನಿನಗೋಸ್ಕರ ಈ ಕೂಸಿಗೆ ಮೊಲೆ ಕೊಡುವ ಹಾಗೆ ಇಬ್ರಿಯ ಸ್ತ್ರೀಯರಿಂದ ದಾದಿಯನ್ನು ನಿನಗೆ ಕರಕೊಂಡು ಬರಲೋ? ಅಂದಳು. ಅದಕ್ಕವಳು: ಹೋಗು, ಅಂದಳು. ಆ ಹುಡಿಗಿ ಹೋಗಿ, ಕೂಸಿನ ತಾಯಿಯನ್ನು ಕರೆದಳು. ಆಗ ಆ ಸ್ತ್ರೀಯು ಕೂಸನ್ನು ತಕ್ಕೊಂಡು, ಸಾಕಿದಳು. ಈ ಹುಡುಗನು ಬೆಳೆದಾಗ, ಅವನನ್ನು ಫರೋನನ ಮಗಳ ಬಳಿಗೆ ತಕ್ಕೊಂಡು ಹೋದಳು. ಹೀಗೆ ಅವನು ಅವಳಿಗೆ ಮಗನಾದನು. ನೀರೊಳಗಿಂದ ಅವನನ್ನು ಎಳೆದೆನೆಂದು ಅವನಿಗೆ ಮೋಶೆ ಎಂಬ ಹೆಸರಿಟ್ಟಳು. (ಮತ್ತು ಮೋಶೆಯು ಐಗುಪ್ತ್ಯರ ಸಮಸ್ತ ಜ್ಞಾನದಲ್ಲಿ ಉಪದೇಶ ಹೊಂದಿ, ವಾಕ್ಯಗಳಲ್ಲಿಯೂ ಕ್ರಿಯೆಗಳಲ್ಲಿಯೂ ಸಮರ್ಥನಾಗಿದ್ದನು. ಅಪೊ. ಕ್ರಿ. ೭, ೨೨.)

೩) ಅವನು ನಾಲ್ವತ್ತು ವರುಷದವನಾಗಿದ್ದಾಗ, ಇಸ್ರಯೇಲ್ ಮಕ್ಕಳಾದ ತನ್ನ ಸಹೋದರರನ್ನು ಪರಾಮರಿಸ ಬೇಕೆಂದು, ಅವನ ಹೃದಯದಲ್ಲಿ ಹುಟ್ಟಿತು. (ಯಾಕಂದರೆ ವಿಶ್ವಾಸದಿಂದ ಫರೋನನ ಮಗಳ ಮಗನೆಂದು ಹೇಳಲ್ಪಡಲೊಲ್ಲದೆ, ಸ್ವಲ್ಪ ಕಾಲಕ್ಕಿರುವ ಪಾಪ ಭೋಗವನ್ನು ಹೊಂದುವದಕ್ಕಿಂತ, ದೇವರ ಜನರ ಸಂಗಡ ಕಷ್ಟ ಪಡುವದನ್ನು ಆದು ಕೊಂಡನು. ಇಬ್ರಿ. ೧೧, ೨೪. ೨೫.) ಅವನು ಬಿಟ್ಟಿಗಳನ್ನು ನೋಡಿದಾಗ, ಒಬ್ಬ ಐಗುಪ್ತ್ಯನು ಒಬ್ಬ ಇಸ್ರಯೇಲಿನವನನ್ನು ಹೊಡಿಯುವದನ್ನು ಕಂಡನು. ಆಗಲವನು ಐಗುಪ್ತ್ಯನನ್ನು ಹೊಡೆದು ಹಾಕಿ, ಮರಳಿನಲ್ಲಿ ಮುಚ್ಚಿಟ್ಟನು. (ಯಾಕಂದರೆ ತನ್ನ ಕೈಯಿಂದ ದೇವರು ತಮಗೆ ರಕ್ಷಣೆ ಕೊಡುವನೆಂದು, ತನ್ನ ಸಹೋದರರು ತಿಳು ಕೊಳ್ಳುವರೆಂದು ನೆನಸಿದನು. ಆದರೆ ಅವರು ತಿಳು ಕೊಳ್ಳಲಿಲ್ಲ. ಅಪೊ. ಕ್ರಿ. ೭, ೨೫.) ಫರೋನನು ಇದನ್ನು ಕೇಳಿದಾಗ, ಮೋಶೆಯನ್ನು ಕೊಂದು ಹಾಕುವದಕ್ಕೆ ಹುಡಿಕಿದನು. ಆದರೆ ಮೋಶೆ ಓಡಿ ಹೋಗಿ, ಮಿದ್ಯಾನ್ ದೇಶದಲ್ಲಿದ್ದು, ಒಂದು ಭಾವಿಯ ಬಳಿಯಲ್ಲಿ ಕೂತು ಕೊಂಡನು. ಮಿದ್ಯಾನಿನ ಒಬ್ಬ ಯಾಜಕನಿಗೆ ಏಳು ಮಂದಿ ಕುಮಾರ್ತೆಗಳಿದ್ದರು. ಇವರು ತಮ್ಮ ತಂದೆಯ ಕುರಿಗಳಿಗೆ ಕುಡಿಯ ಕೊಡುವದಕ್ಕೋಸ್ಕರ ನೀರು ಶೇದಿ, ದೋಣಿಗಳನ್ನು ತುಂಬಿಸಿದರು. ಕುರುಬರು ಬಂದು, ಅವರನ್ನು ಓಡಿಸಿದಾಗ, ಮೋಶೆ ಎದ್ದು, ಅವರಿಗೆ ಸಹಾಯ ಮಾಡಿ, ಅವರ ಕುರಿಗಳಿಗೆ ಕುಡಿಯ ಕೊಟ್ಟನು. ಅವರು ತಮ್ಮ ತಂದೆಯಾದ ರೆಯುವೇಲನ ಬಳಿಗೆ ಬಂದಾಗ, ಇವನು: ಯಾಕೆ ಈ ಹೊತ್ತು ಬೇಗ ಬಂದಿರಿ? ಅಂದಾಗ, ಅವರು: ಒಬ್ಬ ಐಗುಪ್ತ್ಯನು ಕುರುಬರ ಕೈಗೆ ನಮ್ಮನ್ನು ತಪ್ಪಿಸಿ, ಕುರಿಗಳಿಗೆ ಕುಡಿಯ ಕೊಟ್ಟನು, ಅಂದರು. ಆಗಲವನು: ಅವನು ಎಲ್ಲಿ? ಯಾಕೆ ಅವನನ್ನು ಬಿಟ್ಟು ಬಂದಿರಿ? ಅವನನ್ನು ಕರೆಯಿರಿ; ಅವನು ರೊಟ್ಟಿ ತಿನ್ನಲಿ, ಅಂದನು. ಮತ್ತು ಮೋಶೆ ಆ ಮನುಷ್ಯನ ಸಂಗಡ ವಾಸ ಮಾಡುವದಕ್ಕೆ ಒಪ್ಪಿದನು. ಅವನು ಮೋಶೆ

ಗೆ ತನ್ನ ಮಗಳಾದ ಚಿಪ್ಪೋರಳನ್ನು ಕೊಟ್ಟನು. ಇವಳು ಅವನಿಗೆ ಗೆರ್ಷೋಮನು, ಎಲಿಯೇಜರನು ಎಂಬ ಮಕ್ಕಳನ್ನು ಹೆತ್ತಳು.

೪) ಮೋಶೆ ತನ್ನ ಮಾವನಾದ ಇತ್ರೋನನ (ಇಲ್ಲವೆ ರೆಯುವೇಲ್) ಮಂದೆಯನ್ನು ಮೇಯಿಸುತ್ತಿರಲಾಗಿ, ಹೋರೆಬ್ ಎಂಬ ದೇವಗಿರಿಗೆ ಬಂದನು. ಆಗ ಯೆಹೋವನ ದೂತನು ಪೊದೆಯೊಳಗಿಂದ ಅಗ್ನಿಜ್ವಾಲೆಯಲ್ಲಿ ಅವನಿಗೆ ಕಾಣಿಸಿ ಕೊಂಡನು. ಆಗ ಮೋಶೆ: ನಾನು ಹೋಗಿ, ಈ ದೊಡ್ಡ ನೋಟವನ್ನು ನೋಡುತ್ತೇನೆ, ಅಂದನು. ಅವನು ಹತ್ತರ ಬಂದಾಗ, ದೇವರು ಪೊದೆಯೊಳಗಿಂದ ಅವನಿಗೆ: ಮೋಶೆಯೇ, ಮೋಶೆಯೇ, ಇಲ್ಲಿ ಹತ್ತರ ಬರ ಬೇಡ; ನಿನ್ನ ಪಾದಗಳಿಂದ ಕೆರಗಳನ್ನು ತೆಗೆದು ಹಾಕು; ಯಾಕಂದರೆ ನೀನು ನಿಂತಿರುವ ಸ್ಥಳವು ಪರಿಶುದ್ಧ ಭೂಮಿಯೇ, ಅಂದನು. ಇದಲ್ಲದೆ ನಾನು ನಿನ್ನ ತಂದೆಗಳಾದ ಅಬ್ರಹಾಮ್, ಇಸಾಕ್, ಯಾಕೋಬ್ ಎಂಬವರ ದೇವರಾಗಿದ್ದೇನೆಂದು ಹೇಳಿದನು. ಆಗ ಮೋಶೆ ದೇವರ ಮೇಲೆ ದೃಷ್ಟಿ ಇಡುವದಕ್ಕೆ ಭಯ ಪಟ್ಟು, ಮೋರೆ ಮುಚ್ಚಿ ಕೊಂ



ಡನು. ಆಗ ಯೆಹೋವನು ಹೇಳಿದ್ದೇನಂದರೆ:—ನಾನು ನನ್ನ ಜನರ ದೀನ ಸ್ಥಿತಿಯನ್ನು ಕಂಡೇ ಕಂಡಿದ್ಧೇನೆ; ಅವರ ಕೂಗನ್ನು ಕೇಳಿದ್ಧೇನೆ. ಹೀಗಿರುವದರಿಂದ ಐಗುಪ್ತ್ಯರ ಕೈಯಿಂದ ಅವರನ್ನು ತಪ್ಪಿಸಿ, ಹಾಲೂ ಜೇನೂ ಹರಿಯುವ ದೇಶಕ್ಕೆ ಅವರನ್ನು ಬರ ಮಾಡುವ ಹಾಗೆ, ಇಳಿದು ಬಂದಿದ್ಧೇನೆ. ಈಗ ಇಗೋ, ನೀನು ಹೋಗು; ಫರೋನನ ಬಳಿಗೆ ನಿನ್ನನ್ನು ಕಳುಹಿಸುತ್ತೇನೆ. ನೀನು ಇಸ್ರಯೇಲ್ ಮಕ್ಕಳಾದ ನನ್ನ ಜನರನ್ನು ಐಗುಪ್ತದೊಳಗಿಂದ ಹೊರಗೆ ಬರ ಮಾಡ ಬೇಕು. ಆಗ ಮೋಶೆ ದೇವರಿಗೆ: ಫರೋನನ ಬಳಿಗೆ ಹೋಗುವ ಹಾಗೆಯೂ ಇಸ್ರಯೇಲ್ ಮಕ್ಕಳನ್ನು ಐಗುಪ್ತದೊಳಗಿಂದ ಬರ ಮಾಡುವ ಹಾಗೆಯೂ ನಾನು ಯಾರು? ಅಂದನು. ಆದರೆ ಯೆಹೋವನು: ನಿಶ್ಚಯವಾಗಿ ನಿನ್ನ ಸಂಗಡ ನಾನು ಇರುವೆನು, ಅಂದನು. ಮೋಶೆ ದೇವರಿಗೆ: ಇಗೋ, ನಾನು ಇಸ್ರಯೇಲ್ ಮಕ್ಕಳ ಬಳಿಗೆ ಹೋಗಿ,—ನಿಮ್ಮ ಪಿತೃಗಳ ದೇವರು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ಧಾನೆಂದು ಹೇಳುವಾಗ, ಅವರು,—ಅವನ ಹೆಸರೇನೆಂದು ನನ್ನನ್ನು ಕೇಳಿದರೆ, ನಾನು ಅವರಿಗೆ ಏನನ್ನ ಬೇಕು? ಅಂದನು. ಆಗ ದೇವರು ಮೋಶೆಗೆ: ಇರುವವನೇ ಆಗಿದ್ಧೇನೆ, ಅಂದನು. ಇರುವವನು (ಯೆಹೋವನು) ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ಧಾನೆಂದು ಹೇಳ ಬೇಕು, ಅಂದನು. ಅವರು ನಿನ್ನ ಮಾತನ್ನು ಕೇಳಿದಾಗ, ನೀನೂ ಇಸ್ರಯೇಲ್ ಜನರ ಹಿರಿಯರೂ ಐಗುಪ್ತದ ಅರಸನ ಬಳಿಗೆ ಹೋಗ ಬೇಕು. ಆದಾಗ್ಯೂ ಅರಸನು ನಿಮ್ಮನ್ನು ಬಲವಾದ ಕೈಯಿಂದಲಾದರೂ ಹೋಗ ಗೊಡಿಸುವದಿಲ್ಲವೆಂದು ನನಗೆ ತಿಳಿದದೆ. ಹೀಗಿರುವದರಿಂದ ನನ್ನ ಕೈಯನ್ನು ಚಾಚಿ, ನಾನು ಅದರೊಳಗೆ ಮಾಡುವ ನನ್ನ ಎಲ್ಲಾ ಅದ್ಭುತಗಳಿಂದ ಐಗುಪ್ತವನ್ನು ಹೊಡಿಯುವೆನು. ಆ ಮೇಲೆ ನಿಮ್ಮನ್ನು ಕಳುಹಿಸಿ ಬಿಡುವನು, ಅಂದನು. ಅದಕ್ಕೆ ಮೋಶೆ ಪ್ರತ್ಯುತ್ತರವಾಗಿ ಹೇಳಿದ್ದೇನಂದರೆ:—ಆದರೆ, ಇಗೋ, ನನ್ನನ್ನು ನಂಬರು. ಯೆಹೋವನು ನಿನಗೆ ಕಾಣಿಸಿ ಕೊಳ್ಳಲಿಲ್ಲವೆಂ

ದು ಹೇಳುವರು. ಆಗ ಯೆಹೋವನು ಅವನಿಗೆ: ನಿನ್ನ ಕೈಯಲ್ಲಿ ಇರುವದು ಏನು? ಅಂದಾಗ, ಅವನು: ಒಂದು ಕೋಲು, ಅಂದನು. ಯೆಹೋವನು: ಅದನ್ನು ನೆಲದಲ್ಲಿ ಹಾಕು, ಅಂದನು. ಮೋಶೆ ಅದನ್ನು ನೆಲದಲ್ಲಿ ಹಾಕಲು, ಇಗೋ, ಅದು ಸರ್ಪವಾಯಿತು. ಮೋಶೆ ಅದರ ಎದುರಿನಿಂದ ಓಡಿ ಹೋದನು. ಆಗ ಯೆಹೋವನು ಅವನಿಗೆ: ನಿನ್ನ ಕೈ ಚಾಚಿ, ಅದರ ಬಾಲವನ್ನು ಹಿಡಿ, ಅಂದಾಗ, ಅವನು ಅದನ್ನು ಹಿಡಿದನು. ಆಗಲದು ಅವನ ಕೈಯಲ್ಲಿ ಕೋಲಾಯಿತು. ಮತ್ತು ಯೆಹೋವನು ತಿರಿಗಿ ಅವನಿಗೆ: ನಿನ್ನ ಕೈಯನ್ನು ಉಡಿಯಲ್ಲಿ ಹಾಕು, ಅಂದನು. ಅವನು ಕೈಯನ್ನು ಉಡಿಯಲ್ಲಿ ಹಾಕಿ, ಹೊರಗೆ ತೆಗೆದಾಗ, ಅಗೋ, ಅವನ ಕೈ ಹಿಮದಂತೆ ಕುಷ್ಟ ಉಳ್ಳದ್ದಾಗಿತ್ತು. ಮತ್ತು ಯೆಹೋವನು: ಅದನ್ನು ತಿರಿಗಿ ಉಡಿಯಲ್ಲಿ ಶೇರಿಸು, ಅಂದಾಗ, ಅವನು ಅದನ್ನು ತಿರಿಗಿ ಶೇರಿಸಿ, ಉಡಿಯಿಂದ ಹೊರಗೆ ತೆಗದನು. ಆಗ, ಅಗೋ, ಅದು ತಿರಿಗಿ ಅವನ ಬೇರೆ ಮಾಂಸದ ಹಾಗಿತ್ತು. ಆಗ ದೇವರು: ಈ ಎರಡು ಗುರುತುಗಳನ್ನು ಅವರು ನಂಬದಿದ್ದರೆ, ನದಿಯ ನೀರು ತೆಗೆದು, ಒಣಗಿದ ನೆಲದಲ್ಲಿ ಹೊಯ್ಯ ಬೇಕು; ಆಗ ಅದು ರಕ್ತವಾಗುವದು, ಅಂದನು. ಆದರೆ ಮೋಶೆ ಯೆಹೋವನಿಗೆ: ನಾನು ಮಾತು ಬಲ್ಲವನಲ್ಲ, ಮಂದ ಬಾಯಿಯವನಾಗಿದ್ಧೇನೆ, ಅಂದನು. ಅದಕ್ಕೆ ಯೆಹೋವನು ಅವನಿಗೆ: ಮನುಷ್ಯರಿಗೆ ಬಾಯಿ ಕೊಟ್ಟವನು, ಮತ್ತು ಮೂಕರನ್ನೂ ಕಿವಿಡರನ್ನೂ ದೃಷ್ಟಿಯುಳ್ಳವರನ್ನೂ ಕುರುಡರನ್ನೂ ಉಂಟು ಮಾಡಿದವನು ಯಾರು? ಯೆಹೋವನಾದ ನಾನಲ್ಲವೋ? ಹಾಗಾದರೆ, ಈಗ ಹೋಗು; ನಾನೇ ನಿನ್ನ ಬಾಯಿಯ ಸಂಗಡ ಇದ್ದು, ನೀನು ಮಾತಾಡ ತಕ್ಕದ್ದನ್ನು ನಿನಗೆ ಬೋಧಿಸುವೆನು, ಅಂದನು. ಮೋಶೆ: ಅಯ್ಯೋ, ಕರ್ತನೇ, ಕಳುಹಿಸ ತಕ್ಕವನ ಕೈಯಿಂದ ದಯ ಮಾಡಿ ಕಳುಹಿಸು, ಅಂದಾಗ, ಯೆಹೋವನು ಮೋಶೆಯ ಮೇಲೆ ಕೋಪಗೊಂಡು, ಹೇಳಿದ್ದೇನಂದರೆ:—ನಿನ್ನ ಅಣ್ಣನಾದ ಆರೋನನು ನಿನ್ನೆದುರಿಗೆ ಹೊರಗೆ ಬರುವ

ನು, ನೀನು ಅವನ ಸಂಗಡ ಮಾತಾಡಿ, ಅವನ ಬಾಯಿಯಲ್ಲಿ ಮಾತುಗಳನ್ನು ಇಡ ಬೇಕು. ಅವನು ನಿನಗೆ ಬದಲಾಗಿ ಜನರ ಸಂಗಡ ಮಾತಾಡಲಿ. ಅವನು ನಿನಗೆ ಬಾಯಿಯಾಗಿರುವನು; ನೀನು ಅವನಿಗೆ ದೇವರಾಗಿರುವಿ.

೫) ಮತ್ತು ಆರೋನನು ದೇವಗಿರಿಯ ಹತ್ತರ ಮೋಶೆಗೆ ಎದುರಾಗಿ ಬಂದು, ಅವನಿಗೆ ಮುದ್ದಿಟ್ಟನು. ಆ ಮೇಲೆ ಇವರಿಬ್ಬರು ಹೋಗಿ, ಇಸ್ರಯೇಲ್ ಮಕ್ಕಳ ಹಿರಿಯರನ್ನೆಲ್ಲಾ ಕೂಡಿಸಿದರು. ಮತ್ತು ಯೆಹೋವನು ಮೋಶೆಗೆ ಹೇಳಿದ ಮಾತುಗಳನ್ನೆಲ್ಲಾ ಆರೋನನು ಹೇಳಿ, ಜನರ ಕಣ್ಣುಗಳ ಮುಂದೆ ಗುರುತುಗಳನ್ನು ಮಾಡಿದನು. ಜನರು ನಂಬಿ, ಯೆಹೋವನು ಇಸ್ರಯೇಲ್ ಮಕ್ಕಳನ್ನು ದರ್ಶಿಸಿ, ಅವರ ದೀನ ಸ್ಥಿತಿಯನ್ನು ನೋಡಿದನೆಂದು ಅವರು ಕೇಳಿದಾಗ, ಬೊಗ್ಗಿ ಕೊಂಡು, ಅಡ್ಡ ಬಿದ್ದರು. ತರುವಾಯ ಮೋಶೆಯೂ ಆರೋನನೂ ಹೋಗಿ, ಫರೋನನಿಗೆ: ಇಸ್ರಯೇಲಿನ ದೇವರಾದ ಯೆಹೋವನು, ಅರಣ್ಯದಲ್ಲಿ ಹಬ್ಬವನ್ನು ಆಚರಿಸುವದಕ್ಕೆ ನನ್ನ ಜನರನ್ನು ಕಳುಹಿಸು, ಎಂದು ಹೇಳುತ್ತಾನೆ, ಅಂದರು. ಫರೋನನು ಅವನ ಮಾತನ್ನು ಕೇಳಿ, ಇಸ್ರಯೇಲನ್ನು ಕಳುಹಿಸ ಬೇಕೆಂದು ಅಪ್ಪಣೆ ಕೊಟ್ಟ ಯೆಹೋವನು ಯಾರು? ಈ ಯೆಹೋವನನ್ನು ನಾನರಿಯೆ; ಇಸ್ರಯೇಲನ್ನು ಕಳುಹಿಸುವದಿಲ್ಲ, ಅಂದನು. ಮತ್ತು ಪಾರುಪತ್ಯಗಾರರಿಗೆ ಆಜ್ಞಾಪಿಸಿದ್ದೇನಂದರೆ:—ನೀವು ಇನ್ನು ಇಸ್ರಯೇಲ್ ಜನರಿಗೆ ಇಟ್ಟಿಗೆಗಳನ್ನು ಮಾಡುವದಕ್ಕೋಸ್ಕರ ಮುಂಚಿನ ಹಾಗೆ ಹುಲ್ಲನ್ನು ಕೊಡ ಬೇಡಿರಿ; ಅವರೇ ಹೋಗಿ, ಹುಲ್ಲನ್ನು ಕೂಡಿಸಿ ಕೊಳ್ಳಲಿ. ಆದರೆ ಅವರು ಇದು ವರೆಗೂ ಮಾಡಿದ ಇಟ್ಟಿಗೆಗಳ ಲೆಖ್ಖವನ್ನು ಏನೂ ಕಡಿಮೆ ಮಾಡದೆ, ಅವರಿಗೆ ನೇಮಿಸ ಬೇಕು; ಅವರು ಮೈಗಳ್ಳರು. ಆಗ ಅವರು ಫರೋನನಿಗೆ ಕೂಗಿ: ಯಾಕೆ ನಿನ್ನ ದಾಸರಿಗೆ ಹೀಗೆ ಮಾಡುತ್ತೀ? ಅಂದರು. ಅವನು ಅವರಿಗೆ: ನೀವು ಮೈಗಳ್ಳರು, ನೀವು ಮೈಗಳ್ಳರು; ಆದ ಕಾರಣ,—ನಾವು ಹೋಗಿ ಯೆಹೋವ

ನಿಗೆ ಬಲಿ ಅರ್ಪಿಸೋಣ, ಅನ್ನುತ್ತೀರಿ. ಹಾಗಾದರೆ, ಈಗ ಹೋಗಿ, ಸೇವೆ ಮಾಡಿರಿ, ಅಂದನು. ಅವರು ಫರೋನನನ್ನು ಬಿಟ್ಟು, ಹೊರಗೆ ಬಂದಾಗ, ತಮ್ಮನ್ನು ಎದುರುಗೊಳ್ಳುವದಕ್ಕೆ ನಿಂತಿದ್ದ ಮೋಶೆಯನ್ನೂ ಆರೋನನನ್ನೂ ಕಲತು, ಅವರಿಗೆ: ಯೆಹೋವನು ನಿಮ್ಮನ್ನು ನೋಡಿ, ನ್ಯಾಯ ತೀರಿಸಲಿ; ನೀವೇ ಫರೋನನ ಸನ್ನಿಧಿಯಲ್ಲಿ ನಮ್ಮನ್ನು ಅಪಹಾಸ್ಯ ಮಾಡಿ, ನಮ್ಮನ್ನು ಕೊಲ್ಲುವದಕ್ಕೋಸ್ಕರ ಕತ್ತಿಯನ್ನು ಅವನ ಕೈಯಲ್ಲಿ ಕೊಟ್ಟಿರಿ, ಅಂದನು.

೬) ಆದರೆ ಮೋಶೆಯು ಯೆಹೋವನಿಗೆ ಕೂಗಿದನು. ಮತ್ತು ಯೆಹೋವನು ಮೋಶೆಗೆ ಹೇಳಿದ್ದೇನಂದರೆ:—ಇಗೋ, ನಿನ್ನನ್ನು ಫರೋನನಿಗೆ ದೇವರಾಗಿಡುತ್ತೇನೆ. ಮತ್ತು ನಿನ್ನ ಅಣ್ಣನಾದ ಆರೋನನು ನಿನ್ನ ಪ್ರವಾದಿ ಆಗಿರುವನು. ನಾನು ನಿನಗೆ ಆಜ್ಞಾಪಿಸುವದನ್ನೆಲ್ಲಾ ನೀನು ಮಾತಾಡ ಬೇಕು. ಮತ್ತು ನಿನ್ನ ಅಣ್ಣನಾದ ಆರೋನನು ಫರೋನನ ಮುಂದೆ ಮಾತಾಡ ಬೇಕು, ಆದರೆ ನಾನು ಫರೋನನ ಹೃದಯವನ್ನು ಕಠಿಣ ಪಡಿಸಿ, ನನ್ನ ಗುರುತುಗಳನ್ನೂ ಲಕ್ಷಣಗಳನ್ನೂ ಐಗುಪ್ತ ದೇಶದಲ್ಲಿ ಬಹಳ ಮಾಡುವೆನು. ದೊಡ್ಡ ನ್ಯಾಯತೀರ್ವಿಕೆಗಳಿಂದ ನನ್ನ ಪ್ರಜೆಯನ್ನು ಹೊರಗೆ ಬರ ಮಾಡುವೆನು. ನಾನೇ ಯೆಹೋವನೆಂದು ಐಗುಪ್ತ್ಯರಿಗೆ ತಿಳಿಯ ಬರುವದು. ಆಗ ಮೋಶೆಯೂ ಆರೋನನೂ ಯೆಹೋವನು ತಮಗೆ ಆಜ್ಞಾಪಿಸಿದ ಪ್ರಕಾರ ಮಾಡಿದರು. ಅವರು ಫರೋನನ ಸಂಗಡ ಮಾತಾಡುವಾಗ, ಮೋಶೆ ಎಂಭತ್ತು ವರುಷದವನಾಗಿದ್ದನು. ಆರೋನನು ಎಂಭತ್ತಮೂರು ವರುಷದವನಾಗಿದ್ದನು. ಅವರು ಫರೋನನ ಬಳಿಗೆ ಹೋದರು. ಮತ್ತು ಆರೋನನು ತನ್ನ ಕೋಲನ್ನು ಫರೋನನ ಮುಂದೆ ಬಿಸಾಡಿದಾಗ, ಅದು ಸರ್ಪವಾಯಿತು. ಆಗ ಫರೋನನು ಶೂನ್ಯಗಾರರನ್ನು ಕರೆಸಿ, ಅವರು ತಮ್ಮ ಮಾಟಗಳಿಂದ ಹಾಗೆಯೇ ಮಾಡಿದರು. ಆದರೆ ಆರೋನನ ಕೋಲು ಅವರ ಕೋಲುಗಳನ್ನು ನುಂಗಿ ಬಿಟ್ಟಿತು. ಈ ಪ್ರಕಾರ



ಯೆಹೋವನು ಹೇಳಿದ ಹಾಗೆಯೇ ಫರೋನನ ಹೃದಯವು ಕಠಿಣವಾಯಿತು; ಅವನು ಅವರ ಮಾತು ಕೇಳಲಿಲ್ಲ. ಮತ್ತು ಆರೋನನು ಫರೋನನ ಕಣ್ಣುಗಳ ಮುಂದೆ ತನ್ನ ಕೋಲನ್ನು ಎತ್ತಿ, ನದಿಯಲ್ಲಿರುವ ನೀರನ್ನು ಹೊಡೆದನು. ಆಗ ಆ ನೀರು ರಕ್ತವಾಯಿತು. ಹೀಗೆ ನದಿಯಲ್ಲಿದ್ದ ಮೀನು ಸತ್ತು ಹೋಯಿತು. ಆಗ ಐಗುಪ್ತ್ಯರು ನದಿಯ ನೀರನ್ನು ಕುಡಿಯಲಾರದೆ ಹೋದರು. ಐಗುಪ್ತದ ಮಂತ್ರಗಾರರು ಸಹ ತಮ್ಮ ಮಾಟಗಳಿಂದ ಹಾಗೆಯೇ ಮಾಡಿದ್ದರಿಂದ, ಫರೋನನ ಹೃದಯವು ಕಠಿಣವಾಯಿತು; ಅವನು ಅವರ ಮಾತು ಕೇಳಲಿಲ್ಲ. ಆ ಮೇಲೆ ಆರೋನನು ಯೆಹೋವನ ಅಪ್ಪಣೆಯ ಪ್ರಕಾರ ತನ್ನ ಕೋಲನ್ನು ಐಗುಪ್ತದ ನೀರುಗಳ ಮೇಲೆ ಚಾಚಿದಾಗ, ಕಪ್ಪೆಗಳು ಏರಿ ಬಂದು, ದೇಶವನ್ನು ಮುಚ್ಚಿದವು. ಆದರೆ ಮಂತ್ರಗಾರರು ತಮ್ಮ ಮಾಟಗಳಿಂದ ಹಾಗೆಯೇ ಮಾಡಿದರು. ಆಗ ಫರೋನನು ಮೋಶೆಯನ್ನೂ ಆರೋನನನ್ನೂ ಕರೆಸಿ: ಯೆಹೋವನು ನನ್ನಿಂದಲೂ ನನ್ನ ಜನರಿಂದಲೂ ಈ ಕಪ್ಪೆಗಳನ್ನು ದೂರ ಮಾಡುವ ಹಾಗೆ, ಅವನನ್ನು ಬೇಡಿ ಕೊಳ್ಳಿರಿ; ಆಗ ಇಸ್ರಯೇಲ್ಯರನ್ನು ಕಳುಹಿಸುವೆನೆಂದು ಹೇಳಿದನು. ಮೋಶೆ ಯೆಹೋವನಿಗೆ ಕೂಗಿದನು. ಆಗ ಮೋಶೆ ಹೇಳಿದ ಹಾಗೆ, ಯೆಹೋವನು ಮಾಡಿದನು. ಆ

ಕಪ್ಪೆಗಳೆಲ್ಲಾ ಸತ್ತವು. ಆದರೆ ಫರೋನನು ಉಪಶಮನವಾಯಿತೆಂದು ನೋಡಿದಾಗ, ತನ್ನ ಹೃದಯವನ್ನು ಕಠಿಣ ಮಾಡಿ ಕೊಂಡು, ಅವರ ಮಾತು ಕೇಳಲಿಲ್ಲ. ಮತ್ತು ಆರೋನನು ಕೋಲುಳ್ಳ ಕೈಯನ್ನು ಚಾಚಿ, ಭೂಮಿಯ ಧೂಳನ್ನು ಹೊಡೆದನು. ಆಗ ಮನುಷ್ಯರಲ್ಲಿಯೂ ಪಶುಗಳಲ್ಲಿಯೂ ಹೇನುಗಳಾದವು. ಸಮಸ್ತ ಐಗುಪ್ತ ದೇಶದಲ್ಲಿ ಭೂಮಿಯ ಧೂಳೆಲ್ಲಾ ಹೇನುಗಳಾದವು. ಮಂತ್ರಗಾರರು ಹೇನುಗಳನ್ನು ತರಿಸುವದಕ್ಕೆ ತಮ್ಮ ಮಾಟಗಳಿಂದ ಪ್ರಯತ್ನ ಮಾಡಿದರೂ, ಮಾಡಲಾರದೆ ಹೋದರು. ಆಗ ಮಂತ್ರಗಾರರು ಫರೋನನಿಗೆ: ಇದೇ ದೇವರ ಬೆರಳು, ಅಂದರು. ಆದರೆ ಅವನ ಹೃದಯವು ಕಠಿಣವಾಯಿತು; ಅವನು ಅವರ ಮಾತನ್ನು ಕೇಳಲಿಲ್ಲ.

೭) ಆಗ ಯೆಹೋವನು ಮೋಶೆಗೆ: ಬೆಳಿಗ್ಯೆ ಎದ್ದು, ಫರೋನನ ಮುಂದೆ ನಿಂತುಕೋ. ನೀನು ಅವನಿಗೆ ಹೇಳ ಬೇಕಾದದ್ದೇನಂದರೆ: ಯೆಹೋವನು ಹೀಗೆ ಹೇಳುತ್ತಾನೆ—ನನ್ನ ಜನರು ನನಗೆ ಸೇವೆ ಮಾಡುವ ಹಾಗೆ, ಅವರನ್ನು ಕಳುಹಿಸು. ನೀನು ಅವರನ್ನು ಕಳುಹಿಸದೆ ಹೋದರೆ, ಇಗೋ, ನಾನು ನಿನ್ನ ಮೇಲೆಯೂ ನಿನ್ನ ಜನರ ಮೇಲೆಯೂ ನೊಣಗಳನ್ನು ಕಳುಹಿಸುತ್ತೇನೆ. ಆದರೆ ನಾನೇ ಯೆಹೋವನೆಂದು ನೀನು ತಿಳುಕೊಳ್ಳುವ ಹಾಗೆ, ನನ್ನ ಜನರು ನಿವಾಸಿಸುವ ಗೋಷೆನ್ ದೇಶವನ್ನು ಅಲ್ಲಿ ನೊಣಗಳು ಇರದ ಹಾಗೆ, ಬೇರೆ ಮಾಡುವೆನು. ಹೀಗೆ ನೊಣಗಳು ಬಂದು, ದೇಶವನ್ನು ಕೆಡಿಸಿದವು. ಆಗ ಫರೋನನು ಮೋಶೆಯನ್ನೂ ಆರೋನನನ್ನೂ ಕರೆಸಿ: ನೀವು ಹೋಗಿ, ದೇಶದೊಳಗೆ ನಿಮ್ಮ ದೇವರಿಗೆ ಬಲಿಯರ್ಪಿಸಿರಿ. ನೀವು ದೂರ ಹೋಗ ಬೇಡ, ನನಗೋಸ್ಕರ ಪ್ರಾರ್ಥನೆ ಮಾಡಿರಿ, ಅಂದನು. ಆಗ ಮೋಶೆ ಯೆಹೋವನಿಗೆ ಪ್ರಾರ್ಥನೆ ಮಾಡಿದನು. ಮತ್ತು ಮೋಶೆ ಹೇಳಿದ ಹಾಗೆಯೇ ಯೆಹೋವನು ಮಾಡಿ, ನೊಣಗಳನ್ನು ದೂರ ಮಾಡಿದನು. ಆದರೆ ಫರೋನನು ಈ ಸರ್ತಿ ಸಹ

ತನ್ನ ಹೃದಯವನ್ನು ಕಠಿಣ ಮಾಡಿ ಕೊಂಡು, ಜನರನ್ನು ಕಳುಹಿಸಿ ಬಿಡಲಿಲ್ಲ. ಆ ಮೇಲೆ ಯೆಹೋವನು ಐಗುಪ್ತ್ಯರ ಪಶುಗಳೆಲ್ಲಾ—ಅಂದರೆ ಕುದುರೆ, ಕತ್ತೆ, ಒಂಟೆ, ದನ, ಕುರಿಗಳೂ—ಸತ್ತು ಹೋಗುವ ಹಾಗೆ ಮಹಾ ಕಠಿಣವಾದ ವ್ಯಾಧಿ ಬರ ಮಾಡಿದನು. ಆದರೆ ಇಸ್ರಯೇಲ್ಯರ ಪಶುಗಳಲ್ಲಿ ಒಂದೂ ಸಾಯಲಿಲ್ಲ. ಆದಾಗ್ಯೂ ಫರೋನನ ಹೃದಯವು ಕಠಿಣವಾಗಿದ್ದದರಿಂದ, ಅವನು ಜನರನ್ನು ಕಳುಹಿಸಲಿಲ್ಲ. ಮತ್ತು ಮೋಶೆಯೂ ಆರೋನನೂ ಒಲೆಯ ಬೂದಿಯನ್ನು ತಕ್ಕೊಂಡು, ಫರೋನನ ಮುಂದೆ ಆಕಾಶಕ್ಕೆ ಚೆಲ್ಲಿದರು. ಆಗ ಮನುಷ್ಯರಲ್ಲಿಯೂ ಮೃಗಗಳಲ್ಲಿಯೂ ವಿಸ್ತರಿಸುವ ಬೊಕ್ಕೆಗಳಾಗಿರುವ ಹುಣ್ಣಾಯಿತು. ಇದಲ್ಲದೆ ಮಂತ್ರಗಾರರು ಹುಣ್ಣಿನ ನಿಮಿತ್ತ ಮೋಶೆಯ ಮುಂದೆ ನಿಂತು ಕೊಳ್ಳಲಾರದೆ ಇದ್ದರು. ಆದರೆ ಯೆಹೋವನು ಫರೋನನ ಹೃದಯವನ್ನು ಕಠಿಣ ಮಾಡಿದನು. ಅವನು ಅವರ ಮಾತು ಕೇಳಲಿಲ್ಲಾ. ಆ ತರುವಾಯ ಮೋಶೆಯು ತನ್ನ ಕೋಲನ್ನು ಆಕಾಶಕ್ಕೆ ಚಾಚಿದಾಗ, ಯೆಹೋವನು ಗುಡುಗುಗಳನ್ನೂ ಕಲ್ಲುಮಳೆಯನ್ನೂ ಕೊಟ್ಟನು; ಅಗ್ನಿಯು ಭೂಮಿಗೆ ಇ



ಳಿದು ಬಂತು. ಈ ಕಲ್ಲುಮಳೆ ಸಮಸ್ತ ಐಗುಪ್ತ ದೇಶದಲ್ಲಿ ಮನುಷ್ಯರು ಮೊದಲ್ಗೊಂಡು ಮೃಗಗಳ ವರೆಗೂ ಹೊಲದಲ್ಲಿ ಇದ್ದದ್ದನ್ನೆ

ಲ್ಲಾ ಹೊಡದು, ಮರಗಳನ್ನೆಲ್ಲಾ ಮುರಿದು ಹಾಕಿತು. ಗೋಷೆನ್ ದೇಶದಲ್ಲಿ ಮಾತ್ರ ಕಲ್ಲುಮಳೆ ಇರಲಿಲ್ಲ. ಆಗ ಫರೋನನು ಮೋಶೆಯನ್ನೂ ಆರೋನನನ್ನೂ ಕರೇ ಕಳುಹಿಸಿ, ಅವರಿಗೆ: ಈ ಸಾರಿ ನಾನು ಪಾಪ ಮಾಡಿದ್ಧೇನೆ; ಯೆಹೋವನು ನೀತಿವಂತನು. ಈ ದೈವ ಶಬ್ದಗಳೂ ಕಲ್ಲುಮಳೆಯೂ ಸಾಕಾಗಿರಲಿ; ಅದು ನಿಂತು ಹೋಗುವ ಹಾಗೆ ಯೆಹೋವನನ್ನು ಬೇಡಿ ಕೊಳ್ಳಿರಿ; ನಾನು ನಿಮ್ಮನ್ನು ಕಳುಹಿಸುವೆನು, ಅಂದನು. ಆಗ ಮೋಶೆ ಪಟ್ಣದ ಹೊರಗೆ ಹೋಗಿ, ತನ್ನ ಕೈಗಳನ್ನು ಯೆಹೋವನ ಕಡೆಗೆ ಚಾಚಿದನು. ಗುಡುಗುಗಳೂ ಕಲ್ಲುಮಳೆಯೂ ನಿಂತು ಹೋದವು. ಆದರೆ ಫರೋನನು ಇನ್ನೂ ಪಾಪ ಮಾಡಿ, ತನ್ನ ಹೃದಯವನ್ನು ಕಠಿಣ ಮಾಡಿ ಕೊಂಡನು.

ತಿರಿಗಿ ಮೋಶೆ ತನ್ನ ಕೋಲನ್ನು ಚಾಚಿದನು. ಆಗ ಯೆಹೋವನು ಮೂಡಣ ಘಾಳಿಯನ್ನು ಬರ ಮಾಡಿದನು. ಅದರಿಂದ ಸಮಸ್ತ ಐಗುಪ್ತ ದೇಶದ ಮೇಲೆ ಮಿಡಿತೆಗಳು ಬಂದವು; ಈ ಮಿಡಿತೆಗಳು ಐಗುಪ್ತದ ಎಲ್ಲಾ ಮೇರೆಗಳಲ್ಲಿ ಬಹು ಸಮೂಹವಾಗಿ ಇಳುಕೊಂಡು, ದೇಶವನ್ನು ಕತ್ತಲೆ ಮಾಡಿ, ಕಲ್ಲುಮಳೆ ಉಳಿಸಿದ ಮರಗಳ ಎಲ್ಲಾ ಫಲವನ್ನೂ ಹೊಲದ ಹಸುರು ಗಿಡಗಳನ್ನೂ ತಿಂದು ಬಿಟ್ಟವು; ಆಗ ಫರೋನನು ಮೋಶೆಯನ್ನೂ ಆರೋನನನ್ನೂ ತ್ವರೆಯಾಗಿ ಕರೆಸಿ: ನಾನು ನಿಮ್ಮ ದೇವರಾದ ಯೆಹೋವನಿಗೂ ನಿಮಗೂ ಪಾಪ ಮಾಡಿದ್ಧೇನೆ. ಈ ಮರಣವನ್ನು ಮಾತ್ರ ನನ್ನಿಂದ ತೊಲಗಿಸುವ ಹಾಗೆ, ಯೆಹೋವನನ್ನು ಬೇಡಿ ಕೊಳ್ಳಿರಿ ಎಂದು ಹೇಳಿದನು. ಮೋಶೆ ಯೆಹೋವನನ್ನು ಬೇಡಿ ಕೊಂಡನು. ಆಗ ಯೆಹೋವನು ಮಹಾ ಬಲವಾದ ಪಶ್ಚಿಮ ಘಾಳಿಯನ್ನು ಬೀಸ ಮಾಡಿದನು; ಅದು ಮಿಡಿತೆಗಳನ್ನು ಎತ್ತಿ, ಕೆಂಪು ಸಮುದ್ರದಲ್ಲಿ ಹಾಕಿತು; ಆದರೆ ಯೆಹೋವನು ಫರೋನನ ಹೃದಯವನ್ನು ಕಠಿಣ ಮಾಡಿದ್ದರಿಂದ ಅವನು ಇಸ್ರಯೇಲ್ ಮಕ್ಕಳನ್ನು ಕಳುಹಿಸಲಿಲ್ಲ. ಆಗ ಯೆಹೋವನು ಮೋಶೆಗೆ: ನಿನ್ನ ಕೈಯನ್ನು ಆಕಾಶಕ್ಕೆ ಚಾಚು, ಅಂದನು. ಮೋ

ಶೆ ಕೈಯನ್ನು ಆಕಾಶಕ್ಕೆ ಚಾಚಿದಾಗ, ಸಮಸ್ತ ಐಗುಪ್ತ ದೇಶದಲ್ಲಿ ಮೂರು ದಿವಸ ಕತ್ತಲಾಯಿತು. ಒಬ್ಬರು ಒಬ್ಬರನ್ನು ನೋಡಲಿಲ್ಲ. ಯಾರೂ ತನ್ನ ಸ್ಥಳವನ್ನು ಬಿಟ್ಟು ಏಳಲಿಲ್ಲ. ಆದರೆ ಇಸ್ರಯೇಲ್ ಮಕ್ಕಳಿಗೆಲ್ಲಾ ಅವರ ನಿವಾಸಗಳಲ್ಲಿ ಬೆಳಕಿತ್ತು. ಆದರೆ ಯೆಹೋವನು ಫರೋನನ ಹೃದಯವನ್ನು ಕಠಿಣ ಮಾಡಿದ್ದರಿಂದ, ಅವನು ಇಸ್ರಯೇಲ್ಯರನ್ನು ಕಳುಹಿಸಲೊಲ್ಲದೆ ಇದ್ದನು. ಅವನು ಮೋಶೆಗೆ: ನನ್ನನ್ನು ಬಿಟ್ಟು ಹೋಗು; ಇನ್ನೂ ನನ್ನ ಮುಖವನ್ನು ನೋಡದ ಹಾಗೆ ನನಗೆ ದೂರವಾಗಿರು; ಇಲ್ಲವೆ ನೀನು ಸಾಯ ಬೇಕು, ಅಂದನು. ಅದಕ್ಕೆ ಮೋಶೆಯು: ನೀನು ಸರಿಯಾಗಿ ಹೇಳಿದಿ; ಇನ್ನು ಮೇಲೆ ನಿನ್ನ ಮುಖವನ್ನು ನೋಡುವದಿಲ್ಲ, ಅಂದನು.

III. 51. 49. ಬಾ. 138. 88.

---

## ೨೨. ಇಸ್ರಯೇಲ್ಯರು ಐಗುಪ್ತದಿಂದ ಹೊರಟು ಹೋದದ್ದು.

(ಹೊರಡೋಣ. ೧೧ — ೧೫.)

(ಸೃಷ್ಟಿಯಾದ ಮೇಲೆ ೨೫೧೩, ಕ್ರಿಸ್ತನ ಜನ್ಮದ ಮುಂಚೆ ೧೫೦೦.)

೧) ಮತ್ತು ಯೆಹೋವನು ಮೋಶೆಗೆ ಹೇಳಿದ್ದೇನಂದರೆ: — ಇನ್ನು ಒಂದೇ ಬಾಧೆಯನ್ನು ಐಗುಪ್ತದ ಮೇಲೆ ಬರ ಮಾಡುವೆನು. ಅದರ ತರುವಾಯ ಫರೋನನು ನಿಮ್ಮನ್ನು ಇಲ್ಲಿಂದ ಕಳುಹಿಸುವನು. ಆಗ ಮೋಶೆ ಫರೋನನಿಗೆ: ಯೆಹೋವನು ಹೀಗೆ ಹೇಳುತ್ತಾನೆ — ಅರ್ಧ ರಾತ್ರಿಯಲ್ಲಿ ನಾನು ಐಗುಪ್ತದ ಮಧ್ಯದಲ್ಲಿ ಹೊರಡುತ್ತೇನೆ. ಆಗ ಐಗುಪ್ತದ ಚೊಚ್ಚಲು ಮಕ್ಕಳೂ ಪಶುಗಳಲ್ಲಿ ಚೊಚ್ಚಲಾದವುಗಳೂ ಸಹಾ ಸಾಯುವರು. ಆದರೆ ಇಸ್ರಯೇಲ್ ಮಕ್ಕಳೆಲ್ಲರ ಮೇಲೆ ಮನುಷ್ಯರ ಮೊದಲ್ಗೊಂಡು ಮೃಗಗಳ ಪರಿಯಂತರಕ್ಕೂ ಒಂದು ನಾಯಿ

ಯಾದರೂ ನಾಲಿಗೆಯನ್ನು ಅಲ್ಲಾಡಿಸದು. ಹೀಗೆ ಯೆಹೋವನು ಐಗುಪ್ತ್ಯರಿಗೂ ಇಸ್ರಯೇಲ್ಯರಿಗೂ ಹೆಚ್ಚು ಕಡಿಮೆ ಮಾಡುತ್ತಾನೆಂದು ನೀವು ತಿಳುಕೊಳ್ಳುವಿರಿ. ಆಗ ನಿನ್ನ ದಾಸರಾದ ಇವರೆಲ್ಲರು ನನಗೆ ಅಡ್ಡ ಬಿದ್ದು—ನೀನು ನಿನ್ನ ಸಮಸ್ತ ಜನರೂ ಹೊರಗೆ ಹೋಗಿರೆಂದು ಅನ್ನುವರು. ಆ ಮೇಲೆ ನಾನು ಹೊರಗೆ ಹೋಗುವೆನು, ಅಂದನು. ಹಾಗೆ ಮೋಶೆ ಕೋಪದ ಉರಿಗೊಂಡು, ಫರೋನನನ್ನು ಬಿಟ್ಟು ಹೋದನು. ಆಗ ಯೆಹೋವನು ಮೋಶೆಗೂ ಆರೋನನಿಗೂ ಹೇಳಿದ್ದೇನಂದರೆ: ನೀವು ಇಸ್ರಯೇಲ್ ಕೂಟಕ್ಕೆಲ್ಲಾ ಹೇಳಬೇಕಾದದ್ದೇನಂದರೆ: ಈ (ಅಬೀಬ್ ಇಲ್ಲವೆ ಸೀಸಾನ್ ಎಂಬ) ತಿಂಗಳಿನ ಹತ್ತನೇ ದಿವಸದಲ್ಲಿ ನೀವು ಒಂದೊಂದು ಮನೆಗೆ ಒಂದೊಂದು ಕುರಿಮರಿಯನ್ನು ತಕ್ಕೊಳ್ಳ ಬೇಕು. ಪೂರ್ಣಾಂಗವಾಗಿರುವ ಒಂದು ವರುಷದ ಗಂಡು ಮರಿ ನಿಮಗಿರ ಬೇಕು; ಅದನ್ನು ಈ ತಿಂಗಳಿನ ಹದಿನಾಲ್ಕನೇ ದಿವಸದ ಪರಿಯಂತರ ಇಟ್ಟು ಕೊಳ್ಳ ಬೇಕು. ಆ ಮೇಲೆ ಇಸ್ರಯೇಲ್ಯರ ಸಭೆಯೆಲ್ಲಾ ಸಾಯಂಕಾಲದಲ್ಲಿ ಅದನ್ನು ಕೊಲ್ಲ ಬೇಕು. ಮತ್ತು ಅದರ ರಕ್ತದಲ್ಲಿ ಸ್ವಲ್ಪ ತೆಗೆದು, ಬಾಗಲಿನ ಎರಡು ನಿಲುವುಗಳಿಗೂ ಮೇಲಿನ ಪಟ್ಟಿಗೂ ಹಚ್ಚಿ, ಆ ರಾತ್ರಿಯಲ್ಲಿಯೇ ಆ ಮಾಂಸವನ್ನು ಉಣ್ಣ ಬೇಕು; ಬೆಂಕಿಯಲ್ಲಿ ಸುಟ್ಟು, ಅದನ್ನೂ ಹುಳಿ ಇಲ್ಲದ ರೊಟ್ಟಿಗಳನ್ನೂ ಕಹಿಯಾದ ಪಲ್ಯಗಳ ಸಂಗಡ ಉಣ್ಣ ಬೇಕು. ನೀವು ಅದನ್ನು ಉಣ್ಣ ತಕ್ಕ ರೀತಿ ಇದೇ: ನಡು ಕಟ್ಟಿ ಕೊಂಡು, ಕೆರ ಮೆಟ್ಟಿ ಕೊಂಡು, ಕೋಲು ಹಿಡು ಕೊಂಡು, ತ್ವರೆಯಾಗಿ ಅದನ್ನು ಉಣ್ಣ ಬೇಕು. ಅದು ಯೆಹೋವನ ಪಸ್ಕವು (ಅಂದರೆ ದಾಟಿ ಹೋಗುವಿಕೆ). ಯಾಕಂದರೆ ಈ ರಾತ್ರಿಯಲ್ಲಿಯೇ ನಾನು ಐಗುಪ್ತ ದೇಶವನ್ನು ಹಾದು ಹೋಗಿ, ಚೊಚ್ಚಲಾದವುಗಳನ್ನೆಲ್ಲಾ ಹೊಡಿಯುವೆನು. ಐಗುಪ್ತದ ಎಲ್ಲಾ ದೇವರುಗಳಿಗೆ ನ್ಯಾಯ ತೀರಿಸುವೆನು; ನಾನೇ ಯೆಹೋವನು. ಆ ರಕ್ತವು ನಿಮ್ಮ ಮನೆಗಳ ಮೇಲೆ ಗುರುತಾಗಿರುವದು. ನಾನು ಆ ರಕ್ತವನ್ನು

ನೋಡುವಾಗ, ನಿಮ್ಮನ್ನು ದಾಟಿ ಹೋಗುವೆನು. ಹೀಗೆ ನಿಮ್ಮಲ್ಲಿ ಯಾವ ಬಾಧೆಯಾದರೂ ಇರದು. ಮತ್ತು ಈ ದಿವಸವು ನಿಮಗೆ ನೆನಪು ಮಾಡುವದಕ್ಕೆ ಇರ ಬೇಕು. ಅದನ್ನು ನಿಮ್ಮ ತಲಾಂತರಗಳಿಗೆ ನಿತ್ಯನೇಮವಾಗಿ ಆಚರಿಸ ಬೇಕು. ಆಗ ಇಸ್ರಯೇಲ್ ಮಕ್ಕಳು ಯೆಹೋವನು ಆಜ್ಞಾಪಿಸಿದ ಹಾಗೆಯೇ ಮಾಡಿದರು.

ಅರ್ಧರಾತ್ರಿಯಲ್ಲಿ ಯೆಹೋವನು ಫರೋನನ ಚೊಚ್ಚಲು ಮಗನು ಮೊದಲ್ಗೊಂಡು, ಶೆರೆಮನೆಯಲ್ಲಿರುವವನ ಚೊಚ್ಚಲು ಮಗನ ಪರಿಯಂತರಕ್ಕೂ, ಮತ್ತು ಪಶುಗಳಲ್ಲಿ ಚೊಚ್ಚಲಾದದ್ದೆಲ್ಲಾ ಹೊಡೆದನು. ಆಗ ಐಗುಪ್ತದಲ್ಲಿ ದೊಡ್ಡ ಕೂಗು ಆಯಿತು. ಫರೋನನು ರಾತ್ರಿಯಲ್ಲಿಯೇ ಮೋಶೆಯನ್ನೂ ಆರೋನನನ್ನೂ ಕರೆಸಿ: ನೀವು ಎದ್ದು, ನನ್ನ ಜನರನ್ನು ಬಿಟ್ಟು ಹೋಗಿರಿ. ಯೆಹೋವನನ್ನು ಆರಾಧಿಸ ಹೋಗಿರಿ. ನಿಮ್ಮ ಕುರಿಗಳನ್ನೂ ದನಗಳನ್ನೂ ತಕ್ಕೊಂಡು, ನನಗೆ ಆಶೀರ್ವಾದ ಕೊಟ್ಟು, ಹೋಗಿರಿ, ಅಂದನು. ಇದಲ್ಲದೆ ಐಗುಪ್ತ್ಯರು: ನಾವೆಲ್ಲರು ಸಾಯುತ್ತೇವೆಂದು ಹೇಳಿ, ಅವರನ್ನು ತ್ವರೆಯಾಗಿ ದೇಶದೊಳಗಿಂದ ಕಳುಹಿಸುವ ಹಾಗೆ, ಬಲಾತ್ಕಾರ ಮಾಡಿದರು. ಆಗ ಇಸ್ರಯೇಲ್ ಮಕ್ಕಳು ಮೋಶೆ ಹೇಳಿದ ಹಾಗೆ ಮಾಡಿ, ಬೆಳ್ಳಿ ಭಂಗಾರದ ಸಾಮಾನುಗಳನ್ನೂ ವಸ್ತ್ರಗಳನ್ನೂ ಕೇಳಿ ಕೊಂಡರು. ಮತ್ತು ಯೆಹೋವನು ಐಗುಪ್ತ್ಯರ ಸನ್ನಿಧಿಯಲ್ಲಿ ಅವರಿಗೆ ಕೃಪೆ ಕೊಟ್ಟದರಿಂದ, ಅವರು ಕೇಳಿದ್ದನ್ನು ಕೊಟ್ಟರು. ಹಾಗೆ ಅವರು ಐಗುಪ್ತ್ಯರನ್ನು ಸುಲು ಕೊಂಡರು.

೨) ಆಗ ಇಸ್ರಯೇಲ್ ಮಕ್ಕಳು ಚಿಕ್ಕವರಲ್ಲದೆ, ಗಂಡಸರು ಮಾತ್ರ ಆರು ಲಕ್ಷ ಮಂದಿ ಎದ್ದು, ಹೊರಟರು. ಮತ್ತು ಕುರಿ ದನಗಳ ಸಮೂಹವು ಅವರ ಸಂಗಡ ಬಂದವು. ಇಸ್ರಯೇಲ್ ಮಕ್ಕಳು ಐಗುಪ್ತದಲ್ಲಿ ವಾಸವಾಗಿದ್ದ ಕಾಲವು ನಾನೂರ ಮೂವತ್ತು ವರುಷವಾಗಿತ್ತು. ಮತ್ತು ಯೆಹೋವನು ಇಸ್ರಯೇಲ್ಯರನ್ನು ಕೆಂಪು ಸಮುದ್ರಕ್ಕೆ ಹೋಗುವ ಅರಣ್ಯ ಮಾರ್ಗದಲ್ಲಿ ಕಳುಹಿಸಿದನು. ಹ

ಗಲಿನಲ್ಲಿ ಅವರಿಗೆ ದಾರಿ ತೋರಿಸುವದಕ್ಕೆ ಮೇಘ ಸ್ತಂಭದಲ್ಲಿಯೂ ರಾತ್ರಿಯಲ್ಲಿ ಅವರಿಗೆ ಬೆಳಕು ಕೊಡುವದಕ್ಕೆ ಬೆಂಕಿಯ ಸ್ತಂಭದಲ್ಲಿಯೂ ಅವರ ಮುಂದೆ ಹೋದನು. ಜನರು ಓಡಿ ಹೋದರೆಂದು ಅರಸನು ಕೇಳಿದಾಗ, ಅವನ ಹೃದಯವು ತಿರಿಗಿ ಬೇರೆಯಾಯಿತು. ಯಾಕಂದರೆ ಯೆಹೋವನು ಅವನ ಹೃದಯವನ್ನು ಕಠಿಣ ಮಾಡಿದನು. ಅದು ಕಾರಣ ಅವನು ಇಸ್ರಯೇಲ್ ಮಕ್ಕಳನ್ನು ಹಿಂದಟ್ಟಿದನು. ಅವರು ಸಮುದ್ರದ ತೀರದಲ್ಲಿ ಇಳುಕೊಳ್ಳುವಾಗ, ಫರೋನನ ಎಲ್ಲಾ ಕುದುರೆ ರಥಗಳೂ ಅವನ ರಥಿಕರೂ ಅವನ ಸೈನ್ಯವೂ ಅವರನ್ನು ಕಲತರು. ಫರೋನನು ಸಮೀಪ ಬಂದನೆಂಬದನ್ನು ಇಸ್ರಯೇಲ್ ಮಕ್ಕಳು ನೋಡಿ, ಬಹಳ ಭಯ ಪಟ್ಟು, ಯೆಹೋವನಿಗೆ ಕೂಗಿದರು. ಆಗ ಮೋಶೆ ಜನರಿಗೆ: ನೀವು ಭಯ ಪಡ ಬೇಡಿರಿ; ಯೆಹೋವನು ಈ ಹೊತ್ತು ನಿಮಗೆ ಮಾಡುವ ರಕ್ಷಣೆಯನ್ನು ನಿಂತುಕೊಂಡು, ನೋಡಿರಿ. ಯೆಹೋವನು ನಿಮಗೋಸ್ಕರ ಯುದ್ಧ ಮಾಡುವನು; ಆದರೆ ನೀವು ಸುಮ್ಮನಿರುವಿರಿ, ಅಂದನು. ಮತ್ತು ಯೆಹೋವನು ಮೋಶೆಗೆ ಹೇಳಿದ್ದೇನಂದರೆ :—ನೀನು ಯಾಕೆ ನನಗೆ ಕೂಗುತ್ತೀ? ಇಸ್ರಯೇಲ್ ಮಕ್ಕಳಿಗೆ, ಅವರು ಹೊರಡ ಬೇಕೆಂದು ಹೇಳು. ಮತ್ತು ನೀನು ನಿನ್ನ ಕೋಲನ್ನು ಎತ್ತಿ, ನಿನ್ನ ಕೈ ಸಮುದ್ರದ ಮೇಲೆ ಚಾಚಿ, ಅದನ್ನು ವಿಭಾಗಿಸು. ಆಗ ಇಸ್ರಯೇಲ್ ಮಕ್ಕಳು ಸಮುದ್ರದ ಮಧ್ಯದಲ್ಲಿ ಒಣಗಿದ ನೆಲದ ಮೇಲೆ ಹೋಗುವರು. ನಾನು ಫರೋನನ ಮೇಲೆಯೂ ಅವನ ಎಲ್ಲಾ ಸೈನ್ಯದ ಮೇಲೆಯೂ ನನ್ನನ್ನು ಘನಪಡಿಸಿ ಕೊಳ್ಳುವೆನು. ಹೀಗೆ ನಾನೇ ಯೆಹೋವನೆಂದು ಐಗುಪ್ತ್ಯರು ತಿಳಿಯುವರು. ಆಗ ಇಸ್ರಯೇಲಿನ ದಂಡಿನ ಮುಂದೆ ನಡೆಯುವ ದೇವದೂತನು ಹೊರಟು, ಅವರ ಹಿಂದಕ್ಕೆ ಹೋದನು. ಮತ್ತು ಮೇಘಸ್ತಂಭವು ಐಗುಪ್ತ್ಯರ ದಂಡಿಗೂ ಇಸ್ರಯೇಲಿನ ದಂಡಿಗೂ ನಡುವೆ ಬಂತು. ಅದು ಅವರಿಗೆ ಮೇಘವೂ ಕತ್ತಲೂ, ಇವರಿಗೆ ರಾತ್ರಿಯಲ್ಲಿ ಬೆಳಕು ಕೊಡುವಂಥಾದ್ದೂ ಆಗಿದ್ದದರಿಂದ ಸಮಸ್ತ ರಾತ್ರಿ

ಯಲ್ಲಿ ಅವರು ಇವರಿಗೆ ಸಮೀಪವಾಗಲಿಲ್ಲ. ಆಗ ಮೋಶೆ ಸಮುದ್ರದ ಮೇಲೆ ಕೈ ಚಾಚಲಾಗಿ, ಯೆಹೋವನು ಬಲವಾದ ಮೂಡಣ ಘಾಳಿಯಿಂದ ಸಮುದ್ರವನ್ನು ಒಣಗಿದ ನೆಲ ಮಾಡಿ, ನೀರು ಭೇದವಾಗುವ ಹಾಗೆ ಮಾಡಿದನು. ಹೀಗೆ ಇಸ್ರಯೇಲ್ ಮಕ್ಕಳು ಸಮುದ್ರದ ಮಧ್ಯದಲ್ಲಿ ಒಣಗಿದ ನೆಲದ ಮೇಲೆ ಬಂದು ಬಿಟ್ಟರು. ನೀರು ಅವರಿಗೆ ಎಡ ಬಲದಲ್ಲಿ ಗೋಡೆಯಾಗಿತ್ತು. ಐಗುಪ್ತ್ಯರೂ ಫರೋನನ ಎಲ್ಲಾ ಕುದುರೆಗಳೂ ಅವರನ್ನು ಹಿಂದಟ್ಟಿ, ಸಮುದ್ರದ ಮಧ್ಯದಲ್ಲಿ ಶೇರಿದರು. ಬೆಳಿಗ್ಯೆ ಯೆಹೋವನು ಅಗ್ನಿ ಮೇಘಗಳ ಸ್ತಂಭದೊಳಗಿಂದ ಐಗುಪ್ತ್ಯರ ದಂಡಿನ ಮೇಲೆ ದೃಷ್ಟಿ ಇಟ್ಟು, ದಂಡನ್ನು ತೊಂದರೆ ಪಡಿಸಿ, ಅವರ ರಥಗಳ ಚಕ್ರಗಳನ್ನು ಜಾರಿಸಿ, ಅವರನ್ನು ಕಷ್ಟದಿಂದ ಹೋಗ ಮಾಡಿದನು. ಆಗ ಐಗುಪ್ತ್ಯರು: ಇಸ್ರಯೇಲಿನ ಎದುರಿನಿಂದ ಓಡಿ ಹೋಗೋಣ; ಯಾಕಂದರೆ ಯೆಹೋವನು ಅವರಿಗೋಸ್ಕರ ಯುದ್ಧ ಮಾಡುತ್ತಾನೆಂದು, ಹೇಳಿ ಕೊಂಡರು. ಆಗ ಯೆಹೋವನು ಮೋಶೆಗೆ: ನಿನ್ನ ಕೈ ಸಮುದ್ರದ ಮೇಲೆ ಚಾಚು, ಅಂದನು. ಮೋಶೆ ಕೈ ಚಾಚಲಾಗಿ, ಸಮುದ್ರವು ಬಲವಾಗಿ ತಿರಿಗಿ ಬಂದು, ಫರೋನನ ಸಮಸ್ತ ಸೈನ್ಯವಾಗಿರುವಂಥ ರಥಗಳನ್ನೂ ರಥಿ



ಕರನ್ನೂ ಮುಚ್ಚಿದ್ದರಿಂದ, ಅವರಲ್ಲಿ ಒಬ್ಬನಾದರೂ ಉಳಿಯಲಿಲ್ಲ. ಹೀಗೆ ಯೆಹೋವನು ಇಸ್ರಯೇಲ್ಯರನ್ನು ಐಗುಪ್ತ್ಯರ ಕೈಯಿಂದ ತಪ್ಪಿಸಿದನು. ಮತ್ತು ಅವರು ಯೆಹೋವನಲ್ಲಿಯೂ ಅವನ ದಾಸನಾದ

ಮೋಶೆಯಲ್ಲಿಯೂ ವಿಶ್ವಾಸವಿಟ್ಟರು. ಮತ್ತು ಮೋಶೆಯೂ ಇಸ್ರಯೇಲ್ ಮಕ್ಕಳೂ ಯೆಹೋವನಿಗೆ ಒಂದು ಗೀತವನ್ನು ಹಾಡಿದರು. III. 30. 31.

---

## ೨೩. ಇಸ್ರಯೇಲ್ಯರು ಅರಣ್ಯದಲ್ಲಿ ಸಂಚರಿಸಿದ್ದು.

(ಹೊರಡೋಣ. ೧೫—೧೭.)

ಆ ಮೇಲೆ ಇಸ್ರಯೇಲ್ ಮಕ್ಕಳು ಶೂರಿನ ಅರಣ್ಯಕ್ಕೆ ಹೋಗಿ, ಮೂರು ದಿವಸ ಪ್ರಯಾಣ ಮಾಡಿ, ನೀರನ್ನು ಕಂಡು ಕೊಳ್ಳದೆ ಹೋದರು. ಅವರು ಮಾರಕ್ಕೆ ಬಂದ ಮೇಲೆ, ಮಾರದ ನೀರು ಕಹಿಯಾಗಿದ್ದದರಿಂದ ಅದನ್ನು ಕುಡಿಯಲಾರದೆ ಇದ್ದರು. ಅದು ಕಾರಣ ಆ ಸ್ಥಳಕ್ಕೆ ಮಾರ (ಕಹಿ) ಎಂದು ಹೆಸರಾಯಿತು. ಆಗ ಜನರು ಮೋಶೆಗೆ ವಿರೋಧವಾಗಿ, ಗುಣುಗುಟ್ಟಿದಾಗ, ಅವನು ಯೆಹೋವನಿಗೆ ಕೂಗಿದನು. ಮತ್ತು ಯೆಹೋವನು ಅವನಿಗೆ ಒಂದು ಮರವನ್ನು ತೋರಿಸಿದನು. ಅದನ್ನು ನೀರಿನಲ್ಲಿ ಹಾಕಿದಾಗ, ನೀರು ಶೀಯಾಯಿತು. ಆಗ ಯೆಹೋವನು ಅವರಿಗೆ: ನಾನೇ ನಿನ್ನನ್ನು ಸ್ವಸ್ಥ ಮಾಡುವ ಯೆಹೋವನು.

ಇದರ ಮೇಲೆ ಅವರು ಸೀನೆಂಬ ಅರಣ್ಯಕ್ಕೆ ಬಂದರು. ಆಗ ಇಸ್ರಯೇಲ್ ಮಕ್ಕಳ ಕೂಟವೆಲ್ಲಾ ಮೋಶೆಗೂ ಆರೋನನಿಗೂ ವಿರೋಧವಾಗಿ ಗುಣುಗುಟ್ಟಿ, ಅವರಿಗೆ: ನಾವು ಐಗುಪ್ತ ದೇಶದಲ್ಲಿ ಮಾಂಸದ ಪಾತ್ರೆಗಳ ಹತ್ತರ ಕೂತು ಕೊಂಡು, ಸಾಕಾಗುವಷ್ಟು ರೊಟ್ಟಿ ತಿಂದಾಗ, ಯೆಹೋವನ ಕೈಯಿಂದ ಸತ್ತು ಹೋಗಿದ್ದರೆ, ಒಳ್ಳೇದಾಗಿತ್ತು; ಯಾಕಂದರೆ ಈ ಸಮಸ್ತ ಸಭೆಯನ್ನು ಹಸಿವೆಯಿಂದ ಸಾಯಿಸುವ ಹಾಗೆ, ನಮ್ಮನ್ನು ಈ ಅರಣ್ಯಕ್ಕೆ ಬರ ಮಾಡಿದಿರಿ, ಅಂದರು. ಆಗ ಯೆಹೋವನು ಮೋಶೆಗೆ: ನಾನು ಇಸ್ರಯೇಲ್ ಮಕ್ಕಳ ಗುಣುಗುಟ್ಟನ್ನು ಕೇಳಿದ್ದೇನೆ. ನೀನು ಅವರಿಗೆ: ನಿಮ್ಮ

ದೇವರಾಗಿರುವ ಯೆಹೋವನು ನಾನೇ ಎಂದು ನೀವು ತಿಳು ಕೊಳ್ಳುವ ಹಾಗೆ, ಇಗೋ, ಸಾಯಂಕಾಲದಲ್ಲಿ ಮಾಂಸವನ್ನು ತಿನ್ನುವಿರಿ. ಬೆಳಿಗ್ಯೆ ರೊಟ್ಟಿಯಿಂದ ತೃಪ್ತಿ ಆಗುವಿರಿ ಎಂದು ಹೇಳು, ಅಂದನು. ಆಗ ಸಾಯಂಕಾಲದಲ್ಲಿ ಆದದ್ದೇನಂದರೆ—ಲಾವಕ್ಕಿಗಳು ಏರಿ ಬಂದು, ದಂಡನ್ನು ಮುಚ್ಚಿದವು. ಮತ್ತು ಬೆಳಿಗ್ಯೆ ಮಂಜು ದಂಡಿನ ಸುತ್ತಲು ಎದ್ದ ಮೇಲೆ, ಅಗೋ, ಅರಣ್ಯದ ಮೇಲ್ಭಾಗದಲ್ಲಿ ಹನಿಗಳ ಹಾಗೆ ಸೂಕ್ಷ್ಮವಾದದ್ದೂ ಗುಂಡಾದದ್ದೂ ಬಿದ್ದಿತ್ತು. ಇಸ್ರಯೇಲ್ ಮಕ್ಕಳು ಅದನ್ನು ನೋಡಿದಾಗ, ಒಬ್ಬರಿಗೊಬ್ಬರು ಮನ್ (ಅಂದರೆ ಇದೇನು?) ಎಂದು ಕೇಳಿ ಕೊಂಡರು. ಆಗ ಮೋಶೆ ಅವರಿಗೆ: ಇದೇ ಯೆಹೋವನು ತಿನ್ನುವದಕ್ಕೆ ಕೊಟ್ಟ ರೊಟ್ಟಿ, ಅಂದನು. ಇಸ್ರಯೇಲ್ ಮನೆಯವರು ಅದಕ್ಕೆ ಮಾನ್ (ಅಥವ ಮನ್ನ) ಎಂದು ಹೆಸರಿಟ್ಟರು. ಅದು ಬಿಳೀ ಕೊತ್ತುಂಬರೀ ಬೀಜದ ಹಾಗಿತ್ತು. ಅದರ ರುಚಿಯು ಜೇನು ಕಲಸಿದ ದೋಶೆಗಳ ಹಾಗಿತ್ತು. ಇಸ್ರಯೇಲ್ ಮಕ್ಕಳು ಅದನ್ನು ದಿವಸ ದಿವಸ ಕೂಡಿಸುತ್ತಿದ್ದರು. ಕೆಲವರು ಹೆಚ್ಚು, ಕೆಲವರು ಕಡಿಮೆ ಕೂಡಿಸಿದರು. ಓಮೆರಲ್ಲಿ ಅದನ್ನು ಅ



ಳತೆ ಮಾಡುವಾಗ, ಹೆಚ್ಚು ಕೂಡಿಸಿದವನಿಗೆ ಮಿಗಲಿಲ್ಲ, ಕಡಿಮೆ ಕೂಡಿಸಿದವನಿಗೆ ಕೊರತೆಯಾಗಲಿಲ್ಲ. ಒಬ್ಬೊಬ್ಬನು ಉಣ್ಣ ತಕ್ಕಷ್ಟು ಕೂಡಿಸಿದರು. ಮತ್ತು ಕೆಲವರು ದೇವರ ಅಪ್ಪಣೆಗೆ ವಿರೋ

ಧವಾಗಿ ಅದನ್ನು ಮರು ದಿವಸದ ಪರಿಯಂತರ ಇಟ್ಟು ಕೊಂಡಾಗ, ಹುಳ ಬಿದ್ದು ನಾರಿತು. ಆದರೆ ಆರನೇ ದಿವಸದಲ್ಲಿ ಎರಡಷ್ಟು ಕೂಡಿಸಿ, ಮರು ದಿವಸಕ್ಕೆ ಇಟ್ಟು ಕೊಂಡರು; ಅದು ನಾರಲಿಲ್ಲ. ಮತ್ತು ಏಳನೇ (ಸಬ್ಬತ್) ದಿವಸದಲ್ಲಿ ಕೆಲವರು ಕೂಡಿಸುವದಕ್ಕೆ ಹೊರಗೆ ಹೋದರು. ಆದರೆ ಅವರಿಗೆ ಶಿಕ್ಕಲಿಲ್ಲ. ಇಸ್ರಯೇಲ್ ಮಕ್ಕಳು ಕಾನಾನ್ ದೇಶಕ್ಕೆ ಬರುವ ಪರಿಯಂತರ, ನಾಲ್ವತ್ತು ವರುಷ ಮನ್ನವನ್ನು ತಿಂದರು. ಮತ್ತು ಇಸ್ರಯೇಲ್ ಮಕ್ಕಳು ಹೊರಟು, ರೆಫಿದೀಮಿನಲ್ಲಿ ಇಳು ಕೊಂಡರು. ಅಲ್ಲಿ ಜನರಿಗೆ ಕುಡಿಯುವದಕ್ಕೆ ನೀರು ಇರಲಿಲ್ಲ. ಆದ ಕಾರಣ ಅವರು ಮೋಶೆಯ ಸಂಗಡ ವಿವಾದ ಮಾಡಿ: ನಾವು ಕುಡಿಯುವ ಹಾಗೆ ನಮಗೆ ನೀರನ್ನು ಕೊಡಿರಿ, ಅಂದಾಗ, ಮೋಶೆ ಯೆಹೋವನಿಗೆ ಕೂಗಿ: ಈ ಜನರಿಗೆ ನಾನೇನು ಮಾಡಲಿ? ಅಂದನು. ಆಗ ಯೆಹೋವನು ಮೋಶೆಗೆ: ನೀನು ನದಿಯನ್ನು ಬಡಿದ ಕೋಲನ್ನು ಕೈಯಲ್ಲಿ ತಕ್ಕೊಂಡು ಹೋಗು; ಇಗೋ, ನಾನು ಅಲ್ಲಿ ಹೋರೆಬಿನಲ್ಲಿ ಬಂಡೆಯ ಮೇಲೆ ನಿನ್ನ ಮುಂದೆ ನಿಂತು ಕೊಳ್ಳುವೆನು. ನೀನು ಬಂಡೆಯನ್ನು ಹೊಡೆಯುವಾಗ, ಅದರಿಂದ ನೀರು ಹೊರಗೆ ಬರುವದು. ಹೀಗೆ ಜನರು ಕುಡಿಯುವರು, ಅಂದನು. ಮೋಶೆ ಈ ಪ್ರಕಾರ ಮಾಡಿದನು. ಇಸ್ರಯೇಲ್



ಮಕ್ಕಳ ವಿವಾದದ ನಿಮಿತ್ತವೂ, ಯೆಹೋವನನ್ನು ಶೋಧಿಸಿದರಿಂದ ಲೂ, ಆ ಸ್ಥಳಕ್ಕೆ ಮಸ್ಸವೂ ಮೆರೀಬವೂ (ಅಂದರೆ ವಿವಾದವೂ ಪರೀಕ್ಷೆ ಯೂ) ಎಂದು ಹೆಸರಾಯಿತು.

ಆಗ ಅಮಲೇಕ್ಯರು ಬಂದು, ರೆಫಿದೀಮಿನಲ್ಲಿ ಇಸ್ರಯೇಲ್ಯರ ಸಂಗಡ ಯುದ್ಧ ಮಾಡಿದರು. ಮತ್ತು ಯೆಹೋಶುವನು ಮೋಶೆ ತನಗೆ ಹೇಳಿದ ಹಾಗೆ ಜನರನ್ನು ಆದು ಕೊಂಡು, ಅವರ ಸಂಗಡ ಯುದ್ಧ ಮಾಡಿದನು. ಆದರೆ ಮೋಶೆಯೂ ಆರೋನನೂ ಹೂರನೂ ಗುಡ್ಡದ ತುದಿಗೆ ಏರಿ ಹೋದರು. ಆಗ ಮೋಶೆ ಕೈಯನ್ನು ಎತ್ತಿದಾಗ, ಇಸ್ರಯೇಲ್ಯರು ಬಲವಾದರು. ಅವನು ಕೈಯನ್ನು ಇಳಿಸಿದಾಗ, ಅಮಲೇಕ್ಯರು ಬಲವಾದರು. ಮೋಶೆಯ ಕೈಗಳು



ಭಾರವಾಗಿದ್ದದರಿಂದ, ಆರೋನನೂ ಹೂರನೂ, ಒಬ್ಬನು ಈಚೆಯಲ್ಲಿ ಒಬ್ಬನು ಆಚೆಯಲ್ಲಿ, ಅವನ ಕೈಗಳಿಗೆ ಆಧಾರ ಕೊಟ್ಟರು. ಹೀಗಿರಲಾಗಿ ಯೆಹೋಶುವನು ಅಮಲೇಕ್ಯರನ್ನು ಜಯಿಸಿದನು.

II. 30. ಬಾ. 77. III. 35.

---

## ೨೪. ನ್ಯಾಯಪ್ರಮಾಣವನ್ನು ಕೊಟ್ಟದ್ದು.

(ಹೊರಡೋಣ. ೧೯. ೨೦. ೨೪. ೩೨. ೩೪.)

೧) ಇಸ್ರಯೇಲ್ ಮಕ್ಕಳು ಐಗುಪ್ತ ದೇಶವನ್ನು ಬಿಟ್ಟ ಮೂರನೇ ತಿಂಗಳಲ್ಲಿ ಸೀನಾಯಿ ಅರಣ್ಯಕ್ಕೆ ಬಂದು, ಬೆಟ್ಟಕ್ಕೆದುರಾಗಿ ಇಳುಕೊಂಡರು. ಆದರೆ ಮೋಶೆ ದೇವರ ಸನ್ನಿಧಿಗೆ ಏರಿ ಹೋದನು; ಮತ್ತು ಯೆಹೋವನು ಪರ್ವತದ ಮೇಲಿನಿಂದ ಅವನಿಗೆ ಕೂಗಿ, ಹೇಳಿದ್ದೇನಂದರೆ: ನೀನು ಯಾಕೋಬನ ಮನೆಯವರಿಗೆ ಹೀಗೆ ಹೇಳು— ನಾನು ಐಗುಪ್ತ್ಯರಿಗೆ ಮಾಡಿದ್ದನ್ನೂ ನಿಮ್ಮನ್ನು ಹದ್ದಿನ ರೆಕ್ಕೆಗಳ ಮೇಲೆ ಎತ್ತಿ ನನ್ನ ಬಳಿಗೆ ಬರ ಮಾಡಿದ್ದನ್ನೂ ನೋಡಿದ್ದೀರಿ; ಹಾಗಾದರೆ ನೀವು ನನ್ನ ಮಾತನ್ನು ಕೇಳಿ, ನನ್ನ ಒಡಂಬಡಿಕೆಯನ್ನು ಕೈಕೊಂಡರೆ, ಸಮಸ್ತ ಜನಗಳಲ್ಲಿ ನೀವು ನನಗೆ ಸ್ವಾಸ್ಥ್ಯವಾಗಿರುವಿರಿ; ಮತ್ತು ನೀವು ನನಗೆ ಯಾಜಕರ ರಾಜ್ಯವೂ ಪರಿಶುದ್ಧ ಜನವೂ ಆಗಿರುವಿರಿ. ಆಗ ಮೋಶೆ ಜನರ ಹಿರಿಯರನ್ನು ಕರೆದು, ಯೆಹೋವನು ತನಗೆ ಆಜ್ಞಾಪಿಸಿದ ಈ ಮಾತುಗಳನ್ನೆಲ್ಲಾ ಅವರಿಗೆ ತಿಳಿಸಿದನು. ಅದಕ್ಕೆ ಜನರೆಲ್ಲಾ ಏಕವಾಗಿ ಉತ್ತರ ಕೊಟ್ಟು: ಯೆಹೋವನು ಹೇಳಿದವುಗಳನ್ನೆಲ್ಲಾ ಮಾಡುತ್ತೇವೆಂದು ಹೇಳಿದರು. ತರುವಾಯ ಯೆಹೋವನು ಮೋಶೆಗೆ: ಇಗೋ, ಈ ಹೊತ್ತು ನಾಳೆಯೂ ಪ್ರಜೆಯನ್ನು ಪರಿಶುದ್ಧ ಮಾಡು; ಅವರು ತಮ್ಮ ವಸ್ತ್ರಗಳನ್ನು ತೊಳಕೊಂಡು, ಮೂರನೇ ದಿವಸಕ್ಕೆ ಸಿದ್ಧವಾಗಿರಲಿ; ಯಾಕಂದರೆ ಮೂರನೇ ದಿವಸದಲ್ಲಿ ಯೆಹೋವನು ಸೀನಾಯಿ ಪರ್ವತಕ್ಕೆ ಇಳಿದು ಬರುವನು. ಮತ್ತು ಜನರಿಗೋಸ್ಕರ ಬೆಟ್ಟದ ಸುತ್ತಲು ಮೇರೆಯನ್ನಿರಿಸು; ಯಾಕಂದರೆ ಬೆಟ್ಟವನ್ನು ಮುಟ್ಟಿದವರೆಲ್ಲಾ ಸಾಯಲೇ ಸಾಯ ಬೇಕು, ಅಂದನು.

ಮೂರನೇ ದಿವಸದಲ್ಲಿ ಉದಯವಾದಾಗ, ಬೆಟ್ಟದ ಮೇಲೆ ಗುಡುಗುಗಳೂ ಮಿಂಚುಗಳೂ ಕತ್ತಲಾದ ಮೇಘವೂ ಉಂಟಾಗಿ, ಬಹು ಬಲವಾದ ತುತೂರಿಯ ಶಬ್ದವಾಯಿತು; ಜನರೆಲ್ಲಾ ಹೆದರಿದರು. ಆಗ ಮೋಶೆ ಜನರನ್ನು ದೇವರೆದುರಿಗೆ ಹೊರಗೆ ಬರ ಮಾಡಿದನು;



ಅವರು ಬೆಟ್ಟದ ಕೆಳಗೆ ನಿಂತು ಕೊಂಡರು. ಆಗ ಯೆಹೋವನು ಬೆಂಕಿಯೊಳಗೆ ಅದರ ಮೇಲೆ ಇಳಿದ್ದರಿಂದ, ಹೊಗೆ ಹಾಯುತ್ತಾ ಇತ್ತು; ಬೆಟ್ಟವೆಲ್ಲಾ ಬಹಳವಾಗಿ ನಡುಗುತ್ತಾ ಇತ್ತು; ತುತೂರಿಯ ಶಬ್ದವು ಬರ ಬರ ಬಲವಾಗುತ್ತಾ ಇತ್ತು. ಆಗ ಮೋಶೆ ಮಾತಾಡಿದನು. ದೇವರು ಅವನಿಗೆ ಉತ್ತರ ಕೊಟ್ಟು: ಈ ವಾಕ್ಯಗಳನ್ನೆಲ್ಲಾ ಹೇಳಿದನು; ಏನಂದರೆ:

೧) ನಿನ್ನನ್ನು ಐಗುಪ್ತ ದೇಶದೊಳಗಿಂದ, ದಾಸತ್ವದ ಮನೆಯಿಂದ ಹೊರಗೆ ಬರ ಮಾಡಿದ ನಿನ್ನ ದೇವರಾದ ಯೆಹೋವನು ನಾನೇ. ನನ್ನ ಮುಂದೆ ನಿನಗೆ ಬೇರೆ ದೇವರುಗಳು ಇರ ಬಾರದು.

೨) ಮೇಲಿನ ಆಕಾಶದಲ್ಲ್ಯಾಗಲಿ, ಕೆಳಗಿನ ಭೂಮಿಯಲ್ಲ್ಯಾಗಲಿ, ಭೂಮಿಯ ಕೆಳಗಿರುವ ನೀರುಗಳಲ್ಲ್ಯಾಗಲಿ ಇರುವಂಥವುಗಳ ಹಾಗೆ ವಿಗ್ರಹವನ್ನೂ ಯಾವ ರೂಪವನ್ನೂ ನಿನಗೆ ಮಾಡಿ ಕೊಳ್ಳ ಬೇಡ; ಅವುಗಳಿಗೆ ಅಡ್ಡ ಬೀಳಲೂ ಸೇವಿಸಲೂ ಬೇಡ.

೩) ನಿನ್ನ ದೇವರಾದ ಯೆಹೋವನ ಹೆಸರನ್ನು ವ್ಯರ್ಥವಾಗಿ ತೆಗಿಯ ಬೇಡ.

೪) ಸಬ್ಬತ್ ದಿವಸವನ್ನು ಪರಿಶುದ್ಧ ಮಾಡುವ ಹಾಗೆ ಜ್ಞಾಪಕ ಮಾಡಿಕೋ. ಆರು ದಿವಸ ಕಷ್ಟ ಮಾಡಿ, ನಿನ್ನ ಕೆಲಸವನ್ನೆಲ್ಲಾ ಮಾಡಬೇಕು; ಆದರೆ ಏಳನೇ ದಿವಸವು ನಿನ್ನ ದೇವರಾದ ಯೆಹೋವನ ಸಬ್ಬತ್ ದಿವಸವಾಗಿದೆ; ಅದರಲ್ಲಿ ನೀನು ಯಾವ ಕೆಲಸ ಮಾಡ ಬಾರದು.

೫) ನಿನ್ನ ದೇವರಾದ ಯೆಹೋವನು ನಿನಗೆ ಕೊಡುವ ದೇಶದಲ್ಲಿ ನಿನ್ನ ದಿವಸಗಳು ಹೆಚ್ಚಾಗುವ ಹಾಗೆ, ನಿನ್ನ ತಂದೆ ತಾಯಿಗಳನ್ನು ಸನ್ಮಾನಿಸು.

೬) ಕೊಲ್ಲ ಬೇಡ.

೭) ವ್ಯಭಿಚಾರ ಮಾಡ ಬೇಡ.

೮) ಕದಿಯ ಬೇಡ.

೯) ನಿನ್ನ ನೆರೆಯವನಿಗೆ ವಿರೋಧವಾಗಿ ಅಪಸಾಕ್ಷಿ ಹೇಳ ಬೇಡ.

೧೦) ನಿನ್ನ ನೆರೆಯವನ ಮನೆ ಆಶಿಸ ಬೇಡ; ಅವನ ಹೆಂಡತಿಯನ್ನೂ ದಾಸದಾಸಿಯರನ್ನೂ ಎತ್ತನ್ನೂ ಕತ್ತೆಯನ್ನೂ, ನಿನ್ನ ನೆರೆಯವನಿಗೆ ಇರುವ ಯಾವದನ್ನಾದರೂ ಆಶಿಸ ಬೇಡ.

೨) ಜನರೆಲ್ಲಾ ಗುಡುಗುಗಳನ್ನೂ ಮಿಂಚುಗಳನ್ನೂ ತುತೂರಿಯ ಧ್ವನಿಯನ್ನೂ ಬೆಟ್ಟ ಹೊಗೆ ಹಾಯುವದನ್ನೂ ನೋಡಿದಾಗ, ಅವರು ತೊಲಗಿ ಹೋಗಿ, ದೂರದಲ್ಲಿ ನಿಂತರು. ಮತ್ತು ಅವರು ಮೋಶೆಗೆ: ನೀನೇ ನಮ್ಮ ಸಂಗಡ ಮಾತಾಡು, ಆಗ ಕೇಳುವೆವು; ಆದರೆ ನಾವು ಸಾಯದ ಹಾಗೆ ದೇವರು ನಮ್ಮ ಸಂಗಡ ಮಾತಾಡದೆ ಇರಲಿ, ಅಂದರು. ಆಗ ಮೋಶೆ ದೇವರಿರುವ ಕಾರ್ಗತ್ತಲೆಯ ಹತ್ತರ ಹೋದನು. ಮತ್ತು ಅವನು ತಿರಿಗಿ ಬಂದು, ಜನರಿಗೆ ಯೆಹೋವನ ಎಲ್ಲಾ ಮಾತುಗಳನ್ನೂ ನ್ಯಾಯಗಳನ್ನೂ ತಿಳಿಸಿ, ಬರೆದನು. ಮತ್ತು ಬೆಳಿಗ್ಯೆ ಎದ್ದು, ಒಂದು ಬಲಿಪೀಠವನ್ನೂ ಇಸ್ರಯೇಲಿನ ಹನ್ನೆರಡು ಕುಲಗಳಿಗೆ ಹನ್ನೆರಡು ಸ್ತಂಭಗಳನ್ನೂ ಕಟ್ಟಿ, ಯೆಹೋವನಿಗೆ ಹೋಮಗಳನ್ನೂ ಸಮಾಧಾನದ ಬಲಿಗಳನ್ನೂ ಅರ್ಪಿಸಲಿಕ್ಕೆ ಯೌವನಸ್ಥರನ್ನು (ಅಂದರೆ ಚೊಚ್ಚಲದವರನ್ನು) ಕಳುಹಿಸಿದನು. ಆಗ

ಮೋಶೆಯು ರಕ್ತದ ಅರೆವಾಶಿಯನ್ನು ತಕ್ಕೊಂಡು, ಬಟ್ಲುಗಳಲ್ಲಿ ಇಟ್ಟು, ಮತ್ತೊಂದು ಅರೆವಾಶಿಯನ್ನು ಬಲಿಪೀಠದ ಮೇಲೆ ಚಿಮಿಕಿಸಿದನು. ಮತ್ತು ಅವನು ಒಡಂಬಡಿಕೆಯ ಪುಸ್ತಕವನ್ನು ತಕ್ಕೊಂಡು, ಜನರು ಕೇಳುವ ಹಾಗೆ ಓದಿದನು. ಅದಕ್ಕವರು: ಯೆಹೋವನು ಹೇಳಿದ್ದನ್ನೆಲ್ಲಾ ನಾವು ಮಾಡಿ, ವಿಧೇಯರಾಗಿರುವೆವು, ಅಂದರು. ಆಗ ಮೋಶೆಯು ರಕ್ತವನ್ನು ತಕ್ಕೊಂಡು, ಜನರ ಮೇಲೆ ಚಿಮಿಕಿಸಿ: ಇಗೋ, ಈ ಎಲ್ಲಾ ಮಾತುಗಳ ವಿಷಯದಲ್ಲಿ ಯೆಹೋವನು ನಿಮಗೆ ಮಾಡುವ ಒಡಂಬಡಿಕೆಯ ರಕ್ತವು, ಅಂದನು. ಆ ಮೇಲೆ ಮೋಶೆ ಪರ್ವತವನ್ನೇರಿ, ಮೇಘದ ಮಧ್ಯದಲ್ಲಿ ಬಂದು, ನಾಲ್ವತ್ತು ಹಗಲು ನಾಲ್ವತ್ತು ರಾತ್ರಿ ಅಲ್ಲಿ ಇದ್ದನು. ಆಗ ಯೆಹೋವನು ಮೋಶೆಯ ಸಂಗಡ ಸೀನಾಯಿ ಪರ್ವತದಲ್ಲಿ ಮಾತಾಡಿ ತೀರಿಸಿದ ಮೇಲೆ, ಅವನಿಗೆ ದೇವರ ಬೆರಳಿನಿಂದ ಬರೆದ ಸಾಕ್ಷಿಯ ಎರಡು ಹಲಿಗೆಗಳನ್ನು ಕೊಟ್ಟನು.

೩) ಆದರೆ ಮೋಶೆ ಬೆಟ್ಟದಿಂದ ಇಳಿಯುವದರಲ್ಲಿ ತಡವಾಗುತ್ತದೆಂದು ಜನರು ನೋಡಿದಾಗ, ಅವರು ಆರೋನನ ಬಳಿಗೆ ಕೂಡಿಕೊಂಡು: ನೀನೆದ್ದು, ನಮ್ಮ ಮುಂದೆ ಹೋಗುವ ದೇವರುಗಳನ್ನು ನಮಗೆ ಮಾಡು; ಯಾಕಂದರೆ ಈ ಮೋಶೆ ಎಂಬವನಿಗೆ ಏನಾಯಿತೋ? ನಮಗೆ ತಿಳಿಯದು, ಅಂದರು. ಆಗ ಆರೋನನು ಅವರಿಗೆ: ನಿಮ್ಮ ಹೆಂಡರ, ನಿಮ್ಮ ಕುಮಾರ ಕುಮಾರ್ತೆಗಳ ಕಿವಿಗಳಲ್ಲಿರುವ ಚಿನ್ನದ ಮುರುವುಗಳನ್ನು ಕಿತ್ತು, ನನಗೆ ತನ್ನಿರಿ, ಅಂದನು. ಆಗ ಜನರೆಲ್ಲ ತಮ್ಮ ಮುರುವುಗಳನ್ನು ಕಿತ್ತು, ಆರೋನನ ಬಳಿಗೆ ತಂದರು. ಅವನು ಅವುಗಳನ್ನು ತೆಗದು ಕೊಂಡು, ಉಳಿಯಿಂದ ರೂಪಿಸಿ, ಎರಕ ಹೊಯಿದ ಕರುವಾಗ ಮಾಡಿದನು. ಆಗಲವರು: ಇಸ್ರಯೇಲೇ, ನಿನ್ನನ್ನು ಐಗುಪ್ತ ದೇಶದೊಳಗಿಂದ ಬರ ಮಾಡಿದ ದೇವರುಗಳು ಇವರೇ ಎಂದು ಹೇಳಿ, ಹೋಮಗಳನ್ನೂ ಸಮಾಧಾನದ ಬಲಿಗಳನ್ನೂ ತಂದು, ಉಣ್ಣುವದಕ್ಕೂ ಕುಡಿಯುವದಕ್ಕೂ ಕೂತು ಕೊಂಡು, ಆಡು

ವದಕ್ಕೆ ಎದ್ದರು. ಆಗ ಯೆಹೋವನು ಮೋಶೆಗೆ: ನೀನು ಇಳಿದು ಹೋಗು; ನಿನ್ನ ಜನರು ಕೆಟ್ಟು ಹೋದರು; ನಾನು ಅವರನ್ನು ಮುಗಿಸಿ ಬಿಟ್ಟು, ನಿನ್ನನ್ನು ದೊಡ್ಡ ಜನಾಂಗವಾಗ ಮಾಡುವೆನು, ಅಂದನು. ಆಗ ಮೋಶೆ ಯೆಹೋವನ ಸನ್ನಿಧಾನದಲ್ಲಿ ಬೇಡಿ ಕೊಂಡು, ಹೇಳಿದ್ದೇನಂದರೆ:—ಯೆಹೋವನೇ, ನೀನು ಮಹಾ ಬಲವುಳ್ಳ ಕೈಯಿಂದ ಐಗುಪ್ತದೊಳಗಿಂದ ಬರ ಮಾಡಿದ ನಿನ್ನ ಜನರ ಮೇಲೆ ಯಾಕೆ ನಿನ್ನ ಕೋಪ ಉರಿಯುವದು? ಅವರನ್ನು ಕೊಲ್ಲುವದಕ್ಕೆ ಹೊರಗೆ ಬರ ಮಾಡಿದ್ದಾನೆಂದು ಐಗುಪ್ತ್ಯರು ಯಾಕೆ ಹೇಳ ಬೇಕು? ಈ ಕೇಡಿನ ವಿಷಯ ಮಾನಸಾಂತರ ಪಡು! ಆಗ ಯೆಹೋವನು ಮಾನಸಾಂತರ ಪಟ್ಟನು. ಮತ್ತು ಮೋಶೆ ತಿರುಗಿ ಕೊಂಡು, ಸಾಕ್ಷಿಯ ಹಲಿಗೆಗಳನ್ನು ಕೈಯಲ್ಲಿ ಹಿಡು ಕೊಂಡು, ಬೆಟ್ಟದಿಂದ ಇಳಿದನು. ಅವನು ದಂಡಿಗೆ ಸಮೀಪ ಬಂದು, ಆ ಕರುವನ್ನೂ ನಾಟ್ಯಗಳನ್ನೂ ನೋಡಿದಾಗ, ಕೋಪ ಗೊಂಡು, ಕೈಯಲ್ಲಿದ್ದ ಹಲಿಗೆಗಳನ್ನು ಬಿಸಾಟು, ಒಡೆದು



ಬಿಟ್ಟನು. ಮತ್ತು ಆ ಕರುವನ್ನು ತಕ್ಕೊಂಡು, ಸುಟ್ಟು, ಹುಡಿ ಮಾಡಿ, ನೀರಿನ ಮೇಲೆ ಚೆಲ್ಲಿ, ಇಸ್ರಯೇಲ್ ಮಕ್ಕಳಿಗೆ ಕುಡಿಯ ಕೊಟ್ಟನು. ತರುವಾಯ ಮೋಶೆ ದಂಡಿನ ಬಾಗಲಲ್ಲಿ ನಿಂತು ಕೊಂಡು: ಯೆಹೋವನ ಕಡೆಯವರು ಯಾರು? ಅವರು ನನ್ನ ಬಳಿಗೆ ಬರಲಿ, ಅಂದನು. ಆಗ ಲೇವಿಯ ಮಕ್ಕಳೆಲ್ಲಾ ಅವನ ಕಡೆಗೆ ಕೂಡಿ ಕೊಂಡರು. ಅವನು ಅವರಿಗೆ ಹೇಳಿದ್ದೇನಂದರೆ: ಯೆಹೋವನು ಹೀಗೆ ಹೇಳಿದ್ದಾನೆ—

ಎಲ್ಲರು ಕತ್ತಿಯನ್ನು ನಡುಗಳಿಗೆ ಕಟ್ಟಿ ಕೊಂಡು, ದಂಡಿನಲ್ಲಿ ಹಾದು ಹೋಗಿ, ತನ್ನ ಸಹೋದರನನ್ನೂ ಜತೆಯವನನ್ನೂ ನೆರೆಯವನನ್ನೂ ಕೊಂದು ಹಾಕಲಿ. ಲೇವಿಯ ಮಕ್ಕಳು ಮೋಶೆಯ ಮಾತಿನ ಹಾಗೆ ಮಾಡಿದರು. ಹೀಗೆ ಆ ದಿವಸದಲ್ಲಿ ಮೂರು ಸಾವಿರ ಮಂದಿ ಬಿದ್ದರು.

ಮರು ದಿವಸದಲ್ಲಿ ಮೋಶೆ ಜನರಿಗೆ: ನೀವು ದೊಡ್ಡ ಪಾಪವನ್ನು ಮಾಡಿದಿರಿ. ಹಾಗಾದರೆ ಈಗ ಯೆಹೋವನ ಬಳಿಗೆ ಏರಿ ಹೋಗುವೆನು. ಒಂದು ವೇಳೆ ನಿಮ್ಮ ಪಾಪಕ್ಕೆ ಕ್ಷಮೆಯಾಗ ಮಾಡ್ಯೇನು, ಅಂದನು. ಆಗ ಮೋಶೆ ಯೆಹೋವನ ಬಳಿಗೆ ತಿರಿಗಿ ಹೋಗಿ: ಅಯ್ಯೋ! ಈ ಜನರು ದೊಡ್ಡ ಪಾಪ ಮಾಡಿದ್ಧಾರೆ; ಅವರ ಪಾಪವನ್ನು ಪರಿಹರಿಸಿದರೆ ಒಳ್ಳೇದು, ಇಲ್ಲದಿದ್ದರೆ ನಿನ್ನ ಪುಸ್ತಕದೊಳಗಿಂದ ನನ್ನನ್ನು ಅಳಿಸಿ ಬಿಡು, ಅಂದನು. ಅದಕ್ಕೆ ಯೆಹೋವನು: ನೀನು ಹೋಗಿ, ಜನರನ್ನು ನಾನು ನಿನಗೆ ಹೇಳಿದ್ದಲ್ಲಿಗೆ ನಡಿಸಿ ಕೊಂಡು ಹೋಗು; ನನ್ನ ದೂತನು ನಿನ್ನ ಮುಂದಾಗಿ ಹೋಗುವನು; ಆದಾಗ್ಯೂ ನಾನು ವಿಚಾರಿಸುವ ದಿವಸದಲ್ಲಿ ನಾನು ಅವರ ಪಾಪವನ್ನು ವಿಚಾರಿಸುವೆನು, ಅಂದನು. ಮತ್ತು ಯೆಹೋವನು ಮೋಶೆಗೆ: ಮೊದಲನೆಯವುಗಳ ಹಾಗಿರುವ ಎರಡು ಕಲ್ಲಿನ ಹಲಿಗೆಗಳನ್ನು ನಿನಗೆ ಕೆತ್ತಿಸು; ಆಗ ನಾನು ಮೊದಲನೇ ಹಲಿಗೆಗಳ ಮೇಲೆ ಇದ್ದ ವಾಕ್ಯಗಳನ್ನು ಅದರ ಮೇಲೆ ಬರಿಯುವೆನು. ಮತ್ತು ಬೆಳಿಗ್ಯೆ ಸಿದ್ಧವಾಗಿದ್ದು, ಬೆಟ್ಟವನ್ನೇರಿ, ಅಲ್ಲಿ ನನ್ನ ಮುಂದೆ ನಿಂತುಕೋ, ಅಂದನು. ಹೀಗೆ ಮೋಶೆ ಅಲ್ಲಿ ನಿಂತು ಕೊಂಡು, ನಾಲ್ವತ್ತು ಹಗಲು ನಾಲ್ವತ್ತು ರಾತ್ರಿ ರೊಟ್ಟಿಯನ್ನು ತಿನ್ನದೆ, ನೀರನ್ನು ಕುಡಿಯದೆ, ಅಲ್ಲಿ ಯೆಹೋವನ ಸಂಗಡ ಇದ್ದನು. ಮೋಶೆ ಸಾಕ್ಷಿಯ ಎರಡು ಹಲಿಗೆಗಳನ್ನು ಕೈಯಲ್ಲಿ ಹಿಡಿದು ಕೊಂಡು, ಸೀನಾಯಿ ಬೆಟ್ಟದಿಂದ ಇಳಿದಾಗ, ತಾನು ದೇವರ ಸಂಗಡ ಮಾತಾಡಿದ್ದರಿಂದ, ತನ್ನ ಮುಖದ ಚರ್ಮ ಪ್ರಕಾಶಿಸುತ್ತದೆಂದು ತಿಳಿಯಲಿಲ್ಲ. ಆದರೆ ಇಸ್ರಯೇಲನ ಮಕ್ಕಳೆಲ್ಲರು ಮೋಶೆಯನ್ನು ನೋಡಿ, ಅವನ ಹತ್ತರ

ಬರುವದಕ್ಕೆ ಭಯ ಪಟ್ಟರು. ಅದು ಕಾರಣ ಮೋಶೆ ಅವರ ಸಂಗಡ ಮಾತಾಡುವಾಗ, ತನ್ನ ಮುಖದ ಮೇಲೆ ಮುಸುಕು ಹಾಕಿಕೊಂಡನು.

II 2. ಬಾ. 163. 90. 119. 120.

---

## ೨೫. ಸಾಕ್ಷಿಯ ಗುಡಾರ, ಬಲಿಗಳು, ಯಾಜಕರು, ಹಬ್ಬಗಳು.

೧) ಮತ್ತು ಯೆಹೋವನು ಮೋಶೆಗೆ: ನೀನು ಇಸ್ರಯೇಲ್ ಮಕ್ಕಳಿಗೆ ಹೇಳ ಬೇಕಾದದ್ದೇನಂದರೆ:—ಮನಸ್ಸು ಇದ್ದವರೆಲ್ಲರು ಚಿನ್ನ, ಬೆಳ್ಳಿ, ತಾಂಬ್ರ, ನೀಲಿ, ರಕ್ತವರ್ಣ, ಲಾಕಿ ಬಣ್ಣ (ಒಂದು ತರದ ಕೆಂಪು), ನಾರು, ಮೇಕೆಯ ರೋಮ, ಕೆಂಪು ಬಣ್ಣದ ಟಗರುಗಳ ತೊಗಲುಗಳು, ದಾಹಶ್ ತೊಗಲುಗಳು (ದಾಹಶ್ ಅಂದರೆ ನೀರಿನಲ್ಲಿ ಬದುಕುವ ಒಂದು ತರದ ಮೃಗ), ಷಿಟ್ಟಿಮ್ ಮರಗಳು, ದೀಪ ಸ್ತಂಭಕ್ಕೋಸ್ಕರವಾದ ಎಣ್ಣೆ, ಸುಗಂಧಗಳು, ರತ್ನಗಳು ಮೊದಲಾದವುಗಳನ್ನು ಯೆಹೋವನಿಗೆ ಉಚಿತವಾಗಿ ತರಲಿ. ಅದರಿಂದ ನನಗೆ ಒಂದು ಪರಿಶುದ್ಧ ವಾಸಸ್ಥಳವನ್ನು ಮಾಡಲಿ. ಹೀಗೆ ನಾನು ಅವರ ಮಧ್ಯದಲ್ಲಿ ವಾಸ ಮಾಡುತ್ತೇನೆ. ನಾನು ನಿನಗೆ ತೋರಿಸಿದ ವಾಸಸ್ಥಳದ ಮಾದ್ರಿಯ ಪ್ರಕಾರವೂ ಅದರ ಸಾಮಾನುಗಳೆಲ್ಲಾದರ ಮಾದ್ರಿಯ ಪ್ರಕಾರವೂ ಅವರು ಎಲ್ಲವನ್ನು ಮಾಡಲಿ, ಅಂದನು. ಆಗ ಇಸ್ರಯೇಲ್ ಮಕ್ಕಳ ಸಭೆಯೆಲ್ಲಾ, ಗಂಡಸರೂ ಹೆಂಗಸರೂ, ಎಲ್ಲಾ ವಿಧವಾದ ಸಾಮಾನುಗಳನ್ನು ತಂದರು. ಬೇಕಾದದ್ದಕಿಂತ ಹೆಚ್ಚು ಸಹ ತಂದರು. ಆಗ ಬೆಚಲೇಲನೂ ಅಹೊಲಿಯಾಬನೂ ಈ ಕೆಲಸಕ್ಕಾಗಿ ಯೆಹೋವನಿಂದ ಜ್ಞಾನವನ್ನು ಹೊಂದಿದ ಜನರೆಲ್ಲರೂ ಯೆಹೋವನು ಆಜ್ಞಾಪಿಸಿದ ಎಲ್ಲವುಗಳನ್ನು ಮಾಡಿದರು. ಬುದ್ಧಿಯುಳ್ಳ ಹೆಂಗಸರೂ ಸಹ ತಮ್ಮ ಕೈಯಿಂದ ಕೆಲಸ ಮಾಡಿದರು.

೨) ಮೋಶೆ ಪರ್ವತದಲ್ಲಿ ನೋಡಿದ ಮಾದ್ರಿಯ ಪ್ರಕಾರ ಅವರು ಒಂದು ಗುಡಾರವನ್ನು ಮಾಡಿದರು. ಆ ಗುಡಾರದ ಉದ್ದವು ಮೂವತ್ತು ಮೊಳ, ಅದರ ಅಗಲವು ಹತ್ತು ಮೊಳ, ಅದರ ಎತ್ತರವು ಹತ್ತು ಮೊಳ. ಅದರ ಗೋಡೆಗಳು ಭಂಗಾರದಿಂದ ಮುಚ್ಚಿದ ಹಲಿಗೆಗಳು. ಆ ಗುಡಾರದ ಮೇಲೆ ಒಂದು ವಿಚಿತ್ರ ವರ್ಣದ ರತ್ನ ಕಂಬಳಿಯನ್ನೂ, ಇದರ ಮೇಲೆ ರೋಮದ ಒಂದು ತೆರೆಯನ್ನೂ, ಇದರ ಮೇಲೆ ಕೆಂಪು ಬಣ್ಣದ ಟಗರಿನ ತೊಗಲನ್ನೂ, ಇದರ ಮೇಲೆ ದಾಹಶ್ ತೊಗಲನ್ನು ಹಾಕಿ, ಮುಚ್ಚಿದರು. ಗುಡಾರದೊಳಗೆ ಎರಡು ಕೋಣೆಗಳಿದ್ದವು. ಮುಂದಿನದರ ಹೆಸರು, ಪರಿಶುದ್ಧ ಸ್ಥಳ. ಅದು ಇಪ್ಪ

ಸಾಕ್ಷಿಗುಡಾರದ ನಮೂನೆ.



ತ್ತು ಮೊಳ ಉದ್ದವು ಇತ್ತು. ಹಿಂದಿನ ಕೋಣೆಯ ಹೆಸರು, ಅತಿ ಪರಿಶುದ್ಧ ಸ್ಥಳ. ಈ ಎರಡು ಕೋಣೆಗಳನ್ನು ವಿಂಗಡಿಸುವದಕ್ಕೆ ಅವುಗಳ ನಡುವೆ ಬಹಳ ಚಂದವುಳ್ಳ ಒಂದು ತೆರೆ ಇತ್ತು. ಗುಡಾರದ ಸುತ್ತಲು ಒಂದು ಅಂಗಳವು ಇತ್ತು. ಅದರ ಉದ್ದವು ನೂರು ಮೊಳ, ಅಗಲವು ಐವತ್ತು ಮೊಳ; ಈ ಅಂಗಳದ ಸುತ್ತಲಾಗಿ ಸಹ ಐದು


ಸಾಕ್ಷಿ ಗುಡಾರದ ಪರದೆಯನ್ನು ಎತ್ತಿ, ಅದರ ಒಳಗಡೆಯನ್ನು ಕಾಣಿಸುವ ಚಿತ್ರ

ಮೊಳ ಎತ್ತರವಾದ ಬಿಳೀ ವಸ್ತ್ರದ ಪರದೆಗಳನ್ನು 60 ಸ್ತಂಭಗಳಲ್ಲಿ ಹಾಕಿದರು. ಮತ್ತು ಅತಿ ಪರಿಶುದ್ಧ ಸ್ಥಳಕ್ಕೆ ಷಿಟ್ಟೀಮ್ ಮರದಿಂದ

ಒಂದು ಪೆಟ್ಟಿಗೆಯನ್ನು ಮಾಡಿ, ಅದನ್ನು ಶುದ್ಧ ಭಂಗಾರದಿಂದ ಹೊರಗೂ ಒಳಗೂ ಹೊದಗಿಸಿದರು. ಅದರಲ್ಲಿ ನ್ಯಾಯಪ್ರಮಾಣದ ಎರಡು ಹಲಿಗೆಗಳೂ ಮನ್ನಾ ಇಟ್ಟ ಪಾತ್ರೆಯೂ ಇದ್ದವು. ಈ ಪೆಟ್ಟಿಗೆಯನ್ನು ಮುಚ್ಚುವದಕ್ಕೆ ಶುದ್ಧ ಭಂಗಾರದಿಂದ ಮಾಡಿದ ಕೃಪಾಸನವೆಂಬ ಮುಚ್ಚಳು ಇತ್ತು. ಇದಕ್ಕೆ ಭಂಗಾರದಿಂದ ನೆರಳು ಕೊಡುವ ಮಹಿಮೆ ಉಳ್ಳ ಕೆರೂಬಿಗ್ಳನ್ನು ಮಾಡಿದರು. ಪರಿಶುದ್ಧ ಸ್ಥಳ ಎಂಬಲ್ಲಿ ಭಂಗಾರದಿಂದ ಹೊದಗಿಸಿದ ಧೂಪಬಲಿಪೀಠವೂ, ಯಾವಾಗಲೂ ಹನ್ನೆರಡು ರೊಟ್ಟಿಗಳನ್ನು ಇಡ ಬೇಕಾದ ಸಮ್ಮುಖದ ಮೇಜಿಯೂ, ಶುದ್ಧ ಭಂಗಾರವಾದ ದೀಪಸ್ತಂಭವೂ ಇದ್ದವು. ಅಂಗಳದಲ್ಲಿ ಬಲಿಯರ್ಪಿಸುವದಕ್ಕೆ ಒಂದು ಬಲಿಪೀಠವನ್ನೂ, ಯಾಜಕರು ಗುಡಾರಕ್ಕೆ ಹೋಗುವಾಗ ತಮ್ಮನ್ನು ಶುದ್ಧ ಮಾಡಿ ಕೊಳ್ಳಲಿಕ್ಕೆ ತೊಳಿಯುವ ಪಾತ್ರೆಯನ್ನೂ ಇಟ್ಟರು. ಐಗುಪ್ತದಿಂದ ಹೊರಟ ಮೇಲೆ ಎರಡನೇ ವರುಷದ ಮೊದಲನೇ ತಿಂಗಳಿನ ಮೊದಲನೇ ದಿವಸದಲ್ಲಿ ಮೋಶೆ ಸಭೆಯ ಗುಡಾರವನ್ನು ನಿಲ್ಲಿಸಿ, ಅದರ ಸಾಮಾನುಗಳನ್ನು ಅದರಲ್ಲಿ ಇಟ್ಟನು. ಆಗ ಮೇಘವು ಸಭೆಯ ಗುಡಾರವನ್ನು ಮುಚ್ಚಿ, ಯೆಹೋವನ ಮಹಿಮೆಯು ಅದನ್ನು ತುಂಬಿತು. ಮೇಘವು ವಾಸಸ್ಥಳವನ್ನು ಬಿಟ್ಟು ಏರುವಾಗ, ಇಸ್ರಯೇಲ್ ಮಕ್ಕಳು ಹೊರಟರು. ಆದರೆ ಅದು ಏರದೆ ಇರುವಾಗ, ಅವರು ಹೊರಡಲಿಲ್ಲ.

೩) ಪಾಪಗಳ ವಿಷಯವಾಗಿ ಶಾಂತ ಪಡಿಸಲಿಕ್ಕೆ ಯೆಹೋವನು ಇಸ್ರಯೇಲ್ ಮಕ್ಕಳಿಗೆ ದನ, ಕುರಿ, ಮೇಕೆ, ಪಾರಿವಾಳಾದಿಗಳ ಬಲಿಗಳನ್ನು ನೇಮಿಸಿದನು. ಯಾವವಂದರೆ:—

೧) ಹೋಮಬಲಿಯು. ಅದನ್ನು ತಂದವನು ತನ್ನ ಕೈ ಅದರ ತಲೆಯ ಮೇಲಿಟ್ಟು, ಕೊಯ್ಯ ಬೇಕಾಗಿತ್ತು. ಯಾಜಕನು ಅದರ ರಕ್ತವನ್ನು ಬಲಿಪೀಠದ ಸುತ್ತಲಾಗಿ ಚಿಮಿಕಿಸಿ, ಅದರ ಮಾಂಸವನ್ನು ಯೆಹೋವನಿಗೆ ಸುವಾಸನೆಯ ಹೋಮವಾಗಿ ಪೂರ್ಣವಾಗಿ ಸುಡ ಬೇಕಾಗಿತ್ತು. ಇದಲ್ಲದೆ ರೊಟ್ಟಿಯೂ ದ್ರಾಕ್ಷೇ ರಸವೂ

ಎಣ್ಣೆಯೂ ಲೋಭಾನವೂ ಇವುಗಳನ್ನು ಅದರ ಕೂಡಾ ಅರ್ಪಿಸ ಬೇಕಾಗಿತ್ತು.

೨) ಪಾಪ ಅಪರಾಧಗಳ ಬಲಿ. ಒಬ್ಬ ಮನುಷ್ಯನು ಯೆಹೋವನ ಯಾವದೊಂದು ಅಪ್ಪಣೆಗೆ ವಿರೋಧವಾಗಿ ತಿಳಿಯದೆ ಪಾಪ ಮಾಡಿ, ತಾನು ಪಾಪ ಮಾಡಿದ್ದೇನೆಂದು ತಿಳು ಕೊಂಡರೆ, ಅವನು ಒಂದು ಪಾಪದ ಬಲಿಯನ್ನಾದರೂ ಅಪರಾಧದ ಬಲಿಯನ್ನಾದರೂ ತರ ಬೇಕಾಗಿತ್ತು. ಇದರಿಂದ ಅವನು ತಿರಿಗಿ ಪರಿಶುದ್ಧ ಜನರ ಐಕ್ಯದಲ್ಲಿ ಶೇರಿಸಿದವನಾದನು. ಇಂಥ ಬಲಿ ತರುವವನು ಅದರ ತಲೆಯ ಮೇಲೆ ಕೈ ಇಟ್ಟು, ಅದನ್ನು ಕೊಯ್ಯುವನು. ಮತ್ತು



ಯಾಜಕನು ಅದರ ರಕ್ತವನ್ನು ಪರಿಶುದ್ಧ ಸ್ಥಳದಲ್ಲಿ ಚಿಮಿಕಿಸಿ, ಅದರ ಕೊಬ್ಬನ್ನು ಬಲಿಪೀಠದ ಮೇಲೆ ಸುಟ್ಟು, ಮಿಕ್ಕಾದದ್ದೆಲ್ಲಾ ದಂಡು ಇಳಿದ ಸ್ಥಳದ ಹೊರಗೆ ಸುಟ್ಟು ಬಿಡುವನು.

೩) ಸಮಾಧಾನದ ಬಲಿ. ಇದರ ರಕ್ತವನ್ನು ಚಿಮಿಕಿಸಿ, ಕೊಬ್ಬನ್ನು ಮಾತ್ರ ಬಲಿಪೀಠದಲ್ಲಿ ಸುಟ್ಟ ಮೇಲೆ, ಅದರ ಮಾಂಸ ಊಟ ಮಾಡುವರು.

೪) ಪರಿಶುದ್ಧವಾದದ್ದರ ಸೇವೆಗೆ ಯೆಹೋವನು ಇಸ್ರಯೇಲ್ ಮಕ್ಕಳ ಚೊಚ್ಚಲದವರಿಗೆ ಬದಲಾಗಿ ಲೇವಿಯ ಗೋತ್ರವನ್ನು ವಿಂಗಡಿಸಿದನು. ಆದರೆ ಯಾಜಕತ್ವಕ್ಕೆ ಆರೋನನ ಸಂತಾನವನ್ನು



ಮಾತ್ರ ನೇಮಿಸಿದನು. ಆರೋನನು, ಅವನ ತರುವಾಯ ಯಾವಾಗಲು ಅವನ ಸಂತಾನದ ಹಿರೇ ಮಗನು ಪ್ರಧಾನಯಾಜಕನಾದನು. ಲೇವಿಯ ಗೋತ್ರದ ಹೆಚ್ಚಾದವರು ಪರಿಶುದ್ಧವಾದದ್ದರ ಸೇವೆಯಲ್ಲಿ ಯಾಜಕರಿಗೆ ಸಹಾಯಕರಾಗಿದ್ದರು. ಈ ಗೋತ್ರವು ಬೇರೆ ಗೋತ್ರಗಳ ಸಂಗಡ ಕಾನಾನ್ ದೇಶದಲ್ಲಿ ಸ್ವಾಸ್ಥ್ಯದ ಭೂಮಿಯನ್ನು ಹೊಂದಲಿಲ್ಲ. ಅದು ಕಾರಣ ಬೇರೆ ಗೋತ್ರದವರು ಇವರ ಕಾಲಕ್ಷೇಪಕ್ಕೋಸ್ಕರ ತಮ್ಮ ಹುಟ್ಟುವಳಿಯ ಹತ್ತನೇ ಪಾಲನ್ನು ಕೊಡುವದಲ್ಲದೆ, ತಮ್ಮ ಚೊಚ್ಚಲದವರನ್ನು ಪರಿಶುದ್ಧವಾದದ್ದರ ಸೇವೆಯಿಂದ ಬಿಡಿಸಲಿಕ್ಕೆ ಹಣ ಕೊಡ ಬೇಕಾಯಿತು. ಯಾಜಕರು ಜನರು ತಂದ ಬಲಿಯರ್ಪಣೆಯ ಕೆಲಸವನ್ನು ಮಾಡಿ, ಪರಿಶುದ್ಧ ಸ್ಥಳದೊಳಗೆ

ದಿನಾಲು ಧೂಪವನ್ನು ಅರ್ಪಿಸಿ, ಪರಿಶುದ್ಧ ಸ್ಥಳದಲ್ಲಿ ನಿತ್ಯವಾಗಿ ಉರಿಯುವ ದೀಪಕ್ಕೆ ಎಣ್ಣೆ ಹೊಯ್ಯ ಬೇಕಾಗಿತ್ತು. ಆದರೆ ಪ್ರಧಾನಯಾಜಕನು ವರುಷಕ್ಕೆ ಒಮ್ಮೆ ತನ್ನ ಪಾಪಕ್ಕೋಸ್ಕರವೂ ಪ್ರಜೆಯ ಪಾಪಕ್ಕೋಸ್ಕರವೂ ಅರ್ಪಿಸಿದ ಬಲಿಗಳ ರಕ್ತವನ್ನು ತಕ್ಕೊಂಡು, ಅತಿ ಪರಿಶುದ್ಧ ಸ್ಥಳದೊಳಗೆ ಹೋಗಿ, ಆ ರಕ್ತವನ್ನು ಕೃಪಾಸನದ ಕಡೆಗೆ ಚಿಮಿಕಿಸಿ, ಜನರೆಲ್ಲರ ಪಾಪಗಳ ವಿಷಯವಾಗಿ ಶಾಂತ ಪಡಿಸ ಬೇಕಾಯಿತು. ಇದಲ್ಲದೆ ಯಾಜಕರು ಪ್ರಜೆಯೊಳಗೆ ನ್ಯಾಯಗಳನ್ನು ತೀರಿಸಿ, ನ್ಯಾಯಪ್ರಮಾಣವನ್ನು ಬೋಧಿಸಿ, ಪ್ರಜೆಯನ್ನು ಯೆಹೋವನ ಹೆಸರಿನಲ್ಲಿ ಆಶೀರ್ವದಿಸುವವರಾಗಿದ್ದರು; ಯೆಹೋವನ ಅಪ್ಪಣೆಯ ಪ್ರಕಾರ ಅವರು ಜನರಿಗೆ ಹೇಳ ತಕ್ಕ ಆಶೀರ್ವಾದ ಇದೇ:—ಯೆಹೋವನು ನಿನ್ನನ್ನು ಆಶೀರ್ವದಿಸಿ, ಕಾಪಾಡಲಿ; ಯೆಹೋವನು ತನ್ನ ಮುಖವನ್ನು ನಿನ್ನ ಕಡೆಗೆ ಪ್ರಕಾಶಿಸ ಮಾಡಿ, ನಿನಗೆ ದಯ ಮಾಡಲಿ; ಯೆಹೋವನು ತನ್ನ ಮುಖವನ್ನು ನಿನ್ನ ಕಡೆಗೆ ಎತ್ತಿ, ನಿನಗೆ ಸಮಾಧಾನವನ್ನು ಕೊಡಲಿ.

ವರುಷಕ್ಕೆ ಮೂರು ಸಾರಿ ಗಂಡಸರೆಲ್ಲರು ಯೆಹೋವನು ಆರಿಸಿ ಕೊಂಡ ಸ್ಥಳದಲ್ಲಿ ಇಸ್ರಯೇಲ್ ದೇವರಾದ ಯೆಹೋವನ ಮುಂದೆ ಕೂಡಿ ಕೊಳ್ಳ ಬೇಕಾಗಿತ್ತು. ಮೊದಲನೇ ತಿಂಗಳಿನ ಹದಿನಾಲ್ಕನೇ ದಿವಸದಲ್ಲಿ ಯೆಹೋವನ ಪಸ್ಕ ಇತ್ತು. ಆಗ ಇಸ್ರಯೇಲ್ಯರು ಐಗುಪ್ತ ದೇಶದಿಂದ ಹೊರಟದ್ದನ್ನು ನೆನಪು ಮಾಡಿ ಕೊಳ್ಳುವದಕ್ಕೆ ಪಸ್ಕದ ಕುರಿಮರಿಯನ್ನೂ ಹದಿನೈದನೇ ದಿವಸವನ್ನು ಮೊದಲ್ಗೊಂಡು ಏಳು ದಿವಸ ಪರಿಯಂತರ ಹುಳಿಯಿಲ್ಲದ ರೊಟ್ಟಿಗಳನ್ನೂ ತಿನ್ನುವರು. ಇದಲ್ಲದೆ ಯೆಹೋವನಿಗೆ (ಜವೆ ಗೋಧಿಯ) ಬೆಳೆಯ ಹೊಸ ಫಲವನ್ನು ಕಾಣಿಕೆಯಾಗಿ ತರುವರು. ಈ ಹಬ್ಬ ಐವತ್ತು ದಿವಸದ ಮೇಲೆ ವಾರಗಳ ಹಬ್ಬ (ಪಂಚಾಶತ್ತಿನ ಹಬ್ಬ) ಬಂತು. ಆಗಲವರು ಕೊಯಿದ ಬೆಳೆಯ ಪ್ರಥಮ ಫಲವಾಗಿ ತಮ್ಮ ತಮ್ಮ ಎಲ್ಲಾ ವಾಸಸ್ಥಳಗಳಿಂದ ಯೆಹೋವನಿಗೆ ಎರಡೆರಡು ರೊಟ್ಟಿಗಳ

ಕಾಣಿಕೆಯನ್ನು ತಕ್ಕೊಂಡು ಬರ ಬೇಕಾಗಿತ್ತು. (ಇತ್ತಲಾಗಿ ಈ ಹಬ್ಬದ ಸಮಯದಲ್ಲಿ ನ್ಯಾಯಪ್ರಮಾಣ ಕೊಟ್ಟದ್ದನ್ನು ಸಹ ಜ್ಞಾಪಕ ಮಾಡಿ ಕೊಂಡರು.) ಏಳನೇ ತಿಂಗಳಿನ ಹದಿನೈದನೇ ದಿವಸದಲ್ಲಿ ದೇಶದ ಎಲ್ಲಾ ವಿಧವಾದ ಫಲಗಳನ್ನು ಕೂಡಿಸಿದ ಮೇಲೆ ಏಳು ದಿವಸ ಪರಿಯಂತರ ಪರ್ನಶಾಲೆಗಳ ಹಬ್ಬ ಇತ್ತು. ಅದರಲ್ಲಿ ಯೆಹೋವನು ಇಸ್ರಯೇಲ್ ಮಕ್ಕಳನ್ನು ಐಗುಪ್ತದೊಳಗಿಂದ ಕರಕೊಂಡಾಗ, ಅವನು ಅವರನ್ನು ಪರ್ನಶಾಲೆಗಳಲ್ಲಿ ವಾಸ ಮಾಡಿಸಿದನೆಂಬದನ್ನು ನೆನಪು ಮಾಡಿ ಕೊಳ್ಳ ಬೇಕಾಗಿತ್ತು.

ಬಾ. 102. 119. 120. I. 13. 56. 57.

---

## ೨೬. ದುರಾಶೆಯುವರ ಸಮಾಧಿಗಳು.

ಇಸ್ರಯೇಲ್ ಮಕ್ಕಳು ಐಗುಪ್ತದಿಂದ ಹೊರಟು ಎರಡನೇ ತಿಂಗಳಿನ ಇಪ್ಪತ್ತನೇ ದಿವಸದಲ್ಲಿ ಅವರು ಹೆಚ್ಚು ಕಡಿಮೆ ಒಂದು ವರ್ಷ ಸೀನಾಯಿ ಪರ್ವತದ ಹತ್ತರ ಇದ್ದ ಮೇಲೆ, ಮೇಘವು ಸಾಕ್ಷಿಯ ಗುಡಾರದ ಮೇಲಿನಿಂದ ಏರಿತು.

ಮತ್ತು ಇಸ್ರಯೇಲ್ ಮಕ್ಕಳು ಹೊರಟು, ಮೂರು ದಿವಸದ ಪ್ರಯಾಣ ಹೋದರು. ಆಗ ಅವರೊಳಗೆ ಇದ್ದ ನೀಚರು ಆಶಿಸಿದಾಗ, ಇಸ್ರಯೇಲ್ ಮಕ್ಕಳೆಲ್ಲಾ ಕೂಡಾ ಅತ್ತು: ನಮಗೆ ತಿನ್ನ ಕೊಡುವವರು ಯಾರು? ನಾವು ಐಗುಪ್ತ ದೇಶದಲ್ಲಿ ಸುಮ್ಮನೆ ಉಂಡ ಮೀನನ್ನೂ ಸೌತೆಕಾಯಿಗಳನ್ನೂ ಕರಬೂಜಗಳನ್ನೂ ಕಾಡುಳ್ಳಿ, ನೀರುಳ್ಳಿ, ಬೆಳ್ಳುಳ್ಳಿಗಳನ್ನೂ ನೆನಪು ಮಾಡುತ್ತೇವೆ. ಆದರೆ ಈಗ ಈ ಮನ್ನ ಹೊರ್ತಾಗಿ ಮತ್ತೇನಾದರೂ ನಮಗೆ ಕಾಣುವದಿಲ್ಲ, ಅಂದರು. ಆದ ಕಾರಣ ಯೆಹೋವನ ಕೋಪವು ಬಹಳವಾಗಿ ಉರಿಯಿತು. ಮೋಶೆಗೆ ಸಹಾ ಅದು ಬೇಸರವಾಗಿ ಕಂಡಿತು. ಆದದರಿಂದ ಅವನು ಯೆಹೋವನಿಗೆ: ಈ ಸಮಸ್ತ ಜನರ ಭಾರವನ್ನು

ನನ್ನ ಮೇಲೆ ಹೊತ್ತು ಕೊಳ್ಳುವದು ನನ್ನೊಬ್ಬನಿಂದ ಆಗುವದಿಲ್ಲ. ಅದು ನಾನು ತಾಳಲಾರದ ಭಾರವಾಗಿದೆ, ಅಂದನು. ಅದಕ್ಕೆ ಯೆಹೋವನು ಮೋಶೆಗೆ ಹೇಳಿದ್ದೇನಂದರೆ:—ಜನರ ಹಿರಿಯರಿಂದ ಎಪ್ಪತ್ತು ಮಂದಿಯನ್ನು ಕೂಡಿಸಿ, ಅವರನ್ನು ಸಭೆಯ ಗುಡಾರದ ಕಡೆಗೆ ಕರ ಕೊಂಡು ಬಾ; ಆಗ ನಾನು ಇಳಿದು, ಅಲ್ಲಿ ನಿನ್ನ ಮೇಲಿರುವ ಆತ್ಮದಿಂದ ತೆಗದು, ಅವರ ಮೇಲೆ ಇಡುವೆನು; ಹೀಗೆ ಅವರು ನಿನ್ನ ಸಂಗಡ ಜನರ ಭಾರವನ್ನು ಹೊರುವರು. ಮತ್ತು ಜನರಿಗೆ: ನಾಳೆ ನಿಮಗೆ ಮಾಂಸವನ್ನು ತಿನ್ನ ಕೊಡುವೆನು; ಒಂದು ದಿನವಲ್ಲ, ಎರಡಲ್ಲ, ಐದಲ್ಲ, ಹತ್ತಲ್ಲ, ಇಪ್ಪತ್ತಲ್ಲ, ಅದು ನಿಮ್ಮ ಮೂಗಿನಿಂದ ಬಂದು ನಿಮಗೆ ಅಸಹ್ಯವಾಗುವ ಪರಿಯಂತರ, ಒಂದು ತಿಂಗಳ ತನಕ ಮಾಂಸವನ್ನು ತಿನ್ನುವಿರಿ; ಯಾಕಂದರೆ ನಿಮ್ಮ ಮಧ್ಯದಲ್ಲಿರುವ ಯೆಹೋವನನ್ನು ನೀವು ಅಲಕ್ಷ್ಯ ಮಾಡಿ—ನಾವು ಯಾಕೆ ಐಗುಪ್ತ ದೇಶದಿಂದ ಹೊರಟೆವೆಂದು ಹೇಳಿದಿರಲ್ಲ? ಎಂದು ಹೇಳು, ಅಂದನು. ಆಗ ಮೋಶೆ: ನನ್ನ ಸಂಗಡ ಇರುವ ಜನರು ಆರು ಲಕ್ಷ ಕಾಲಾಳು; ಮತ್ತು, ಅವರು ಒಂದು ತಿಂಗಳ ತನಕ ತಿನ್ನುವ ಹಾಗೆ ಅವರಿಗೆ ಮಾಂಸವನ್ನು ಕೊಡುವೆನೆಂದು, ನೀನು ಹೇಳುತ್ತಿಯೋ? ಅವರಿಗೆ ಸಾಕಾಗುವ ಹಾಗೆ, ಕುರಿ ದನಗಳನ್ನು ಕೊಯ್ಯ ಬೇಕೋ? ಇಲ್ಲವೆ ಸಮುದ್ರದ ಮೀನುಗಳೆಲ್ಲಾ ಕೂಡಿಸಿ ತರ ಬೇಕೋ? ಆಗ ಯೆಹೋವನು ಅವನಿಗೆ: ಯೆಹೋವನ ಕೈ ಕುಂದಿತೋ? ಅಂದನು. ಮತ್ತು ಯೆಹೋವನು ಹೇಳಿದ ಹಾಗೆ ಮೋಶೆ ಮಾಡಿದನು. ಆಗ ಯೆಹೋವನ ಕಡೆಯಿಂದ ಒಂದು ಘಾಳಿಯು ಹೊರಟು, ಸಮುದ್ರದಿಂದ ಲಾವಕ್ಕಿಗಳನ್ನು ತಂದು, ದಂಡಿನ ಈಚೆಯಲ್ಲಿಯೂ ಒಂದು ದಿವಸದ ಹಾದಿ, ಆಚೆಯಲ್ಲಿಯೂ ಒಂದು ದಿವಸದ ಹಾದಿ, ಈ ಪ್ರಕಾರ ದಂಡಿನ ಸುತ್ತಲು ಎರಡು ಮೊಳ ಎತ್ತರವಾಗಿ ಭೂಮಿಯ ಮೇಲೆ ಇಳಿಸಿ ಬಿಟ್ಟಿತು. ಮತ್ತು ಜನರು ಎದ್ದು, ಆ ದಿವಸವೆಲ್ಲಾ ಆ ರಾತ್ರಿ ಎಲ್ಲಾ ಮರು ದಿವಸವೆಲ್ಲಾ ಲಾವಕ್ಕಿಗಳನ್ನು ಕೂಡಿಸಿದರು. ಆದರೆ



ಮಾಂಸವು ಇನ್ನು ಅವರ ಹಲ್ಲುಗಳ ನಡುವೆ ಇದ್ದಾಗ, ಅದನ್ನು ಕಡಿಯುವದಕ್ಕಿಂತ ಮುಂಚೆ ಯೆಹೋವನ ಕೋಪವು ಜನರ ಮೇಲೆ ಉರಿಯಿತು. ಮತ್ತು ಅನೇಕರು ಸಾಯುವ ಹಾಗೆ ಯೆಹೋವನು ಅವರನ್ನು ಮಹಾ ದೊಡ್ಡ ಬಾಧೆಯಿಂದ ಹೊಡೆದನು. ಆಶಿಸಿದ ಜನರನ್ನು ಅಲ್ಲಿ ಹೂಣಿಟ್ಟದರಿಂದ ಆಸ್ಥಳಕ್ಕೆ ಕಿಬ್ರೋತ್ ಹತ್ತಾವ (ಅಂದರೆ ಆಶಿಸಿದವರ ಸಮಾಧಿಗಳು) ಎಂದು ಹೆಸರಾಯಿತು.

ಬಾ. 72. III. 34.

---

## ೨೭. ಹೊಂಚುಗಾರರು.

(ಅಂಕೆಗಳು. ೧೩. ೧೪.)

೧) ಇಸ್ರಯೇಲ್ಯರು (ಕಾನಾನ್ ದೇಶದ ದಕ್ಷಿಣ ಮೇರೆಯಲ್ಲಿರುವ) ಪಾರಾನ್ ಅರಣ್ಯಕ್ಕೆ ಬಂದ ಮೇಲೆ ಯೆಹೋವನು ಮೋಶೆಯ ಸಂಗಡ ಮಾತಾಡಿ, ಹೇಳಿದ್ದೇನಂದರೆ:—ನಾನು ಇಸ್ರಯೇಲ್ ಮಕ್ಕಳಿಗೆ ಕೊಡುವ ಕಾನಾನ್ ದೇಶವನ್ನು ಪಾಳತಿ ನೋಡುವ ಹಾಗೆ ಜನರನ್ನು ಕಳುಹಿಸು. ಒಂದೊಂದು ಕುಲಕ್ಕೋಸ್ಕರ ಒಬ್ಬೊಬ್ಬನನ್ನು, ಅವರೊಳಗೆ ಪ್ರಭುಗಳಾದವರನ್ನು ಕಳುಹಿಸ ಬೇಕು. ಮೋಶೆ ಯೆಹೋವನ ಅಪ್ಪಣೆಯ ಪ್ರಕಾರ ಹನ್ನೆರಡು ಮಂದಿಯನ್ನು ಕಳುಹಿಸಿದನು. ಇವರು ಹೋಗಿ, ದಕ್ಷಿಣದಲ್ಲಿರುವ ಚೀನ್ ಎಂಬ ಅರಣ್ಯದಿಂದ ಹಾಮಾಥಿನ ಕಡೆಯಲ್ಲಿರುವ ರೆಹೋಬಿನ ಪರಿ

ಯಂತರಕ್ಕೂ ಪಾಳತಿ ನೋಡಿದರು. ಎಶ್ಕೋಲೆಂಬ ಹಳ್ಳದಲ್ಲಿ ಒಂದು ದ್ರಾಕ್ಷೇ ಹಣ್ಣಿನ ಗೊಂಚಲಿನ ಕೊಂಬೆಯನ್ನು ಕೊಯಿದು, ಅದನ್ನು ಅಡ್ಡೆಯ ಮೇಲೆ ಇಬ್ಬರಿಬ್ಬರಾಗಿ ವೈದರು. ಇದಲ್ಲದೆ ದಾ



ಳಿಂಬ, ಅಂಜೂರ ಹಣ್ಣುಗಳನ್ನು ತಕ್ಕೊಂಡು, ನಾಲ್ವತ್ತು ದಿವಸಗಳ ಮೇಲೆ ತಿರಿಗಿ ಬಂದರು. ಬಂದ ಮೇಲೆ ಸಮಸ್ತ ಸಭೆಗೆ ವೃತ್ತಾಂತವನ್ನು ವಿವರಿಸಿ, ಆ ದೇಶದ ಫಲಗಳನ್ನು ತೋರಿಸಿದರು. ಮತ್ತು ಅವರು ಜನರಿಗೆ ಹೇಳಿದ್ದೇನಂದರೆ:—ನೀವು ನಮ್ಮನ್ನು ಕಳುಹಿಸಿದ ದೇಶಕ್ಕೆ ಶೇರಿದೆವು; ಅದು ಹಾಲೂ ಜೇನೂ ಹರಿಯುವ ದೇಶವು ಸರಿ; ಅದರ ಫಲವು ಇದೇ. ಆದರೆ ಆ ದೇಶದಲ್ಲಿ ವಾಸವಾಗಿರುವ ಜನರು ಬಲವುಳ್ಳವರು; ಪಟ್ಣಗಳು ಭದ್ರವಾಗಿಯೂ ಮಹಾ ದೊಡ್ಡವುಗಳಾಗಿಯೂ ಅವೆ; ಮತ್ತು ರಾಕ್ಷಸ ಸಂತತಿಯವನಾದ ಆನಕನ ಮಕ್ಕಳನ್ನು ಅಲ್ಲಿ ಕಂಡೆವು. ಅವರ ಮುಂದೆ ನಾವು ಮಿಡಿತೆಗಳ ಹಾಗೆ ಇದ್ದೆವು. ಆದರೆ ಹೊಂಚುಗಾರರಲ್ಲಿ ಒಬ್ಬನಾಗಿರುವ ಕಾಲೆಬನೆಂಬವನು ಜನರನ್ನು ಸುಮ್ಮನಿರಿಸಿ: ನಾವು ಏರಿ, ಆ ದೇಶವನ್ನು ಸ್ವಾಧೀನ ಮಾಡಿ ಕೊಳ್ಳುವ; ಯಾಕಂದರೆ ಅದನ್ನು ಜಯಿಸುವದು ನಮ್ಮಿಂದಾಗುವದು, ಅಂದನು. ಆದರೆ ಅವನ ಸಂಗಡ ಏರಿ ಹೋದ ಮನುಷ್ಯರು: ಆ ಜನರ ಬಳಿಗೆ ಏರಿ ಹೋಗುವದಕ್ಕೆ ನಮ್ಮಿಂದಲಾ

ಗದು. ಅವರು ನಮಗಿಂತ ಬಲವುಳ್ಳವರಾಗಿದ್ದಾರೆ ಎಂದು ಹೇಳಿ, ತಾವು ಪಾಳತಿ ನೋಡಿದ ದೇಶದ ಮೇಲೆ ಇಸ್ರಯೇಲ್ ಮಕ್ಕಳಿಗೆ ಕೆಟ್ಟ ಸುದ್ದಿ ತಂದರು. ಆಗ ಸಭೆ ಎಲ್ಲಾ ಗುಲ್ಲೆಬ್ಬಿಸಿ, ಆ ರಾತ್ರಿ ಎಲ್ಲಾ ಅತ್ತರು. ಮತ್ತು ಮೋಶೆಗೂ ಆರೋನನಿಗೂ ವಿರೋಧ ವಾಗಿ ಗುಣುಗುಟ್ಟಿ, ಹೇಳಿದ್ದೇನಂದರೆ:—ನಾವು ಐಗುಪ್ತದಲ್ಲಿಯಾಗ ಲಿ ಅರಣ್ಯದಲ್ಲಿಯಾಗಲಿ ಸತ್ತರೆ ನಮಗೆ ಉತ್ತಮ ಎಂದು ಹೇಳಿ, ನಾವು ಕತ್ತಿಯಿಂದ ಬೀಳುವ ಹಾಗೆ ನಮ್ಮ ಹೆಂಡರೂ ಮಕ್ಕಳೂ ಸುಲಿಗೆ ಆಗುವ ಹಾಗೆ, ಯೆಹೋವನು ನಮ್ಮನ್ನು ಯಾಕೆ ಬರ ಮಾ ಡಿದ್ದಾನೆ? ಮುಖ್ಯಸ್ಥನನ್ನು ಇಟ್ಟು ಕೊಂಡು, ಐಗುಪ್ತ ದೇಶಕ್ಕೆ ತಿರು ಗುವ, ಬನ್ನಿರಿ ಎಂದು, ಒಬ್ಬರಿಗೊಬ್ಬರು ಹೇಳಿ ಕೊಂಡರು. ಆಗ ಮೋಶೆಯೂ ಆರೋನನೂ ಇಸ್ರಯೇಲ್ ಸಮಸ್ತ ಸಭೆಯ ಮುಂದೆ ಅಡ್ಡ ಬಿದ್ದರು. ಇದಲ್ಲದೆ ದೇಶವನ್ನು ಪಾಳತಿ ನೋಡಿದವರಲ್ಲಿದ್ದ ಯೆಹೋಶುವನೂ ಕಾಲೆಬನೂ ತಮ್ಮ ವಸ್ತ್ರಗಳನ್ನು ಹರ ಕೊಂಡು, ಸಭೆಯ ಕೂಟಕ್ಕೆ ಹೇಳಿದ್ದೇನಂದರೆ:—ನಾವು ದಾಟಿ ಹೋದ ದೇ ಶವು ಅತ್ಯುತ್ತಮವಾದ ದೇಶವೇ; ಯೆಹೋವನು ನಮ್ಮಲ್ಲಿ ಇಷ್ಟ ಪ ಟ್ಟರೆ, ಹಾಲೂ ಜೇನೂ ಹರಿಯುವಂಥ ದೇಶಕ್ಕೆ ನಮ್ಮನ್ನು ಬರ ಮಾಡುವನು. ನೀವಾದರೆ ಯೆಹೋವನಿಗೆ ವಿರೋಧವಾಗಿ ತಿರಿಗಿ ಬೀಳ ಬೇಡಿರಿ; ಮತ್ತು ಆ ದೇಶದ ಜನರಿಗೆ ಭಯ ಪಡ ಬೇಡಿರಿ. ಅವರ ಆಶ್ರಯವು ಅವರ ಬಳಿಯಿಂದ ಹೋಯಿತು. ಆದರೆ ನಮ್ಮ ಸಂಗಡ ಯೆಹೋವನು ಇದ್ದಾನೆ. ಭಯ ಪಡ ಬೇಡಿರಿ! ಆಗ ಸಭೆ ಯವರೆಲ್ಲರೂ ಅವರನ್ನು ಕಲ್ಲೆಸೆಯ ಬೇಕೆಂದರು.

೨) ಆಗ ಯೆಹೋವನ ಮಹಿಮೆ ಸಭೆಯ ಗುಡಾರದಲ್ಲಿ ಇ ಸ್ರಯೇಲ್ ಮಕ್ಕಳಿಗೆಲ್ಲಾ ಪ್ರತ್ಯಕ್ಷವಾಯಿತು. ಮತ್ತು ಯೆಹೋ ವನು ಮೋಶೆಗೆ: ಈ ಜನರು ಎಷ್ಟು ಮಟ್ಟಿಗೂ ನನ್ನನ್ನು ಅಲಕ್ಷ್ಯ ಮಾಡುವರು? ನಾನು ಅವರ ಮಧ್ಯದಲ್ಲಿ ಮಾಡಿದ ಸಕಲ ಗುರು ತುಗಳ ದೆಸೆಯಿಂದ ನನ್ನಲ್ಲಿ ಎಷು ಮಟ್ಟಿಗೂ ನಂಬದೆ ಇರುವರು?

ನಾನು ಅವರನ್ನು ವ್ಯಾಧಿಯಿಂದ ಹೊಡೆದು, ನಿರ್ಮೂಲ ಮಾಡು ವೆನು; ಮತ್ತು ನಿನ್ನನ್ನು ಇವರಿಗಿಂತ ದೊಡ್ಡದಾದ ಬಲವುಳ್ಳ ಜನಾಂಗವಾಗ ಮಾಡುವೆನು, ಅಂದನು. ಆಗ ಮೋಶೆ ಪ್ರತ್ಯುತ್ತರವಾಗಿ: ನೀನು ಈ ಜನರನ್ನು ಕೊಂದು ಹಾಕಿದರೆ, ನಿನ್ನ ಸುದ್ದಿಯನ್ನು ಕೇಳಿದ ಜನಾಂಗಗಳು ಹೇಳುವದೇನಂದರೆ:—ಯೆಹೋವನು ಈ ಜನರನ್ನು ಅವರಿಗೆ ಪ್ರಮಾಣ ಮಾಡಿದ ದೇಶಕ್ಕೆ ತರಲಾರದ ಕಾರಣ, ಅವರನ್ನು ಅರಣ್ಯದಲ್ಲಿ ಕೊಂದು ಹಾಕಿದನು. ಆದ ಕಾರಣ ನಿನ್ನ ಕೃಪೆ ದೊಡ್ಡದಾಗಿರುವ ಪ್ರಕಾರ ಈ ಜನರ ಅಕ್ರಮವನ್ನು ದಯ ಮಾಮಾಡಿ ಮನ್ನಿಸು, ಅಂದನು. ಆಗ ಯೆಹೋವನು ಹೇಳಿದ್ದೇನಂದರೆ:—ನಿನ್ನ ಮಾತಿನ ಪ್ರಕಾರ ಮನ್ನಿಸುತ್ತೇನೆ. ಆದರೆ ನನ್ನ ಮಹಿಮೆಯನ್ನೂ ಗುರುತುಗಳನ್ನೂ ನೋಡಿದ ಸಕಲ ಮನುಷ್ಯರು ನನ್ನನ್ನು ಈಗ ಹತ್ತು ಸಾರಿ ಶೋಧಿಸಿ, ನನ್ನ ಶಬ್ದವನ್ನು ಕೇಳದೆ ಹೋದದರಿಂದ, ಅವರು ದೇಶವನ್ನು ನೋಡರು. ಆದರೆ ನನ್ನ ಸೇವಕನಾದ ಕಾಲೆಬನಲ್ಲಿ ಬೇರೆ ಆತ್ಮವಿದ್ದದರಿಂದಲೂ ಅವನು ನನ್ನನ್ನು ಪೂರ್ಣವಾಗಿ ಹಿಂಬಾಲಿಸಿದ್ದರಿಂದಲೂ, ಅವನನ್ನೂ ಯೆಹೋಶುವನನ್ನೂ ಅವರು ಪ್ರವೇಶಿಸಿದ ದೇಶಕ್ಕೆ ತರುವೆನು. ನನ್ನ ಜೀವದಾಣೆ, ನೀವು ನನ್ನ ಕಿವಿಗಳಲ್ಲಿ ಮಾತಾಡಿದ ಪ್ರಕಾರವೇ ನಾನು ಮಾಡುವೆನು. ಇಪ್ಪತ್ತು ವರುಷದವರೂ, ಅದಕ್ಕಿಂತ ಹೆಚ್ಚು ಪ್ರಾಯವುಳ್ಳವರೂ ಆಗಿರುವ ನಿಮ್ಮ ಹೆಣಗಳು ಈ ಅರಣ್ಯದಲ್ಲಿ ಬೀಳುವವು. ಆದರೆ ಸುಲಿಗೆಯಾಗುವರೆಂದು, ನೀವು ಹೇಳಿದ ನಿಮ್ಮ ಮಕ್ಕಳನ್ನು ಅಲ್ಲಿಗೆ ತರುವೆನು. ನೀವು ಅಲಕ್ಷ ಮಾಡಿದ ದೇಶವನ್ನು ಅವರು ತಿಳಿದು ಕೊಳ್ಳುವರು. ಇದಲ್ಲದೆ ನಿಮ್ಮ ಮಕ್ಕಳು ನೀವು ಪಾಳತಿ ನೋಡಿದ ನಾಲ್ವತ್ತು ದಿವಸಗಳ ಲೆಖ್ಖದ ಪ್ರಕಾರ, ಒಂದು ದಿನಕ್ಕೆ ಒಂದು ವರುಷವಾಗಿ, ನಾಲ್ವತ್ತು ವರುಷ ಪರಿಯಂತರ ಅರಣ್ಯದಲ್ಲಿ ಸಂಚರಿಸುತ್ತಾ ನಿಮ್ಮ ಅವಿಧೇಯತ್ವವನ್ನು ತಾಳುವರು. ಮತ್ತು ದೇಶದ ಮೇಲೆ ಕೆಟ್ಟ ಸುದ್ದಿಯನ್ನು ಎಬ್ಬಿಸಿ, ಸಮಸ್ತ ಸಭೆಯನ್ನು ಗುಣುಗುಟ್ಟಿಸಿದ

ಆ ಹೊಂಚುಗಾರರು ಯೆಹೋವನ ಸನ್ನಿಧಿಯಲ್ಲಿ ವ್ಯಾಧಿಯಿಂದ ಸತ್ತರು. ಆದರೆ ಯೆಹೋಶುವನೂ ಕಾಲೆಬನೂ ಬದುಕಿದರು. ಮತ್ತು ಮೋಶೆ ಈ ಮಾತುಗಳನ್ನು ಇಸ್ರಯೇಲ್ ಮಕ್ಕಳೆಲ್ಲರಿಗೆ ಹೇಳಿದನು. ಆಗಲವರು ಬಹಳವಾಗಿ ದುಃಖ ಪಟ್ಟು, ಬೆಳಿಗ್ಯೆ ಎದ್ದು: ಇಗೋ, ಯೆಹೋವನು ಹೇಳಿದ ಸ್ಥಳಕ್ಕೆ ಏರಿ ಹೋಗಲಿಕ್ಕೆ ಸಿದ್ಧವಾಗಿದ್ದೇವೆ; ಯಾಕಂದರೆ ನಾವು ಪಾಪ ಮಾಡಿದ್ದೇವೆ, ಅಂದರು. ಆಗ ಮೋಶೆ ಹೇಳಿದ್ದು: ನೀವು ಯಾಕೆ ಯೆಹೋವನ ಆಜ್ಞೆಯನ್ನು ಮೀರುತ್ತೀರಿ? ಅದು ಅನುಕೂಲವಾಗುವದಿಲ್ಲ. ಏರಿ ಹೋಗ ಬೇಡಿರಿ; ಯಾಕಂದರೆ ಯೆಹೋವನು ನಿಮ್ಮ ಸಂಗಡ ಇರುವದಿಲ್ಲ. ಆದರೆ ಅವರು ಗರ್ವಿಷ್ಟರಾಗಿ ಏರಿ ಹೋದರು. ಆಗ ಅಮಲೇಕ್ಯರೂ ಕಾನಾನ್ಯರೂ ಇಳಿದು, ಅವರನ್ನು ಹೊಡೆದು, ಹೊರ್ಮದ ಪರಿಯಂತರಕ್ಕೂ ಅವರನ್ನು ಸಂಹರಿಸಿದರು. ಬಾ. 79.

---

## ೨೮. ಇಸ್ರಯೇಲ್ಯರು ಗುಣುಗುಟ್ಟಿದ್ದು.

(ಅಂಕೆಗಳು. ೧೬. ೧೭. ೨೦. ೨೧.)

೧) ಲೇವಿಯ ಸಂತಾನದವನಾದ ಕೋರಹನು ಮತ್ತು ರೂಬೇನ್ ಸಂತಾನದವರಾದ ದಾಥಾನನೂ ಅಬೀರಮನೂ ಇವರ ಸಂಗಡ ಸಭೆಯ ಘನ ಉಳ್ಳವರಾಗಿರುವ ಇನ್ನೂರ ಇಪ್ಪತ್ತು ಮಂದಿಯೂ ಮೋಶೆಗೂ ಆರೋನನಿಗೂ ವಿರೋಧವಾಗಿ ಕೂಡಿ ಕೊಂಡು, ಅವರಿಗೆ: ನೀವು ಹೆಚ್ಚು ಅಧಿಕಾರ ತಕ್ಕೊಳ್ಳುತ್ತೀರಿ; ಯಾಕಂದರೆ ಸಭೆಯವರೆಲ್ಲಾ ಪರಿಶುದ್ಧರು; ಯೆಹೋವನು ಅವರ ಮಧ್ಯದಲ್ಲಿ ಇದ್ದಾನೆ. ಹೀಗಿದ್ದರೆ, ನೀವು ಯೆಹೋವನ ಸಭೆಯ ಮೇಲೆ ನಿಮ್ಮನ್ನು ಹೆಚ್ಚಿಸಿ ಕೊಳ್ಳುವದು ಯಾಕೆ? ಎಂದು ಹೇಳಿದರು. ಮೋಶೆ ಅವರಿಗೆ: ಯಾಜಕನಾಗಲಿಕ್ಕೆ ತಕ್ಕವನಾದ ತನಗೆ ಸ್ವಕೀಯನೂ ಪರಿಶುದ್ಧನೂ ಯಾರೆಂದು ಯೆಹೋವನು ನಾಳೆ ತಿಳಿಸುವನು. ಲೇವಿಯ

ಮಕ್ಕಳೇ, ನೀವು ಅವನಿಗೆ ವಿರೋಧವಾಗಿ ಗುಣುಗುಟ್ಟುವ ಹಾಗೆ ಆರೋನನು ಯಾರು? ಅಂದನು. ಮತ್ತು ಮೋಶೆ ಕೋರಹನಿಗೆ ಹೇಳಿದ್ದು: ನೀನೂ ನಿನ್ನ ಸಮೂಹವೆಲ್ಲವೂ ಮತ್ತು ಆರೋನನು ಸಹ ನಾಳೆ ಬಂದು, ಒಬ್ಬೊಬ್ಬನು ತನ್ನ ಧೂಪಾರ್ತಿಯನ್ನು ತಕ್ಕೊಂಡು, ಅದರ ಮೇಲೆ ಧೂಪವನ್ನು ಹಾಕಿ, ಯೆಹೋವನ ಸಮುಖದಲ್ಲಿ ಇರ ಬೇಕು. ಅವರು ಹೀಗೆ ಮಾಡಿದರು. ಆಗ ಯೆಹೋವನ ಮಹಿಮೆಯು ಸಮಸ್ತ ಸಭೆಗೆ ಕಾಣ ಬಂತು. ಮತ್ತು ಯೆಹೋವನು ಮೋಶೆಗೂ ಆರೋನನಿಗೂ: ನೀವು ಈ ಸಭೆಯ ಮಧ್ಯದೊಳಗಿಂದ ಪ್ರತ್ಯೇಕವಾಗಿರಿ; ನಾನು ಅವರನ್ನು ಕ್ಷಣದಲ್ಲಿ ತೀರಿಸಿ ಬಿಡುತ್ತೇನೆ, ಅಂದನು. ಆಗಲವರು: ಸರ್ವ ಆತ್ಮಗಳ ದೇವರಾದ ದೇವರೇ, ಒಬ್ಬ ಮನುಷ್ಯನು ಪಾಪ ಮಾಡುವಾಗ, ನೀನು ಸಮಸ್ತ ಸಭೆಯ ಮೇಲೆ ಕೋಪಿಸುತ್ತೀಯೋ? ಎಂದು ಬೇಡಿ ಕೊಂಡರು. ಆಗ ಯೆಹೋವನು ಮೋಶೆಯ ಸಂಗಡ ಮಾತಾಡಿ, ಹೇಳಿದ್ದು: ನೀನು ಸಭೆಯ ಸಂಗಡ, ಕೋರಹನ, ದಾಥಾನನ, ಅಬೀರಮನ ನಿವಾಸದ ಸುತ್ತಲಿಂದ ತೊಲಗಿ ಹೋಗಿರಿ ಎಂದು ಹೇಳು. ಮೋಶೆ ಹೀಗೆ ಮಾಡಿದನು. ಆಗಲಾದದ್ದೇನಂದರೆ:—ಅವರ ಕೆಳಗಿರುವ ನೆಲವು ಶೀಳಿ, ಭೂಮಿ ತನ್ನ ಬಾಯಿಯನ್ನು ತೆರದು, ಅವ



ರನ್ನೂ ಅವರ ಮನೆಗಳನ್ನೂ ಅವರ ಕಡೆಯವರೆಲ್ಲರನ್ನೂ ಅವರ ಸಮಸ್ತ ಸ್ಥಿತಿಯನ್ನೂ ನುಂಗಿ ಬಿಟ್ಟಿತು. ಹೀಗೆ ಅವರೆಲ್ಲರು ಜೀವಿತರಾಗಿ ಪಾತಾಳಕ್ಕೆ ಇಳಿದರು. ಇದಲ್ಲದೆ ಯೆಹೋವನಿಂದ ಬೆಂಕಿಯು ಹೊರಟು, ಧೂಪವನ್ನು ಅರ್ಪಿಸಿದ ಆ ಇನ್ನೂರ ಐವತ್ತು ಮಂದಿಯನ್ನು ದಹಿಸಿ ಬಿಟ್ಟಿತು. ಮರು ದಿವಸದಲ್ಲಿ ಸಭೆ ಎಲ್ಲಾ ಮೋಶೆಯ ಮೇಲೆಯೂ ಆರೋನನ ಮೇಲೆಯೂ ಗುಣುಗುಟ್ಟಿ: ನೀವು ಯೆಹೋವನ ಜನರನ್ನು ಕೊಂದು ಹಾಕಿದ್ಧೀರಿ, ಅಂದರು. ಆಗ ಯೆಹೋವನು ಮೋಶೆಗೆ: ನೀವು ಈ ಸಭೆಯ ಮಧ್ಯದಲ್ಲಿಂದ ಎದ್ದು ಬನ್ನಿರಿ; ನಾನು ಅವರನ್ನು ತೀರಿಸುತ್ತೇನೆ, ಅಂದನು. ಆಗಲವರು ಅಡ್ಡ ಬಿದ್ದರು. ಮತ್ತು ಮೋಶೆ ಆರೋನನಿಗೆ: ಧೂಪಾರ್ತಿಯನ್ನು ತಕ್ಕೊಂಡು, ಬಲಿಪೀಠದಿಂದ ಅದರ ಮೇಲೆ ಬೆಂಕಿಯನ್ನು ಇಟ್ಟು, ಧೂಪವನ್ನು ಹಾಕಿ, ತ್ವರೆಯಾಗಿ ಸಭೆಯೊಳಗೆ ಹೋಗಿ, ಅವರಿಗೋಸ್ಕರ ಪಾಪ ಮುಚ್ಚು; ಯಾಕಂದರೆ ಯೆಹೋವನ ಸಮುಖದಿಂದ ಕೋಪವು ಹೊರಟಿತು, ವ್ಯಾಧಿ ಆರಂಭವಾಯಿತು, ಅಂದನು. ಆರೋನನು ಹಾಗೆ ಮಾಡಿದನು; ಆಗ ವ್ಯಾಧಿಯು ನಿಂತು ಹೋಯಿತು. ಆದರೆ ಅದರಲ್ಲಿ ಸತ್ತವರು ಹದಿನಾಲ್ಕು ಸಾವಿರದ ಏಳುನೂರು ಮಂದಿಯಾಗಿದ್ದರು.

೨) (ನಾಲ್ವತ್ತನೇ ವರುಷದ) ಮೊದಲನೇ ತಿಂಗಳಲ್ಲಿ ಚೀನೆಂಬ ಅರಣ್ಯಕ್ಕೆ ಬಂದರು. ಕಾದೆಷಿನಲ್ಲಿ ವಾಸಿಸುವಾಗ, ಸಭೆಗೆ ನೀರು ಇರಲಿಲ್ಲ. ಅದು ಕಾರಣ ಇಸ್ರಯೇಲ್ಯರು ಮೋಶೆಗೂ ಆರೋನನಿಗೂ ವಿರೋಧವಾಗಿ ಕೂಡಿ ಕೊಂಡು, ಹೇಳಿದ್ದೇನಂದರೆ:—ಅಯ್ಯೋ, ನಮ್ಮ ಸಹೋದರರು ಸತ್ತು ಹೋದಾಗಲೇ ನಾವು ಸಹ ಸತ್ತು ಹೋಗಿದ್ದರೆ ಚನ್ನಾಗಿತ್ತು. ಈ ಸ್ಥಳದಲ್ಲಿ ಬೀಜವಾದರೂ ಬೇರೆ ಯಾವ ಫಲವಾದರೂ ಇಲ್ಲ; ನೀರು ಸಹ ಇಲ್ಲ. ಆಗ ಮೋಶೆಯೂ ಆರೋನನೂ ಸಾಕ್ಷಿಯ ಗುಡಾರದ ಬಾಗಲಿನೊಳಗೆ ಹೋಗಿ, ಅಡ್ಡ ಬಿದ್ದರು. ಮತ್ತು ಯೆಹೋವನ ಮಹಿಮೆಯು ಅವರಿಗೆ

ಕಾಣ ಬಂತು. ಯೆಹೋವನು ಮೋಶೆಗೆ: ಕೋಲನ್ನು ತಕ್ಕೊಂಡು, ನೀನೂ ಆರೋನನೂ ಸಭೆಯನ್ನು ಕೂಡಿಸಿ ಕೊಂಡು, ಅವರ ಮುಂದೆ ಬಂಡೆಯ ಸಂಗಡ ಮಾತಾಡಿರಿ, ಆಗ ಅದು ತನ್ನ ನೀರನ್ನು ಕೊಡುವದು, ಅಂದನು. ಆಗ ಮೋಶೆಯೂ ಆರೋನನೂ ಸಭೆಯನ್ನು ಬಂಡೆಯ ಮುಂದೆ ಕೂಡಿಸಿ, ಅವರಿಗೆ: ತಿರುಗಿ ಬಿದ್ದವರೇ, ಕೇಳಿರಿ; ನಾವು ನಿಮಗೋಸ್ಕರ ಈ ಬಂಡೆಯೊಳಗಿಂದ ನೀರನ್ನು ಹೊರಡಿಸೇವೋ? ಅಂದರು. ಮತ್ತು ಮೋಶೆ ತನ್ನ ಕೋಲಿನಿಂದ ಬಂಡೆಯನ್ನು ಎರಡು ಸಾರಿ ಬಡಿದನು. ಆಗ ಬಹಳ ನೀರು ಹೊರಗೆ ಬಂತು. ಸಭೆಯೂ ಅವರ ದನಗಳೂ ಕುಡಿದವು. ಆಗ ಯೆಹೋವನು ಮೋಶೆಯ ಸಂಗಡಲೂ ಆರೋನನ ಸಂಗಡಲೂ ಮಾತಾಡಿ, ಹೇಳಿದ್ದೇನಂದರೆ:—ನೀವು, ಇಸ್ರಯೇಲ್ ಮಕ್ಕಳ ಮುಂದೆ ನನ್ನನ್ನು ಪರಿಶುದ್ಧ ಮಾಡಲಿಕ್ಕೆ, ನನ್ನಲ್ಲಿ ವಿಶ್ವಾಸಿಸದೆ ಇದ್ದ ಕಾರಣ, ನೀವು ಸಭೆಯನ್ನು ನಾನು ಅವರಿಗೆ ಕೊಟ್ಟ ದೇಶದಲ್ಲಿ ಶೇರಿಸುವದಿಲ್ಲ. ಇಸ್ರಯೇಲ್ ಮಕ್ಕಳು ಯೆಹೋವನ ಸಂಗಡ ವ್ಯಾಜ್ಯವಾಡಿ, ಅವನು ಅವರಲ್ಲಿ ತನ್ನನ್ನು ಪರಿಶುದ್ಧ ಮಾಡಿ ಕೊಂಡದರಿಂದ, ಆ ಸ್ಥಳಕ್ಕೆ ಮೆರೀಬ (ಅಂದರೆ ವ್ಯಾಜ್ಯ) ಎಂಬ ಹೆಸರಾಯಿತು.

ಮತ್ತು ಇಸ್ರಯೇಲ್ ಮಕ್ಕಳ ಸಮಸ್ತ ಸಭೆಯು ಕಾದೆಷಿನಿಂದ ಹೊರಟು, ಹೋರ್ ಎಂಬ ಬೆಟ್ಟದ ಬಳಿಗೆ ಬಂದರು. ಆಗ ಯೆಹೋವನು ಮೋಶೆಗೆ: ಆರೋನನು ತನ್ನ ಜನರ ಸಂಗಡ ಕೂಡಿಸಲ್ಪಡುವವನಾಗಲಿ; ನೀನು ಅವನನ್ನೂ ಅವನ ಮಗನಾದ ಎಲಿಯೇಜರನನ್ನೂ ಹೋರ್ ಬೆಟ್ಟಕ್ಕೆ ಕರ ಕೊಂಡು ಬಾ; ಮತ್ತು ಆರೋನನ ವಸ್ತ್ರಗಳನ್ನು ತೆಗೆದು, ಅವುಗಳನ್ನು ಅವನ ಮಗನಾದ ಎಲಿಯೇಜರನಿಗೆ ತೊಡಿಸು; ಆದರೆ ಆರೋನನು ಅಲ್ಲಿ ಸಾಯ ಬೇಕು, ಅಂದನು. ಮತ್ತು ಮೋಶೆ ಯೆಹೋವನು ಆಜ್ಞಾಪಿಸಿದ ಪ್ರಕಾರ ಮಾಡಿದನು. ಹೀಗೆ ಆರೋನನು ಬೆಟ್ಟದ ಮೇಲೆ ತೀರಿ ಹೋದನು. ಸಭೆಯೆಲ್ಲಾ ಇದನ್ನು ನೋಡಿದಾಗ, ಆರೋನನಿಗೋಸ್ಕರ ಮೂವತ್ತು ದಿವಸ ಅತ್ತರು.

೩) ಮತ್ತು ಅವರು ಹೋರ್ ಎಂಬ ಬೆಟ್ಟದಿಂದ ಹೊರಟು, ಎದೋಮ್ ದೇಶವನ್ನು ಸುತ್ತಿ ಕೊಂಡು ಹೋಗುವದಕ್ಕೆ ಕೆಂಪು ಸಮುದ್ರದ ಮಾರ್ಗವಾಗಿ ನಡದರು; ಆದರೆ ಜನರ ಪ್ರಾಣವು ಮಾರ್ಗದಿಂದ ಕುಂದಿ ಹೋಯಿತು. ಆದ ಕಾರಣ ಅವರು ದೇವರಿಗೂ ಮೋಶೆಗೂ ವಿರೋಧವಾಗಿ ಮಾತಾಡಿ, ಹೇಳಿದ್ದೇನಂದರೆ:—ನಾವು ಅರಣ್ಯದಲ್ಲಿ ಸಾಯುವ ಹಾಗೆ ನಮ್ಮನ್ನು ಐಗುಪ್ತದಿಂದ ಯಾಕೆ ಮೇಲೆ ಬರ ಮಾಡಿದ್ಧೀರಿ? ಯಾಕಂದರೆ ಇಲ್ಲಿ ರೊಟ್ಟಿ ಇಲ್ಲ, ನೀರು ಇಲ್ಲ; ನಮ್ಮ ಪ್ರಾಣವು ಈ ನಿಸ್ಸಾರವಾದ ಮನ್ನದಲ್ಲಿ ಅಸಹ್ಯ ಪಡುತ್ತದೆ. ಆಗ ಯೆಹೋವನು ಜನರೊಳಗೆ ಉರಿ ಸರ್ಪಗಳನ್ನು ಕಳುಹಿಸಿದನು; ಅವು ಜನರನ್ನು ಕಚ್ಚಿದ್ದರಿಂದ ಬಹು ಜನರು ಸತ್ತು ಹೋದರು. ಆದದರಿಂದ ಜನರು ಮೋಶೆಯ ಬಳಿಗೆ ಬಂದು: ನಾವು ಯೆಹೋವನಿಗೂ ನಿನಗೂ ವಿರೋಧವಾಗಿ ಪಾಪ ಮಾಡಿದ್ಧೇವೆ. ಅವನು ನಮ್ಮಿಂದ ಈ ಸರ್ಪಗಳನ್ನು ದೂರ ಮಾಡುವ ಹಾಗೆ ಅವನಿಗೆ ಪ್ರಾರ್ಥನೆ ಮಾಡು, ಅಂದರು. ಮೋಶೆ ಪ್ರಾರ್ಥನೆ ಮಾಡಿದನು. ಆಗ ಯೆಹೋವನು ಮೋಶೆಗೆ: ಒಂದು ಉರಿ ಸರ್ಪವನ್ನು ಮಾಡಿಸಿ ಕೊಂಡು, ಒಂದು ಗಣೆಯ ಮೇಲೆ ಇಡು; ಆಗ ಸರ್ಪವು ಕಚ್ಚಿದವರೆಲ್ಲರು ಅದರ ಮೇಲೆ ದೃಷ್ಟಿ ಇಟ್ಟರೆ ಬದುಕುವರು, ಅಂದನು. ಆಗ ಮೋಶೆ ಹಿತ್ತಾಳಿಯ ಸರ್ಪವನ್ನು ಮಾಡಿ, ಗಣೆಯ ಮೇಲೆ



ಇಟ್ಟನು; ಮತ್ತು ಸರ್ಪವು ಒಬ್ಬನನ್ನು ಕಚ್ಚಿದ ಮೇಲೆ, ಅವನು ಹಿತ್ತಾಳಿಯ ಸರ್ಪದ ಕಡೆಗೆ ನೋಡಲು ಬದುಕಿದನು. (ಯೋಹಾನನ ಸುವಾರ್ತೆ. ೩, ೧೪.)

I. 52. ಬಾ. 144. ಯೋಹಾ. 3, 14. 15.

---

## ೨೮. ಬಿಳಾಮನು.

(ಅಂಕೆಗಳು. ೨೧ – ೨೪.)

ಆ ಮೇಲೆ ಇಸ್ರಯೇಲ್ಯರು ಮುಂದೆ ಹೋಗಿ, ತಮಗೆ ವಿರೋಧವಾಗಿ ಯುದ್ಧ ಮಾಡಿದ ಅಮೋರಿಯರ ಅರಸನಾದ ಸಿಹೋನನನ್ನೂ ಬಾಷಾನಿನ ಅರಸನಾದ ಓಗನನ್ನೂ ಜಯಿಸಿ, ಅವರ ದೇಶಗಳನ್ನು ವಶ ಮಾಡಿ ಕೊಂಡರು. ಮತ್ತು ಇಸ್ರಯೇಲ್ ಮಕ್ಕಳು ಯೊರ್ದನಿನ ಈಚೆ (ಅಂದರೆ ಮೂಡಣ ಕಡೆ) ಯಲ್ಲಿರುವ ಮೋವಾಬಿನ ಬೈಲುಗಳಲ್ಲಿ ಎರಿಕೋ ಪಟ್ಣಕ್ಕೆ ಎದುರಾಗಿ ಇಳುಕೊಂಡರು. ಆಗ ಮೋವಾಬ್ಯರ ಅರಸನಾದ ಬಾಲಾಕನು (ಫ್ರಾತು ಎಂಬ) ನದಿಯ ತೀರದಲ್ಲಿರುವ ಬಿಳಾಮನನ್ನು ಕರೆಸಿ, ಅವನಿಗೆ ಹೇಳಿದ್ದೇನಂದರೆ:—ಇಗೋ, ಒಂದು ಜನ ಐಗುಪ್ತದಿಂದ ಹೊರಟಿತು. ಅದು ದೇಶದ ಮೇಲ್ಭಾಗವನ್ನು ಮುಚ್ಚಿ, ನನಗೆದುರಾಗಿ ವಾಸಿಸುತ್ತದೆ. ಈಗ ನೀನು ದಯ ಮಾಡಿ ಬಂದು, ಈ ಜನವನ್ನು ನನಗೆ ಶಪಿಸು; ಯಾಕಂದರೆ ಅದು ನನಗಿಂತ ಬಲವುಳ್ಳದ್ದಾಗಿದೆ; ಒಂದು ವೇಳೆ ನಾನು ಗೆದ್ದೇನು. ಆದರೆ ದೇವರು ಬಿಳಾಮನಿಗೆ: ನೀನು ಆ ಜನವನ್ನು ಶಪಿಸ ಬೇಡ; ಯಾಕಂದರೆ ಅದು ಆಶೀರ್ವದಿಸಲ್ಪಟ್ಟದೆ, ಅಂದನು. ಹೀಗೆ ಬಿಳಾಮನು ಬಾಲಾಕನ ಬಳಿಗೆ ಬರಲಿಲ್ಲ. ಆಗ ಬಾಲಾಕನು ತಿರಿಗಿ ಘನವುಳ್ಳ ಪ್ರಭುಗಳನ್ನು ಕಳುಹಿಸಿದನು. ಅವರಿಗೆ ಬಿಳಾಮನು: ಬಾಲಾಕನು ನನಗೆ ತನ್ನ ಮನೆ ತುಂಬ ಬೆಳ್ಳಿಯನ್ನೂ ಭಂಗಾರವನ್ನೂ ಕೊಟ್ಟರೂ, ನಾನು ಯೆಹೋವನ ಆಜ್ಞೆಯ

ನ್ನು ಮೀರ ಕೂಡದು. ಆದರೆ ಈಗ ಯೆಹೋವನು ನನಗೆ ಮತ್ತೇನು ಹೇಳುವನೆಂದು ನಾನು ತಿಳು ಕೊಳ್ಳುವ ಹಾಗೆ, ಈ ರಾತ್ರಿಯಲ್ಲಿ ಇಳು ಕೊಳ್ಳಿರಿ, ಅಂದನು. ಆಗ ದೇವರು ರಾತ್ರಿಯಲ್ಲಿ ಬಿಳಾಮನ ಬಳಿಗೆ ಬಂದು, ಅವನಿಗೆ ಹೇಳಿದ್ದೇನಂದರೆ: ನೀನು ಎದ್ದು, ಅವರ ಸಂಗಡ ಹೋಗು; ಆದರೆ ನಾನು ನಿನಗೆ ಹೇಳುವ ಮಾತೇ ನೀನು ಮಾಡ ಬೇಕು. ಬೆಳಿಗ್ಗೆ ಬಿಳಾಮನು ಎದ್ದು, ತನ್ನ ಕತ್ತೆಯನ್ನು ಕಟ್ಟಿ, ಮೋವಾಬಿನ ಪ್ರಭುಗಳ ಸಂಗಡ ಹೋದನು. ಆದರೆ ಅವನು ಹೋದದರಿಂದ ದೇವರ ಕೋಪವು ಉರಿಯಿತು. (ಯಾಕಂದರೆ ಅವನು ಅನ್ಯಾಯದ ಸಂಬಳವನ್ನು ಪ್ರೀತಿ ಮಾಡಿದನು. ೨ ಪೇತ್ರ. ೨, ೧೫.) ಮತ್ತು ಯೆಹೋವನ ದೂತನು ಅವನಿಗೆ ಎದುರಾಳಿಯಾಗಿ ಮಾರ್ಗದಲ್ಲಿ ನಿಂತು ಕೊಂಡನು. ಬಿಳಾಮನು ತನ್ನ ಕತ್ತೆಯ ಮೇಲೆ ಹತ್ತಿ ಕೊಂಡಿದ್ದನು. ಮತ್ತು ಕತ್ತೆಯು ಮಾರ್ಗದಲ್ಲಿ ನಿಂತಿದ್ದ ದೂತನನ್ನೂ ಅವನ ಕೈಯಲ್ಲಿರುವ ಬಿಚ್ಚುಗತ್ತಿಯನ್ನೂ ನೋಡಿ, ಮಾರ್ಗದಿಂದ ವಾರೆಯಾಗಿ ಹೊಲದೊಳಗೆ ಹೋಯಿತು. ಆಗ ಬಿಳಾಮನು ಕತ್ತೆಯನ್ನು ಹೊಡೆದನು. ಆದರೆ ಯೆಹೋವನ ದೂತನು ದ್ರಾಕ್ಷೇ ತೋಟಗಳ ಹಾದಿಯಲ್ಲಿ ಈಚೆ ಆಚೆ ಗೋಡೆ ಇದ್ದಲ್ಲಿ ನಿಂತನು. ಮತ್ತು ಕತ್ತೆ ಯೆಹೋವನ ದೂತನನ್ನು ನೋಡಿ, ಗೋಡೆಗೆ ಒತ್ತಿ ಕೊಂಡು, ಬಿಳಾಮನ ಕಾಲನ್ನು ಗೋಡೆಗೆ ಒತ್ತಿ ಹಾಕಿತು. ಅವನು ಅದನ್ನು ಹೆಚ್ಚಾಗಿ ಹೊಡೆದನು. ಆ ಮೇಲೆ ದೂತನು ಬಲಕ್ಕೂ ಎಡಕ್ಕೂ ತಿರುಗಲಿಕ್ಕೆ ಮಾರ್ಗವಿಲ್ಲದ ಇಕ್ಕಟ್ಟಿನ ಸ್ಥಳದಲ್ಲಿ ನಿಂತನು. ಕತ್ತೆಯು ಅವನನ್ನು ನೋಡಿ, ಬಿಳಾಮನ ಕೆಳಗೆ ಬಿತ್ತು. ಆದ ಕಾರಣ ಬಿಳಾಮನು ಕೋಪಿಸಿ ಕೊಂಡು, ಕತ್ತೆಯನ್ನು ಬೆತ್ತದಿಂದ ಹೊಡೆದನು. ಆಗ ಯೆಹೋವನು ಕತ್ತೆಯ ಬಾಯಿಯನ್ನು ತೆರೆದನು. ಅದು ಬಿಳಾಮನಿಗೆ: ಈಗ ನನ್ನನ್ನು ಮೂರು ಸಾರಿ ಹೊಡಿಯುವ ಹಾಗೆ ನಾನು ನಿನಗೆ ಏನು ಮಾಡಿದೆನೆಂದು ಹೇಳಿತು. ಬಿಳಾಮನು ಕತ್ತೆಗೆ: ನೀನು ನನಗೆ ಹಾಸ್ಯ ಮಾಡಿದಿಯಲ್ಲ? ನನ್ನ ಕೈ

ಯಲ್ಲಿ ಕತ್ತಿ ಇದ್ದರೆ, ನಾನು ಈಗಲೇ ನಿನ್ನನ್ನು ಕೊಂದು ಹಾಕುವೆನು, ಅಂದನು. ಕತ್ತೆಯು ಬಿಳಾಮನಿಗೆ ಹೇಳಿದ್ದು: ನಾನು ನಿನ್ನದಾ



ದಂದಿನಿಂದ ಈ ದಿವಸದ ಪರಿಯಂತರ ಎಂದಾದರೂ ನಿನಗೆ ಈ ಪ್ರಕಾರ ಮಾಡಿದೆನೋ? ಅದಕ್ಕವನು: ಇಲ್ಲ, ಅಂದನು. ಆಗ ಯೆಹೋವನು ಬಿಳಾಮನ ಕಣ್ಣುಗಳನ್ನು ತೆರೆದನು; ಅವನು ದೂತನನ್ನೂ ಆತನ ಕೈಯಲ್ಲಿರುವ ಕತ್ತಿಯನ್ನೂ ನೋಡಿದನು; ಮತ್ತು ಎರಗಿ, ಅಡ್ಡ ಬಿದ್ದನು. ದೂತನು ಅವನಿಗೆ: ಇಗೋ, ನಿನ್ನ ಕತ್ತೆಯನ್ನು ಮೂರು ಸಾರಿ ಹೊಡೆದ್ದು ಯಾಕೆ? ನೀನು ಬಂದದ್ದರಲ್ಲಿ ನಾನು ಮೆಚ್ಚದ ಕಾರಣ, ನಾನು ಎದುರಾಳಿಯಾಗಿ ಬಂದೆನು. ಈ ಮನುಷ್ಯರ ಸಂಗಡ ಹೋಗು; ಹೋದರೂ ನಾನು ನಿನಗೆ ಹೇಳುವದನ್ನೇ ಹೇಳ ಬೇಕು, ಅಂದನು.

ಬಿಳಾಮನು ಬಾಲಾಕನ ಬಳಿಗೆ ಬಂದು, ಮೂರು ಬೇರೆ ಬೇರೆ ಸ್ಥಳಗಳಲ್ಲಿ ಬಲಿಯರ್ಪಣೆ ಮಾಡಿ, ಇಸ್ರಯೇಲರನ್ನು ಶಪಿಸಲಿಕ್ಕೆ ನೋಡಿದನು. ಆದರೆ ಇಸ್ರಯೇಲರನ್ನು ಆಶೀರ್ವದಿಸುವದಕ್ಕೆ ಯೆಹೋವನ ದೃಷ್ಟಿಗೆ ಒಳ್ಳೇದೆಂದು ಕಂಡಾಗ, ಅವನು ಮುಂಚಿನ ಹಾಗೆ ಶಕುನಗಳನ್ನು ನೋಡಿ ಕೊಳ್ಳುವದಕ್ಕೆ ಹೋಗದೆ, ದೇವರ ಆತ್ಮವು ಅವನ ಮೇಲೆ ಬಂದು, ಅವನನ್ನು ಪ್ರೇರೇಪಿಸಿದ ಹಾಗೆಯೇ ಹೇಳಿದ್ದೇನಂದರೆ:—ದೇವರು ಶಪಿಸದವನನ್ನು ನಾನು ಹ್ಯಾಗೆ ಶಪಿಸಲಿ? ಯೆ

ಹೋವನು ಆಕ್ರೋಧಿಸದವನನ್ನು ನಾನು ಹ್ಯಾಗೆ ಆಕ್ರೋಧಿಸಲಿ (ಅಂದರೆ ಅವನ ಮೇಲೆ ಕ್ರೋಧ ಮಾಡಲಿ)? ಇಗೋ, ಆಶೀರ್ವದಿಸಲಿಕ್ಕೆ ಅಪ್ಪಣೆ ಹೊಂದಿದ್ದೇನೆ; ದೇವರು ಆಶೀರ್ವದಿಸುತ್ತಿದ್ದಾನೆ; ನಾನು ಅದನ್ನು ಬದಲು ಮಾಡಲಾರೆನು. ಇಸ್ರಯೇಲನೇ, ನಿನ್ನನ್ನು ಆಶೀರ್ವದಿಸುವವರಿಗೆ ಆಶೀರ್ವಾದ, ನಿನ್ನನ್ನು ಶಪಿಸುವವರಿಗೆ ಶಾಪ ಉಂಟು. ಯಾಕೋಬನಿಂದ ನಕ್ಷತ್ರ ಉದಯಿಸುವದು. ಇಸ್ರಯೇಲಿನಿಂದ ಮುದ್ರೆ ಕೋಲು ಏಳುವದು; ಅದು ಮೋವಾಬಿನ ಕೊನೆಗಳನ್ನು ಮುರಿದು, ಸೇಥನ ಸಕಲ ಮಕ್ಕಳನ್ನು (ಅಂದರೆ ಉಬ್ಬಿಕೊಳ್ಳುವವರನ್ನು) ಸಂಹರಿಸುವದು. ಯಾಕೋಬನೊಳಗಿಂದ ಒಬ್ಬನು ಬಂದು, ಆಳುವನು; ಅವನು ಪಟ್ಟಣದಲ್ಲಿ ಉಳಿದದ್ದನ್ನು ನಾಶನ ಮಾಡುವನು. ಹೀಗೆ ಬಿಳಾಮನು ಇಸ್ರಯೇಲನ್ನು ನಾಲ್ಕು ಸಾರಿ ಆಶೀರ್ವದಿಸಿದನು. ಆಗ ಬಾಲಾಕನು ಬಿಳಾಮನ ಮೇಲೆ ಕೋಪಗೊಂಡು, ಅವನಿಗೆ: ನನ್ನ ಶತ್ರುಗಳನ್ನು ಶಪಿಸುವದಕ್ಕೆ ನಿನ್ನನ್ನು ಕರೆದೆನು; ಆದರೆ ಇಗೋ, ನೀನು ಅವರನ್ನು ಆಶೀರ್ವದಿಸೇ ಆಶೀರ್ವದಿಸಿದಿ. ನಿನ್ನನ್ನು ಬಹು ಘನ ಪಡಿಸುವೆನೆಂದು ಹೇಳಿ ಕೊಂಡೆನು; ಆದರೆ, ಇಗೋ, ಯೆಹೋವನು ನಿನಗೆ ಘನವನ್ನು ತಡೆದಿದ್ದಾನೆ. ಆಗ ಬಿಳಾಮನು ಎದ್ದು, ತನ್ನ ಸ್ಥಳಕ್ಕೆ ತಿರಿಗಿ ಹೋದನು; ಬಾಲಾಕನು ಸಹ ತನ್ನ ಮಾರ್ಗವಾಗಿ ಹೋದನು.

II. 49. III. 25.

---

## ೩೦. ಮೋಶೆಯ ಮರಣವು.

(ಅಂಕೆಗಳು. ೨೭. ೨೨. ದ್ವಿತೀಯ. ೩. ೬. ೭. ೮. ೧೮. ೩೦. ೩೪.)

(ಸೃಷ್ಟಿಯಾದ ಮೇಲೆ ೨೫೫೩, ಕ್ರಿಸ್ತನ ಜನ್ಮದ ಮುಂಚೆ ೧೪೪೭.)

೧) ಮೋಶೆಯೂ ಯಾಜಕನಾದ ಎಲಿಯೇಜರನೂ ಮೋವಾಬಿನ ಬೈಲಿನಲ್ಲಿ ಇಸ್ರಯೇಲ್ ಮಕ್ಕಳನ್ನು ಎಣಿಸಿದಾಗ, ಇಪ್ಪತ್ತು

ವರುಷದವರೂ ಅದಕ್ಕಿಂತ ಹೆಚ್ಚು ಪ್ರಾಯ ಉಳ್ಳವರೂ ಯುದ್ಧಕ್ಕೆ ಹೊರಡುವವರೆಲ್ಲರ ಲೆಖ್ಖ ಆರು ಲಕ್ಷ ಒಂದು ಸಾವಿರದ ಏಳುನೂರ ಮೂವತ್ತು ಮಂದಿ ಇದ್ದರು. ಮತ್ತು ಲೇವಿಯರ ಗಂಡಸರೆಲ್ಲರೂ ಇಪ್ಪತ್ತು ಮೂರು ಸಾವಿರ ಮಂದಿಯಾಗಿದ್ದರು. ಆದರೆ ಇವರ ಲೆಖ್ಖದಲ್ಲಿ ಕಾಲೆಬನೂ ಯೆಹೋಶುವನೂ ಹೊರ್ತಾಗಿ ಮೋಶೆ ಸೀನಾಯಿ ಅರಣ್ಯದಲ್ಲಿ ಎಣಿಸಿದವರಲ್ಲಿ ಒಬ್ಬನಾದರೂ ಶೇರಲಿಲ್ಲ; ಯಾಕಂದರೆ ಯೆಹೋವನು ಹೇಳಿದ ಹಾಗೆ ಅವರು ಅರಣ್ಯದಲ್ಲಿ ಸತ್ತು ಹೋಗಿದ್ದರು. ಮತ್ತು ಯೆಹೋವನು ಮೋಶೆಗೆ: ನೀನು ಪಿಸ್ಗದ (ನೆಬೋ) ತುದಿಗೆ ಏರಿ ಹೋಗಿ, ನಾನು ಇಸ್ರಯೇಲ್ ಮಕ್ಕಳಿಗೆ ಕೊಡುವ ದೇಶವನ್ನು ನೋಡು. ಅದನ್ನು ನೋಡಿದ ಮೇಲೆ ನೀನು ಸಹ ನಿನ್ನ ಅಣ್ಣನಾದ ಆರೋನನ ಹಾಗೆ ಸಾಯ ಬೇಕು; ಯಾಕಂದರೆ ನೀವು ಚೀನ್ ಅರಣ್ಯದಲ್ಲಿ ನನ್ನ ಮಾತನ್ನು ಮೀರಿದ್ದೀರಿ, ಅಂದನು. ಇದಲ್ಲದೆ ಯೆಹೋವನು ಮೋಶೆಗೆ ಹೇಳಿದ್ದೇನಂದರೆ:—ಆತ್ಮವುಳ್ಳ ಮನುಷ್ಯನಾಗಿರುವ ಯೆಹೋಶುವನನ್ನು ತಕ್ಕೊಂಡು, ನಿನ್ನ ಕೈಯನ್ನು ಅವನ ಮೇಲೆ ಇಟ್ಟು, ಸಮಸ್ತ ಸಭೆಯ ಮುಂದೆ ಅವನನ್ನು ನಿಲ್ಲಿಸಿ, ನಾಯಕನಾಗ ನೇಮಿಸು. ಮತ್ತು ಸಮಸ್ತ ಸಭೆಯು ಅವನ ಮಾತನ್ನು ಕೇಳುವ ಹಾಗೆ, ನಿನ್ನ ಮಹಿಮೆಯ ಪಾಲನ್ನು ಅವನ ಮೇಲೆ ಇಡು, ಅಂದನು. ಮೋಶೆ ಯೆಹೋವನು ಆಜ್ಞಾಪಿಸಿದ ಪ್ರಕಾರವೇ ಮಾಡಿ, ತನ್ನ ಕೈಯನ್ನು ಯೆಹೋಶುವನ ಮೇಲೆ ಇಟ್ಟು, ನಾಯಕನಾಗ ನೇಮಿಸಿದನು. ಆಗ ಯೆಹೋಶುವನು ಬುದ್ಧಿಯ ಆತ್ಮದಿಂದ ತುಂಬಿದವನಾದನು.

ಮತ್ತು ಮೋಶೆಯು ಇಸ್ರಯೇಲ್ ಮಕ್ಕಳ ವಿಷಯವಾಗಿ ಯೆಹೋವನು ತನಗೆ ಅಪ್ಪಣೆ ಕೊಟ್ಟದ್ದನ್ನೆಲ್ಲಾ ಅವರ ಸಂಗಡ ಮಾತಾಡಿ, ಹೇಳಿದ್ದೇನಂದರೆ:—ಇಗೋ, ನನ್ನ ದೇವರಾದ ಯೆಹೋವನು ನನಗೆ ಆಜ್ಞಾಪಿಸಿದಂತೆ ನೇಮಗಳನ್ನೂ ನ್ಯಾಯಗಳನ್ನೂ ನಿಮಗೆ ಬೋಧಿಸಿ ಇದ್ದೇನೆ. ಹೀಗಿರುವದರಿಂದ ನೀವು ಅದನ್ನು ಕೈಕೊಂ

ಡು ಮಾಡಿರಿ; ಯಾಕಂದರೆ ಜನಾಂಗಗಳ ಮುಂದೆ ಇದೇ ನಿಮ್ಮ ಜ್ಞಾನವೂ ನಿಮ್ಮ ವಿವೇಕವೂ. ಅವರು ಈ ನೇಮಗಳನ್ನೆಲ್ಲಾ ಕೇಳಿ: ನಿಶ್ಚಯವಾಗಿ ಈ ದೊಡ್ಡ ಜನಾಂಗವು ಜ್ಞಾನವೂ ವಿವೇಕವೂ ಉಳ್ಳ ಜನವಾಗಿದೆ, ಅನ್ನುವರು; ಯಾಕಂದರೆ ನಾವು ಅವನನ್ನು ಕರಿಯುವ ಎಲ್ಲಾ ವಿಷಯಗಳಲ್ಲಿ ನಮ್ಮ ದೇವರಾದ ಯೆಹೋವನು ನಮಗೆ ಸಮೀಪವಾಗಿರುವ ಪ್ರಕಾರ, ದೇವರು ಅಷ್ಟು ಸಮೀಪವಾದ ದೊಡ್ಡ ಜನಾಂಗ ಯಾವದು? ಇದಲ್ಲದೆ ನಾನು ಈ ಹೊತ್ತು ನಿಮ್ಮ ಮುಂದೆ ಇಡುವ ಈ ಎಲ್ಲಾ ನ್ಯಾಯಪ್ರಮಾಣದ ಪ್ರಕಾರ ನೀತಿಯುಳ್ಳ ನೇಮ ನ್ಯಾಯಗಳು ಇರುವ ದೊಡ್ಡ ಜನಾಂಗ ಯಾವದು? ಅದು ಕಾರಣ ನಾನು ಈ ಹೊತ್ತು ನಿನಗೆ ಆಜ್ಞಾಪಿಸುವ ಈ ಮಾತುಗಳು ನಿನ್ನ ಹೃದಯದಲ್ಲಿ ಇರ ಬೇಕು; ಅವುಗಳನ್ನು ನಿನ್ನ ಮಕ್ಕಳಿಗೆ ಅಭ್ಯಾಸ ಮಾಡಿಸಿ, ನಿನ್ನ ಮನೆಯಲ್ಲಿ ಕೂತಿರುವಾಗಲೂ, ಮಾರ್ಗದಲ್ಲಿ ಹೋಗುವಾಗಲೂ, ಮಲಗುವಾಗಲೂ ಏಳುವಾಗಲೂ ಅವುಗಳ ವಿಷಯವಾಗಿ ಮಾತಾಡ ಬೇಕು. ನೀವು ಈ ನ್ಯಾಯಗಳನ್ನೆಲ್ಲಾ ಕೈಕೊಂಡರೆ, ಯೆಹೋವನು ನಿಮ್ಮ ಪಿತೃಗಳಿಗೆ ಪ್ರಮಾಣ ಮಾಡಿದ ಒಡಂಬಡಿಕೆಯನ್ನೂ ಕೃಪೆಯನ್ನೂ ನಿನಗೋಸ್ಕರ ಕೈಕೊಂಡು, ನಿನ್ನನ್ನು ಪ್ರೀತಿ ಮಾಡಿ, ನಿನ್ನನ್ನು ಆಶೀರ್ವದಿಸುವನು. ಆದರೆ ನೀವು ನಿಮ್ಮ ದೇವರಾದ ಯೆಹೋವನನ್ನು ಮರೆತು, ಬೇರೆ ದೇವರುಗಳನ್ನು ಹಿಂಬಾಲಿಸಿ, ಅವುಗಳನ್ನು ಸೇವಿಸಿದರೆ, ನೀವು ನಾಶವಾಗುವಿರಿ. ಮತ್ತು ಯೆಹೋವನು ನಿಮ್ಮನ್ನು ಪ್ರಜೆಗಳೊಳಗೆ ಚದರ ಮಾಡುವನು ಎಂದು ನಾನು ಈ ಹೊತ್ತು ನಿಮ್ಮ ಮೇಲೆ ಸಾಕ್ಷಿಯಾಗಿ ಹೇಳುತ್ತೇನೆ. ಹಾಗಾದರೆ ಈಗ ಇಸ್ರಯೇಲೇ, ನಿನ್ನ ದೇವರಾದ ಯೆಹೋವನಿಗೆ ಪೂರ್ಣ ಹೃದಯದಿಂದಲೂ ಪ್ರಾಣದಿಂದಲೂ ಸೇವೆ ಮಾಡ ಬೇಕು. ಯಾಕಂದರೆ ನೀನು ಸ್ವತಂತ್ರಿಸಿ ಕೊಳ್ಳುವ ಆ ಜನಾಂಗಗಳು ಮೇಘ ಮಂತ್ರದವರ ಮತ್ತು ಕಣಿ ಹೇಳುವವರ ಮಾತು ಕೇಳುತ್ತಿದ್ದರು; ಆದರೆ ನಿನ್ನನ್ನು ನಿನ್ನ ದೇವರಾ

ದ ಯೆಹೋವನು ಹಾಗೆ ಮಾಡ ಗೊಡಿಸಲಿಲ್ಲ. ನನ್ನ ಹಾಗಿರುವ ಪ್ರವಾದಿಯನ್ನು ಯೆಹೋವನು ನಿನಗೆ ನಿನ್ನ ಸಹೋದರರೊಳಗಿಂದ ಎಬ್ಬಿಸುವನು; ಅವನ ಮಾತು ನೀವು ಕೇಳ ಬೇಕು. ನಾನು ಜೀವವನ್ನೂ ಮರಣವನ್ನೂ ಆಶೀರ್ವಾದವನ್ನೂ ಶಾಪವನ್ನೂ ನಿನ್ನ ಮುಂದೆ ಇಟ್ಟಿದ್ದೇನೆಂಬುವದಕ್ಕೆ ಆಕಾಶವನ್ನೂ ಭೂಮಿಯನ್ನೂ ಈ ಹೊತ್ತು ನಿನ್ನ ಮೇಲೆ ಸಾಕ್ಷಿಗಳಾಗಿ ಕರಿಯುತ್ತೇನೆ. ಹೀಗಿರುವದರಿಂದ ನೀನೂ ನಿನ್ನ ಬೀಜವೂ ಬದುಕುವ ಹಾಗೆ ಜೀವವನ್ನು ಆದುಕೋ.

ಈ ಮಾತುಗಳನ್ನು ತೀರಿಸಿದ ಮೇಲೆ ಮೋಶೆ ಇಸ್ರಯೇಲ್ ಹನ್ನೆರಡು ಕುಲಗಳನ್ನು ಆಶೀರ್ವದಿಸಿ, ನೆಬೋ ಬೆಟ್ಟಕ್ಕೆ ಏರಿ ಹೋದನು. ಯೆಹೋವನು ಅವನಿಗೆ ವಾಗ್ದತ್ತದ ದೇಶವನ್ನು ತೋರಿಸಿದ ಮೇಲೆ, ಅವನು ಅಲ್ಲಿ ಯೆಹೋವನು ಹೇಳಿದ ಹಾಗೆ ಸತ್ತನು; ಯೆಹೋವನು ಅವನನ್ನು ಹೂಣಿಟ್ಟನು. ಅವನ ಸಮಾಧಿ ಇಂದಿನ ವರೆಗೂ ಯಾರಿಗೂ ತಿಳಿಯಲಿಲ್ಲ. ಅವನು ಸಾಯುವಾಗ ನೂರ ಇಪ್ಪತ್ತು ವರುಷದವನಾಗಿದ್ದನು. ಅವನ ಕಣ್ಣು ಮೊಬ್ಬಾಗಲಿಲ್ಲ, ಅವನ ತ್ರಾಣ ಕುಂದಲಿಲ್ಲ. ಇಸ್ರಯೇಲ್ ಮಕ್ಕಳು ಮೋಶೆಯ ನಿಮಿತ್ತ ಮೂವತ್ತು ದಿವಸ ಅತ್ತರು. ಮೋಶೆಯ ಹಾಗೆ ಇಸ್ರಯೇಲಿನಲ್ಲಿ ಮತ್ತೊಬ್ಬ ಪ್ರವಾದಿ ಏಳಲಿಲ್ಲ.

ಬಾ. 92. 79. 150.

---

## ೩೧. ಯೆಹೋಶುವನು.

(ಯೆಹೋಶುವ. ೧—೨೪.)

(ಕ್ರಿಸ್ತನ ಜನ್ಮದ ಮುಂಚೆ ಶುಮಾರು ೧೪೪೦.)

೧) ಮೋಶೆ ಸತ್ತ ತರುವಾಯ, ಯೆಹೋವನು ಯೆಹೋಶುವನ ಸಂಗಡ ಮಾತಾಡಿ, ಹೇಳಿದ್ದೇನಂದರೆ:—ಬಲವಾಗಿರು, ದೃಢವಾಗಿ



ರು; ಯಾಕಂದರೆ ಈ ಜನರಿಗೆ ನಾನು ಅವರ ತಂದೆಗಳಿಗೆ ಕೊಡುವೆನೆಂದು ಆಣೆ ಇಟ್ಟ ದೇಶವನ್ನು ನೀನು ಬಾಧ್ಯತೆಯಾಗಿ ಕೊಡುವಿ. ಒಂದು ಮಾತ್ರ—ನನ್ನ ಸೇವಕನಾದ ಮೋಶೆ ನಿನಗೆ ಆಜ್ಞಾಪಿಸಿದ ನ್ಯಾಯಪ್ರಮಾಣವೆಲ್ಲಾದರ ಪ್ರಕಾರ ಮಾಡಿ, ಅದನ್ನು ಕೈಕೊಳ್ಳುವ ಹಾಗೆ ಬಲವಾಗಿರು. ನೀನು ಅದನ್ನು ಬಿಟ್ಟು, ಬಲಕ್ಕಾದರೂ ಎಡಕ್ಕಾದರೂ ತೊಲಗ ಬೇಡ. ಈ ಪುಸ್ತಕದಲ್ಲಿ ಬರದಿರುವ ನ್ಯಾಯಪ್ರಮಾಣವು ನಿನ್ನ ಬಾಯಿ ಬಿಟ್ಟು ಹೋಗ ಬಾರದು; ರಾತ್ರಿ ಹಗಲು ಅದನ್ನು ಧ್ಯಾನಿಸ ಬೇಕು. ಆಗ ನಿನ್ನ ಮಾರ್ಗವನ್ನು ಸಫಲ ಮಾಡಿ, ಬುದ್ಧಿವಂತನಾಗಿ ನಡದು ಕೊಳ್ಳುವಿ. ಭಯ ಪಡ ಬೇಡ; ಯಾಕಂದರೆ ನೀನು ಹೋಗುವ ಸ್ಥಳದಲ್ಲೆಲ್ಲಾ ನಿನ್ನ ದೇವರಾದ ಯೆಹೋವನು ನಿನ್ನ ಸಂಗಡ ಇದ್ಧಾನೆ. ಆಗ ಯೆಹೋಶುವನೂ ಇಸ್ರಯೇಲ ಮಕ್ಕಳೆಲ್ಲರೂ ಶಿಟ್ಟಿಮಿನಿಂದ ಎದ್ದು, ಯೊರ್ದನಿನ ಬಳಿಗೆ ಬಂದು, ದಾಟುವದಕ್ಕಿಂತ ಮುಂಚೆ ಅಲ್ಲಿ ವಸ್ತಿಯಾಗಿದ್ದರು. ಆಗ ಯೆಹೋವನು ಯೆಹೋಶುವನಿಗೆ: ಈ ಹೊತ್ತು ನಾನು ನಿನ್ನನ್ನು ಇಸ್ರಯೇಲಿನ ಕಣ್ಣುಗಳ ಮುಂದೆ ದೊಡ್ಡವನಾಗ ಮಾಡಲಾರಂಭಿಸುವೆನು. ನಾನು ಮೋಶೆಯ ಸಂಗಡ ಇದ್ದ ಪ್ರಕಾರ, ನಿನ್ನ ಸಂಗಡ ಇದ್ಧೇನೆಂದು ಅವರು ತಿಳಿಯುವರು. ಆಗ ಜನರು ಯೊರ್ದನನ್ನು ದಾಟ ಹೊರಟರು. ಯೆಹೋವನು ಆಜ್ಞಾಪಿಸಿದ ಪ್ರಕಾರ ಯಾಜಕರು ಒಡಂಬಡಿಕೆಯ ಪೆಟ್ಟಿಗೆಯನ್ನು ಜನರಿಗೆ ಮುಂದಾಗಿ ಹೊತ್ತು



ಕೊಂಡು ಹೋದರು. ಅವರು ಯೊರ್ದನಿನ ನೀರಿನಲ್ಲಿ ಕಾಲುಗಳನ್ನು ಹಾಕಿರುತ್ತಲೇ, ಮೇಲಿನಿಂದ ಇಳಿದು ಬರುವ ನೀರು ಕುಪ್ಪೆಯಾಗಿ ನಿಂತಿತು. ಆದರೆ ಉಪ್ಪು ಸಮುದ್ರಕ್ಕೆ ಇಳಿದು ಹೋಗುವ ನೀರುಗಳು ಭೇದವಾದವು. ಹೀಗೆ ಜನಾಂಗವೆಲ್ಲಾ ಒಣಗಿದ ಭೂಮಿಯಲ್ಲಿ ದಾಟಿದರು.

ಮತ್ತು ಇಸ್ರಯೇಲ್ ಮಕ್ಕಳು ಗಿಲ್ಗಾಲ್ ಎಂಬ ಸ್ಥಳದಲ್ಲಿ ಇರುವಾಗ, ಅವರು ಎರಿಕೋವಿನ ಬೈಲಿನಲ್ಲಿ ಪಸ್ಕವನ್ನು ಆಚರಿಸಿದರು. ಮತ್ತು ಆ ದೇಶದ ಹಳೇ ಧಾನ್ಯವನ್ನು ತಿಂದರು. ತಿಂದ ಮರು ದಿವಸದಲ್ಲಿ ಮನ್ನವು ನಿಂತು ಹೋಯಿತು.

೨) ಎರಿಕೋ ಇಸ್ರಯೇಲ್ ಮಕ್ಕಳ ನಿಮಿತ್ತವಾಗಿ ಮುಚ್ಚೇ ಮುಚ್ಚಲ್ಪಟ್ಟಿತು. ಆಗ ಯೆಹೋವನು ಯೆಹೋಶುವನಿಗೆ: ಎರಿಕೋವನ್ನೂ ಅದರ ಅರಸನನ್ನೂ ನಿನ್ನ ಕೈಯಲ್ಲಿ ಒಪ್ಪಿಸಿ ಕೊಟ್ಟೆನು. ಯುದ್ಧ ಮಾಡುವವರೆಲ್ಲರೂ ಒಂದು ಸಾರಿ ಪಟ್ಣವನ್ನು ಸುತ್ತ ಬೇಕು. ಏಳು ಮಂದಿ ಯಾಜಕರು ಒಡಂಬಡಿಕೆಯ ಪೆಟ್ಟಿಗೆಯ ಮುಂದೆ ಸಂಭ್ರಮದ ಏಳು ತುತೂರಿಗಳನ್ನು ಹಿಡು ಕೊಂಡು, ಅದನ್ನು ಊದ ಬೇಕು. ಈ ಪ್ರಕಾರ ಆರು ದಿವಸಗಳು ಮಾಡ ಬೇಕು. ಏಳನೇ ದಿವಸದಲ್ಲಿ ಏಳು ಸಾರಿ ಸುತ್ತಿ ಬರ ಬೇಕು; ಏಳನೇ ಸಾರಿ ಸುತ್ತಿ ಬರುವಾಗ, ಯಾಜಕರು ತುತೂರಿಗಳಿಂದ ದೀರ್ಘಧ್ವನಿ ಗೈಯುವಾಗ, ಜನರೆಲ್ಲರು ಮಹಾ ಆರ್ಭಟವಾಗಿ ಆರ್ಭಟಿಸ ಬೇಕು; ಆಗ ಪಟ್ಣದ ಗೋಡೆ ಕೂಲ ಬಿದ್ದು ಹೋಗುವದು. ಹೀಗೆ ತುತೂರಿಗಳನ್ನು ಹಿಡು ಕೊಂಡು, ಏಳು ಮಂದಿ ಯಾಜಕರು ಮುಂದೆ ನಡೆದರು. ಯೆಹೋವನ ಒಡಂಬಡಿಕೆಯ ಪೆಟ್ಟಿಗೆ ಅವರ ಹಿಂದೆ ಬಂತು. ಸೈನ್ಯವು ಪೆಟ್ಟಿಗೆಯ ಹಿಂದೆ ನಡೆದು ಬಂತು. ಹೀಗೆ ಆರು ದಿವಸ ಪಟ್ಣವನ್ನು ಸುತ್ತಿ ಬಂದರು. ಏಳನೇ ದಿವಸ ಹೊತ್ತಾರೆ ಸೂರ್ಯ ಉದಯವಾಗುವಾಗ, ಅವರು ಎದ್ದು, ಅದೇ ರೀತಿಯಾಗಿ ಪಟ್ಣವನ್ನು ಏಳು ಸಾರಿ ಸುತ್ತಿ ಬಂದರು; ಏಳನೇ ಸಾರಿ ಯಾಜಕರು ತುತೂ

ರಿಗಳನ್ನು ಊದುವಾಗ ಯೆಹೋಶುವನು ಜನರಿಗೆ: ಆರ್ಭಟಿಸಿರಿ, ಅಂದನು. ಜನರು ಆರ್ಭಟಿಸಿದರು. ಆಗ ಪಟ್ಟದ ಗೋಡೆ ಕೂಲ ಬಿತ್ತು. ಇಸ್ರಯೇಲ್ಯರು ಅದನ್ನು ನಿರ್ಮೂಲ ಮಾಡಿದರು. ಅದರಲ್ಲಿ ಇದ್ದದ್ದನ್ನೆಲ್ಲಾ ಕತ್ತಿಯಿಂದ ಹೊಡೆದರು.

ಹೀಗೆ ಯೆಹೋವನು ಕಾನಾನ್ ದೇಶವನ್ನು ಆಳಿದ ಮೂವತ್ತೊಂದು ಮಂದಿ ಅರಸರನ್ನು ಯೆಹೋಶುವನ ಕೈಯಲ್ಲಿ ಒಪ್ಪಿಸಿದನು. ಗಿಬ್ಯೋನಿನ ಹತ್ತರ ಐದು ಮಂದಿ ಅರಸುಗಳು ಯೆಹೋಶುವನ ಮೇಲೆ ಯುದ್ಧ ಮಾಡುವಾಗ, ಯೆಹೋವನು ಅವರನ್ನು ಇಸ್ರಯೇಲ್ಯರ ಮುಂದೆ ಗಲಿಬಿಲಿ ಮಾಡಿದನು. ಅವರು ಓಡಿ ಹೋಗುವಾಗ ಅವರ ಮೇಲೆ ಆಕಾಶದಿಂದ ಅವರನ್ನು ಕೊಲ್ಲುವ ದೊಡ್ಡ ಕಲ್ಲು ಮಳೆ ಬೀಳ ಮಾಡಿದನು. ಇಸ್ರಯೇಲ್ ಮಕ್ಕಳು ಕತ್ತಿಯಿಂದ ಕೊಂದವರಿಗಿಂತ ಕಲ್ಲು ಮಳೆಯಿಂದ ಸತ್ತವರು ಹೆಚ್ಚಾಗಿದ್ದರು.

ಯೆಹೋವನು ಅಮೋರಿಯರನ್ನು ಇಸ್ರಯೇಲ್ಯರ ಕೈಯಲ್ಲಿ ಒಪ್ಪಿಸಿ ಕೊಡುವ ಆ ದಿವಸ ಯೆಹೋಶುವನು: ಸೂರ್ಯನೇ, ನೀನು ಗಿಬ್ಯೋನಿನಲ್ಲಿಯೂ; ಚಂದ್ರನೇ, ನೀನು ಅಯ್ಯಲೋನ್ ತಗ್ಗಿ



ನಲ್ಲಿಯೂ ನೆಲೆಯಾಗಿ ನಿಂತಿರು, ಅಂದನು. ಆದದರಿಂದ ಇಸ್ರಯೇಲ್ಯರು ತಮ್ಮ ಶತ್ರುಗಳಿಗೆ ಮುಯ್ಯಿಗೆ ಮುಯ್ಯಿ ಮಾಡುವ ಪರಿಯಂ

ತರ ಸೂರ್ಯ ಚಂದ್ರರು ನೆಲೆಯಾಗಿ ನಿಂತಿದ್ದರು. ಸೂರ್ಯನು ಅಸ್ತಮಿಸ ತ್ವರೆ ಮಾಡದೆ, ಹೆಚ್ಚು ಕಡಿಮೆ ಒಂದು ಪೂರ್ಣ ದಿವಸ ಆಕಾಶದ ಮಧ್ಯದಲ್ಲಿ ನಿಂತನು.

೩) ಯೆಹೋಶುವನು ಮುದುಕನಾಗಿದ್ದಾಗ, ಯೆಹೋವನು ಅವನಿಗೆ ಹೇಳಿದ್ದೇನಂದರೆ:—ಈಗ ಈ ದೇಶವನ್ನು ಒಂಭತ್ತು ಕುಲಗಳಿಗೂ ಮನಾಸೆಯ ಅರ್ಧ ಕುಲಕ್ಕೂ ಬಾಧ್ಯತೆಯಾಗಿ ಪಾಲಿಡು. ಅವರ ಸಂಗಡ ರೂಬೆನ್ಯರೂ ಗಾಡಿಯರೂ ಅರ್ಧ ಮನಾಸೆಯರೂ ತಮ್ಮ ಬಾಧ್ಯತೆಯನ್ನು ಹೊಂದಿದರು. ಇವರಿಗೆ ಮೋಶೆ ಯೊರ್ದನಿಗೆ ಆಚೆಯಲ್ಲಿ ಕೊಟ್ಟದ್ದೇ ಶಿಕ್ಕಿತು. ಆದರೆ ಲೇವಿಯರ ಕುಲಕ್ಕೆ ಮಾತ್ರ ಅವನು ಬಾಧ್ಯತೆಯನ್ನು ಕೊಡಲಿಲ್ಲ; ಯಾಕಂದರೆ ಯೆಹೋವನ ದಹನಬಲಿಗಳೇ ಅವರ ಬಾಧ್ಯತೆ ಆಗಿರುತ್ತದೆ. ಮತ್ತು ಇಸ್ರಯೇಲ್ ಮಕ್ಕಳು ಯೆಹೋವನ ಆಜ್ಞೆಯ ಪ್ರಕಾರ ತಮ್ಮ ಬಾಧ್ಯತೆಗಳಲ್ಲಿ ಲೇವಿಯರಿಗೆ ನಾಲ್ವತ್ತೆಂಟು ಪಟ್ಣಗಳನ್ನು ಕೊಟ್ಟರು. ತರುವಾಯ ಇಸ್ರಯೇಲ್ ಸಭೆ ಎಲ್ಲಾ ಷಿಲೋವಿನಲ್ಲಿ ಕೂಡಿ, ಅಲ್ಲಿ ಸಭೆಯ ಗುಡಾರವನ್ನು ನಿಲ್ಲಿಸಿದರು. ಹೀಗೆ ಯೆಹೋವನು, ಅವರ ತಂದೆಗಳಿಗೆ ಕೊಡುವೆನೆಂದು ಆಣೆ ಇಟ್ಟ ದೇಶವೆಲ್ಲಾ ಇಸ್ರಯೇಲಿಗೆ ಕೊಟ್ಟನು. ಅವನು ಅವರಿಗೆ ಹೇಳಿದ ಒಳ್ಳೇ ಮಾತುಗಳಲ್ಲಿ ಒಂದು ಮಾತಾದರೂ ಬಿದ್ದು ಹೋಗಲಿಲ್ಲ; ಎಲ್ಲಾ ಸಂಭವಿಸಿತು. ಆ ಮೇಲೆ ಯೆಹೋಶುವನು ಶೇಕೆಮಿನಲ್ಲಿ ಇಸ್ರಯೇಲಿನ ಸಮಸ್ತ ಕುಲಗಳನ್ನು ಕೂಡಿಸಿದನು. ಅವರು ದೇವರ ಮುಂದೆ ಬಂದು ನಿಂತಿರುವಾಗ, ಯೆಹೋಶುವನು ಅವರಿಗೆ ಯೆಹೋವನಿಂದ ಆದ ಉಪಕಾರಗಳನ್ನು ನೆನಪು ಹುಟ್ಟಿಸಿ, ಅವರಿಗೆ ಹೇಳಿದ್ದೇನಂದರೆ:—ನೀವು ಯೆಹೋವನಿಗೆ ಭಯ ಪಟ್ಟು, ಪೂರ್ಣವಾಗಿಯೂ ಸತ್ಯವಾಗಿಯೂ ಅವನನ್ನು ಸೇವಿಸಿರಿ. ನಿಮ್ಮಲ್ಲಿ ಅನ್ಯ ದೇವರುಗಳನ್ನು ತೊರೆದು, ನಿಮ್ಮ ಹೃದಯವನ್ನು ಇಸ್ರಯೇಲಿನ ದೇವರಾದ ಯೆಹೋವನಿಗೆ ತಿರಿಗಿಸಿರಿ. ಯೆಹೋವನಿಗೆ ಸೇವಿಸುವದು ನಿಮಗೆ ಚನ್ನಾಗಿ ಕಾಣಿಸ

ದಿದ್ದರೆ, ಈ ಹೊತ್ತು ನೀವು ಯಾರನ್ನು ಸೇವಿಸುವಿರೋ?—ಆದು ಕೊಳ್ಳಿರಿ! ಆದರೆ ನಾನೂ ನನ್ನ ಮನೆಯವರೂ ಯೆಹೋವನನ್ನು ಸೇವಿಸುವೆವು. ಅದಕ್ಕೆ ಜನರು ಅವನಿಗೆ ಪ್ರತ್ಯುತ್ತರವಾಗಿ: ನಾವು ಯೆಹೋವನನ್ನು ಬಿಟ್ಟು, ಅನ್ಯ ದೇವರುಗಳನ್ನು ಸೇವಿಸುವ ಕಾರ್ಯವು ನಮಗೆ ದೂರವಾಗಿರಲಿ. ನಾವು ಯೆಹೋವನನ್ನು ಸೇವಿಸುವೆವು; ಯಾಕಂದರೆ ಅವನು ನಮ್ಮ ದೇವರು, ಅಂದರು. ಮತ್ತು ಯೆಹೋಶುವನು ಆ ಹೊತ್ತು ಜನರ ಸಂಗಡ ಒಡಂಬಡಿಕೆಯನ್ನು ಮಾಡಿದನು. ಇವುಗಳಾದ ತರುವಾಯ ಯೆಹೋಶುವನೆಂಬ ಯೆಹೋವನ ಸೇವಕನು ನೂರ ಹತ್ತು ವರುಷದವನಾಗಿ ಸತ್ತು ಹೋದನು.

II. 19. 40.

---

## ೩೨. ನ್ಯಾಯಾಧಿಪತಿಗಳು.

(ಸೃಷ್ಟಿಯಾದ ಮೇಲೆ ೨೫೮೦—೨೯೨೦.)

(ಕ್ರಿಸ್ತ ಜನ್ಮದ ಮುಂಚೆ ೧೪೨೦ — ೧೦೮೦.)

೧) ಯೆಹೋಶುವನ ದಿವಸಗಳಲ್ಲಿಯೂ ಯೆಹೋವನು ಇಸ್ರಯೇಲ್ಯರಿಗೋಸ್ಕರ ಮಾಡಿದ ದೊಡ್ಡ ಕಾರ್ಯಗಳನ್ನು ಕಂಡಂಥ ಅವನ ತರುವಾಯ ಬದುಕಿದ ಹಿರಿಯರ ದಿವಸಗಳಲ್ಲಿಯೂ ಇಸ್ರಯೇಲ್ಯರು ಯೆಹೋವನನ್ನು ಸೇವಿಸಿದರು. ಆದರೆ ಇವರು ಸತ್ತ ಮೇಲೆ ಯೆಹೋವನನ್ನು ಅರಿಯದೆ ಇರುವ ಮತ್ತೊಂದು ಸಂತತಿ ಎದ್ದಿತು. ಮತ್ತು ಇಸ್ರಯೇಲ್ ಮಕ್ಕಳು ಯೆಹೋವನ ಮುಂದೆ ಕೆಟ್ಟತನ ಮಾಡಿ, ಬೇರೆ ದೇವರುಗಳನ್ನು ಹಿಂಬಾಲಿಸಿ, ಬಾಳನನ್ನೂ ಅಷ್ಟರೋತನ್ನೂ ಸೇವಿಸಿದರು. (ಬಾಳನು ಅಂದರೆ ಒಡೆಯ, ಅಷ್ಟರೋತ್ ಅಂದರೆ ಮಂಗಳ. ಈ ಹೆಸರುಗಳನ್ನು ಕಾನಾನ್ಯರು ಸೂರ್ಯನೆಂಬ ಗಂಡು ದೇವತೆಗೆ, ಮತ್ತು ಚಂದ್ರವೆಂಬ ಹೆಣ್ಣು ದೇವತೆಗೆ ಇಟ್ಟರು.) ಆದದರಿಂದ ಯೆಹೋವನು ಇಸ್ರಯೇಲಿನ ಮೇಲೆ

ಕೋಪ ಗೊಂಡು, ಅವರ ಸುತ್ತಲಿರುವ ಅವರ ಶತ್ರುಗಳ ಕೈಗೆ ಅವರನ್ನು ಮಾರಿ ಬಿಟ್ಟನು. ಆದರೆ ಅವರು ಯೆಹೋವನಿಗೆ ಕೂಗಿದರು. ಯೆಹೋವನು ಪಶ್ಚಾತ್ತಾಪ ಪಟ್ಟು, ಅವರನ್ನು ಕೊಳ್ಳೆ ಇಡುವವರ ಕೈಯೊಳಗಿಂದ ರಕ್ಷಿಸುವ ನ್ಯಾಯಾಧಿಪತಿಗಳನ್ನು ಎಬ್ಬಿಸಿದನು. ಮತ್ತು ಆ ನ್ಯಾಯಾಧಿಪತಿಗಳ ಸಂಗಡ ಇದ್ದು, ಆಯಾ ನ್ಯಾಯಾಧಿಪತಿಯ ದಿವಸಗಳಲ್ಲೆಲ್ಲಾ ಅವರನ್ನು ಅವರ ಶತ್ರುಗಳ ಕೈಗೆ ತಪ್ಪಿಸಿ ರಕ್ಷಿಸುತ್ತಿದ್ದನು. ಆ ನ್ಯಾಯಾಧಿಪತಿ ಸತ್ತಾಗ, ಅವರು ಮಾರ್ಗ ತಪ್ಪಿ, ತಮ್ಮ ತಂದೆಗಳಿಗಿಂತ ಹೆಚ್ಚಾಗಿ ತಮ್ಮನ್ನು ಕೆಡಿಸಿ ಕೊಂಡು, ಅನ್ಯ ದೇವರುಗಳನ್ನು ಹಿಂಬಾಲಿಸಿದರು. ಈ ನ್ಯಾಯಾಧಿಪತಿಗಳಲ್ಲಿ ಮುಖ್ಯವಾದವರು ಯಾರಂದರೆ: ಬಾರಕನು, ಗಿದ್ಯೋನನು, ಯೆಪ್ತಾಹನು, ಸಂಸೋನನು, ಇವರೇ. ಹೀಗೆ ಇಸ್ರಯೇಲ್ ಮಕ್ಕಳು ಯೆಹೋವನ ಕಣ್ಣುಗಳ ಮುಂದೆ ಕೆಟ್ಟತನ ಮಾಡಿದ್ದರಿಂದ, ಅವನವರನ್ನು ಏಳು ವರುಷ ಮಿದ್ಯಾನ್ಯರ ಕೈಗೆ ಒಪ್ಪಿಸಿ ಕೊಟ್ಟನು. ಇಸ್ರಯೇಲ್ಯರು ಬೀಜ ಬಿತ್ತಿದ ತರುವಾಯ ಮಿದ್ಯಾನ್ಯರು ಮಿಡಿತೆಗಳ ಹಾಗೆ ಗುಂಪಾಗಿ ಬಂದು, ಭೂಮಿಯ ಫಲವನ್ನು ಕೆಡಿಸಿ ಬಿಟ್ಟು, ಇಸ್ರಯೇಲಲ್ಲಿ ಆಹಾರವಿಲ್ಲದ ಹಾಗೆ ಮಾಡಿದರು. ಆಗ ಇಸ್ರಯೇಲ್ಯರು ಯೆಹೋವನಿಗೆ ಕೂಗಿದರು. ಮತ್ತು ಯೆಹೋವನ ದೂತನು ಗಿದ್ಯೋನನಿಗೆ ಪ್ರತ್ಯಕ್ಷವಾದನು. ಇವನು ಮಿದ್ಯಾನ್ಯರಿಗೆ ತಪ್ಪಿಸುವ ಹಾಗೆ ದ್ರಾಕ್ಷೇ ಆಲೆಯ ಬಳಿಯಲ್ಲಿ ಗೋಧಿಯನ್ನು ಬಡಿಯುತ್ತಿದ್ದನು. ಆಗ ದೂತನು ಅವನಿಗೆ: ಬಲವುಳ್ಳ ಪರಾಕ್ರಮಶಾಲಿಯೇ, ಯೆಹೋವನು ನಿನ್ನ ಸಂಗಡ ಇದ್ದಾನೆ, ಅಂದನು. ಅದಕ್ಕೆ ಗಿದ್ಯೋನನು: ನನ್ನ ಸ್ವಾಮಿಯೇ, ಯೆಹೋವನು ನಮ್ಮ ಸಂಗಡ ಇದ್ದರೆ, ಇದೆಲ್ಲಾ ಸಂಭವಿಸಿದ್ದೇನು? ನಮ್ಮ ತಂದೆಗಳು ನಮಗೆ ಹೇಳಿದ ಅವನ ಅದ್ಭುತಗಳೆಲ್ಲಾ ಎಲ್ಲಿ? ಅಂದನು. ಯೆಹೋವನು ಅವನನ್ನು ದೃಷ್ಟಿಸಿ, ಅವನಿಗೆ: ಈ ನಿನ್ನ ಶಕ್ತಿಯಿಂದ ಹೋಗಿ, ಇಸ್ರಯೇಲ್ಯರನ್ನು ಮಿದ್ಯಾನ್ಯರ ಕೈಯಿಂದ ತಪ್ಪಿಸಿ, ರಕ್ಷಿ

ಸುವಿ; ನಾನು ನಿನ್ನನ್ನು ಕಳುಹಿಸಲಿಲ್ಲವೋ? ಅಂದನು. ಅದಕ್ಕವನು: ನಾನು ಇಸ್ರಯೇಲನ್ನು ಹ್ಯಾಗೆ ರಕ್ಷಿಸುವೆ? ಮನಾಸೆಯಲ್ಲಿ ನನ್ನ ಕುಟುಂಬವು ಬಡವಾದದ್ದು; ನನ್ನ ತಂದೆಯ ಮನೆಯಲ್ಲಿ ನಾನು ಚಿಕ್ಕವನು, ಅಂದನು. ಆದರೆ ಯೆಹೋವನು ಅವನಿಗೆ: ನಾನು ನಿನ್ನ ಸಂಗಡ ಇರುವದರಿಂದ, ನೀನು ಮಿದ್ಯಾನ್ಯರನ್ನು ಒಬ್ಬ ಮನುಷ್ಯನ ಹಾಗೆ ಹೊಡೆಯುವಿ, ಅಂದನು.

೨) ಅದೇ ರಾತ್ರಿಯಲ್ಲಿ ಯೆಹೋವನು ಅವನಿಗೆ ಹೇಳಿದ್ದೇನಂದರೆ:—ನೀನು ನಿನ್ನ ತಂದೆಗಿರುವ ಬಾಳನ ಬಲಿಪೀಠವನ್ನು ಕೆಡವಿ, ಅದರ ಸಮೀಪದಲ್ಲಿರುವ ತೋಪನ್ನು ಕಡಿದು ಹಾಕಿ, ಆ ಸ್ಥಳದಲ್ಲಿ ಯೆಹೋವನಿಗೆ ಬಲಿಪೀಠವನ್ನು ಕಟ್ಟಿ, ಅದರ ಮೇಲೆ ಹೋಮಗಳನ್ನು ಅರ್ಪಿಸು. ಗಿದ್ಯೋನನು ರಾತ್ರಿಯಲ್ಲಿ ಹಾಗೆಯೇ ಮಾಡಿದನು. ಆ ಊರಿನ ಮನುಷ್ಯರು ಉದಯದಲ್ಲಿ ಎದ್ದಾಗ, ಒಬ್ಬರಿಗೊಬ್ಬರು: ಈ ಕಾರ್ಯವನ್ನು ಮಾಡಿದವನ್ಯಾರು? ಅಂದು ಕೊಂಡರು; ವಿಚಾರಿಸಲು, ಯೊವಾಷನ ಮಗನಾದ ಗಿದ್ಯೋನನು ಅದನ್ನು ಮಾಡಿದ್ಧಾನೆಂದು ಕೇಳಿದಾಗ, ಅವರು ಯೊವಾಷನಿಗೆ: ನಿನ್ನ ಮಗನನ್ನು ಹೊರಗೆ ತಕ್ಕೊಂಡು ಬಾ; ಅವನು ಸಾಯ ಬೇಕು, ಅಂದರು. ಅದಕ್ಕೆ ಯೊವಾಷನು: ನೀವು ಬಾಳನಿಗಾಗಿ ವ್ಯಾಜ್ಯವಾಡುವಿರೋ? ನೀವು ಅವನನ್ನು ರಕ್ಷಿಸುವಿರೋ? ಅವನು ದೇವರಾದರೆ ತನಗೋಸ್ಕರ ವ್ಯಾಜ್ಯವಾಡಲಿ, ಅಂದನು.

ಮತ್ತು ಮಿದ್ಯಾನ್ಯರೆಲ್ಲರು ಏಕವಾಗಿ ಕೂಡಿ, ಇಜ್ರೇಲ್ ತಗ್ಗಿನಲ್ಲಿ ದಂಡಿಳಿದರು. ಆಗ ಯೆಹೋವನ ಆತ್ಮವು ಗಿದ್ಯೋನನ ಮೇಲೆ ಬಂತು; ಅವನು ತುತೂರಿಯನ್ನು ಊದಿ, ಬೇರೆ ಕುಲದವರನ್ನು ತನ್ನನ್ನು ಹಿಂಬಾಲಿಸಲಿಕ್ಕೆ ಕರೇ ಕಳುಹಿಸಿ, ಅವರನ್ನು ಕೂಡಿಸಿಕೊಂಡನು. ಮತ್ತು ಗಿದ್ಯೋನನು ದೇವರಿಗೆ ಹೇಳಿದ್ದೇನಂದರೆ:—ನೀನು ಹೇಳಿದ ಹಾಗೆಯೇ ನನ್ನ ಕೈಯಿಂದ ಇಸ್ರಯೇಲನ್ನು ರಕ್ಷಿಸುವಿಯಾದರೆ, ಇಗೋ, ಉಣ್ಣೆಯ ಗುಜ್ಜನ್ನು ಕಣದಲ್ಲಿ ಹಾಕುವೆ

ನು; ಮಂಜು ಉಣ್ಣೆಯ ಮೇಲೆ ಮಾತ್ರವೇ ಇದ್ದು, ಭೂಮಿಯೆಲ್ಲಾ ಒಣಗಿದ್ದರೆ, ಆಗ ನೀನು ಹೇಳಿದ ಹಾಗೆ ಇಸ್ರಯೇಲನ್ನು ನನ್ನ ಕೈಯಿಂದ ರಕ್ಷಿಸುವಿ ಎಂಬುವದನ್ನು ತಿಳಿಯುವೆನು. ಹಾಗೆಯೇ ಆಯಿತು. ಅವನು ಮರು ದಿವಸ ಉದಯದಲ್ಲಿ ಎದ್ದು, ಉಣ್ಣೆಯನ್ನು ತೆಗದು ಕೊಂಡು, ಅದರೊಳಗಿದ್ದ ಮಂಜಿನ ನೀರನ್ನು ಒಂದು ಬಟ್ಲು



ತುಂಬ ಹಿಂಡಿದನು. ಮತ್ತು ಗಿದ್ಯೋನನು ದೇವರಿಗೆ: ನಾನು ಇನ್ನೊಂದು ಸಾರಿ ಉಣ್ಣೆಯಿಂದ ನಿನ್ನನ್ನು ಶೋಧಿಸ ದಯವಾಗಲಿ. ಉಣ್ಣೆ ಮಾತ್ರವೇ ಒಣಗಿದ್ದು, ಭೂಮಿಯಲ್ಲೆಲ್ಲಾ ಮಂಜು ಇರುವ ಹಾಗೆ ಅಪ್ಪಣೆ ಆಗಲಿ, ಅಂದನು. ಹಾಗೆಯೇ ದೇವರು ಆ ರಾತ್ರಿಯಲ್ಲಿ ಮಾಡಿದನು. ಉಣ್ಣೆ ಮಾತ್ರವೇ ಒಣಗಿ, ಭೂಮಿಯಲ್ಲೆಲ್ಲಿಯೂ ಮಂಜು ಇತ್ತು. ಆಗ ಗಿದ್ಯೋನನೂ ಅವನ ಸಂಗಡ ಇದ್ದ ಜನರೆಲ್ಲರೂ ಎದ್ದರು. ಮತ್ತು ಯೆಹೋವನು ಗಿದ್ಯೋನನಿಗೆ: ನಿನ್ನ ಸಂಗಡ ಇರುವ ಜನವು ಬಹಳವಾಗಿದೆ. ಇಸ್ರಯೇಲ್ಯರು: ನಮ್ಮ ಕೈ ನಮ್ಮನ್ನು ರಕ್ಷಿಸಿತೆಂದು ನನಗೆ ವಿರೋಧವಾಗಿ ಹೆಚ್ಚಳ ಪಟ್ಟಾರು; ಆದದರಿಂದ ನೀನು ಹೋಗಿ, ಜನರು ಕೇಳುವ ಹಾಗೆ—ಯಾವನಿಗೆ ಭಯ ಉಂಟೋ, ಅವನು ತಿರಿಗಿ ತನ್ನ ಮನೆಗೆ ಹೋಗಲಿ ಎಂದು ಪ್ರಕಟ ಮಾಡು, ಅಂದನು. ಆಗ ಜನರಲ್ಲಿ ಇಪ್ಪತ್ತೆರಡು ಸಾವಿರ ಮಂದಿ ತಿರಿಗಿ ಹೋದರು. ಹತ್ತು ಸಾವಿರ ಜನರು ನಿಂತಿ

ದ್ದರು. ಮತ್ತು ಯೆಹೋವನು ಗಿದ್ಯೋನನಿಗೆ: ಜನರು ಇನ್ನೂ ಬಹಳವಾಗಿದ್ಧಾರೆ, ಅವರನ್ನು ಜಲದ ಸಮಿಾಪಕ್ಕೆ ಇಳಿದು ಹೋಗ ಮಾಡು; ಅಲ್ಲಿ ನಾನು ನಿನಗೋಸ್ಕರ ಪರೀಕ್ಷೆ ಮಾಡುವೆನು. ತಮ್ಮ ಕೈಯಿಂದ ತೆಗೆದು ಕೊಂಡು, ಬಾಯಿಗೆ ಎತ್ತಿ ನಾಯಿ ನೆಕ್ಕುವ ಹಾಗೆ ಜಲವನ್ನು ತನ್ನ ನಾಲಿಗೆಯಿಂದ ನೆಕ್ಕುವ ಒಬ್ಬೊಬ್ಬನನ್ನೂ, ಕುಡಿಯುವದಕ್ಕೆ ಮೊಣಕಾಲೂರಿ ಬೊಗ್ಗುವ ಒಬ್ಬೊಬ್ಬನನ್ನೂ ಬೇರೆ ಬೇರೆಯಾಗಿ ನಿಲ್ಲಿಸು, ಅಂದನು. ಆಗ ತಮ್ಮ ಕೈಯಿಂದ ತೆಗೆದು ಕೊಂಡು ತಮ್ಮ ಬಾಯಿಗೆ ಎತ್ತಿ ನೆಕ್ಕಿದವರ ಲೆಖ್ಖವು ಮುನ್ನೂರು ಜನವಾಗಿದ್ದವು. ಆಗ ಯೆಹೋವನು ಗಿದ್ಯೋನನಿಗೆ: ನೆಕ್ಕಿ ಕುಡಿದ ಆ ಮುನ್ನೂರು ಜನರಿಂದ ನಾನು ನಿಮ್ಮನ್ನು ರಕ್ಷಿಸಿ, ಮಿದ್ಯಾನ್ಯರನ್ನು ನಿನ್ನ ಕೈಯಲ್ಲಿ ಒಪ್ಪಿಸಿ ಕೊಡುವೆನು; ಇತರ ಜನರೆಲ್ಲ ತಮ್ಮ ತಮ್ಮ ಸ್ಥಳಗಳಿಗೆ ಹೋಗಲಿ, ಅಂದನು.

೩) ಆ ರಾತ್ರಿಯಲ್ಲಿ ಗಿದ್ಯೋನನೂ ಅವನ ಸೇವಕನಾದ ಫೂರನೂ ಯೆಹೋವನ ಅಪ್ಪಣೆಯ ಪ್ರಕಾರ ಮಿದ್ಯಾನ್ಯರ ದಂಡಿನ ಬಳಿಗೆ ಹೋದರು. ಅಲ್ಲಿ ಬಂದಾಗ, ಇಗೋ, ತನ್ನ ಜತೆಗಾರನಿಗೆ ಒಬ್ಬನು ತನಗಾದ ಸ್ವಪ್ನವನ್ನು ವಿವರಿಸಿ, ಹೇಳಿದ್ದೇನಂದರೆ: ಇಗೋ, ನಾನು ಒಂದು ಕನಸನ್ನು ಕಂಡೆನು; ಏನಂದರೆ, ಒಂದು ಜವೆಗೋಧಿಯ ರೊಟ್ಟಿ ಮಿದ್ಯಾನ್ಯರ ದಂಡಿನ ಮೇಲೆ ಹೊರಳಿ, ಒಂದು ಗುಡಾರದ ಮೇಲೆ ಬಂದು, ಬೀಳುವ ಹಾಗೆ ಅದನ್ನು ಹೊಡೆದು, ಕೆಡವಿ ಹಾಕಿತು. ಅದಕ್ಕೆ ಅವನ ಜತೆಗಾರನು ಪ್ರತ್ಯುತ್ತರ ಕೊಟ್ಟು: ಇದು ಯೊವಾಷನ ಮಗನಾದ ಗಿದ್ಯೋನನ ಕತ್ತಿಯೇ ಹೊರ್ತು ಇತರವಲ್ಲ; ದೇವರು ಮಿದ್ಯಾನ್ಯರನ್ನು ಅವನ ಕೈಯಲ್ಲಿ ಒಪ್ಪಿಸಿ ಕೊಟ್ಟಿದ್ಧಾನೆ, ಅಂದನು. ಗಿದ್ಯೋನನು ಇದನ್ನು ಕೇಳಿದಾಗ, ಅಡ್ಡ ಬಿದ್ದನು; ಮತ್ತು ತಿರಿಗಿ ಇಸ್ರಯೇಲ್ ದಂಡಿಗೆ ಬಂದು, ಮುನ್ನೂರು ಜನರನ್ನು ಮೂರು ಪಾಲಾಗಿ ಹಂಚಿ, ಎಲ್ಲರ ಕೈಯಲ್ಲಿ ತುತೂರಿಗಳನ್ನೂ ಬರೀ ಕೊಡಗಳನ್ನೂ ಕೊಡಗಳಲ್ಲಿ ಪಂಜುಗಳನ್ನೂ ಕೊಟ್ಟ

ನು. ಹೀಗೆ ಮಧ್ಯರಾತ್ರಿಯಲ್ಲಿ ಗಿದ್ಯೋನನೂ ಇವರೆಲ್ಲರೂ ಮಿದ್ಯಾನ್ಯರ ದಂಡಿಗೆ ಹೋಗಿ, ಈ ಮೂರು ಗುಂಪಿನ ಜನರು ತುತೂರಿಗಳನ್ನೂದಿ, ಆ ಕೊಡಗಳನ್ನು ಒಡೆದು ಬಿಟ್ಟು, ಪಂಜುಗಳನ್ನು ತಮ್ಮ ಎಡಗೈಯಲ್ಲಿಯೂ ಊದುವ ತುತೂರಿಗಳನ್ನು ತಮ್ಮ ಬಲಗೈಯಲ್ಲಿಯೂ ಹಿಡಿದು, ಯೆಹೋವನ ಕತ್ತಿ, ಗಿದ್ಯೋನನ ಕತ್ತಿ ಎಂದು ಕೂಗಿ, ದಂಡಿನ ಸುತ್ತಲು ಅವರವರು ತಮ್ಮ ತಮ್ಮ ಸ್ಥಳದಲ್ಲಿ ನಿಂತರು. ಆಗ ಮಿದ್ಯಾನ್ಯರ ದಂಡೆಲ್ಲಾ ಓಡಿ, ಆರ್ಭಟಿಸಿ, ಓಡಿ ಹೋದರು. ಆ ಮುನ್ನೂರು ಜನರು ತುತೂರಿಗಳನ್ನು ಊದುವಾಗ, ಯೆಹೋವನು ದಂಡಿನಲ್ಲಿ ಎಲ್ಲೆಲ್ಲಿಯೂ ಒಬ್ಬನ ಕತ್ತಿಯನ್ನು ಒಬ್ಬನ ಮೇಲೆ ಬರ ಮಾಡಿದನು. ಮತ್ತು ಇಸ್ರಯೇಲ್ಯರು ಮಿದ್ಯಾನ್ಯರನ್ನು ಹಿಂದಟ್ಟಿ, ಜಯಿಸಿದರು.

ಆ ಮೇಲೆ ಇಸ್ರಯೇಲ್ಯರು ಗಿದ್ಯೋನನಿಗೆ: ನೀನು ನಮ್ಮನ್ನು ಮಿದ್ಯಾನ್ಯರ ಕೈಯಿಂದ ತಪ್ಪಿಸಿ ರಕ್ಷಿಸಿದ್ದರಿಂದ ನೀನೂ ನಿನ್ನ ಕುಮಾರನೂ ನಿನ್ನ ಕುಮಾರನ ಕುಮಾರನೂ ನಮ್ಮನ್ನು ಆಳ ಬೇಕು, ಅಂದರು. ಗಿದ್ಯೋನನು ಅವರಿಗೆ: ನಾನು ನಿಮ್ಮನ್ನು ಆಳುವದಿಲ್ಲ, ನನ್ನ ಮಗನು ನಿಮ್ಮನ್ನು ಆಳುವದಿಲ್ಲ, ಯೆಹೋವನೇ ನಿಮ್ಮನ್ನು ಆಳುವನು ಎಂತ ಹೇಳಿದನು.

ಬಾ. 93. II. 31.

---

## ೩೩. ರೂತಳು.

(ರೂತು. ೧—೪.)

ನ್ಯಾಯಾಧಿಪತಿಗಳು ನ್ಯಾಯ ತೀರಿಸುವ ದಿನಗಳಲ್ಲಿ ದೇಶದಲ್ಲಿ ಬರ ಉಂಟಾಯಿತು. ಆಗ ಬೆತ್ಲೆಹೇಮಿನವನಾದ ಒಬ್ಬ ಮನುಷ್ಯನು ತನ್ನ ಹೆಂಡತಿಯನ್ನೂ ತನ್ನ ಇಬ್ಬರು ಮಕ್ಕಳನ್ನೂ ಕರ ಕೊಂಡು, ಮೋವಾಬ್ ದೇಶದಲ್ಲಿ ಪರವಾಸ ಮಾಡ ಹೋದನು. ಅವನ

ಹೆಸರು ಎಲಿಮೇಲೆಕನು; ಅವನ ಹೆಂಡತಿಯ ಹೆಸರು ನವೋಮಿ. ಎಲಿಮೇಲೆಕನು ಅಲ್ಲಿ ಸತ್ತು ಹೋದನು. ಅವನ ಮಕ್ಕಳು ಒರ್ಪಳೂ ರೂತಳೂ ಎಂಬ ಹೆಸರುಳ್ಳ ಮೋವಾಬ್ ದೇಶದ ಸ್ತ್ರೀಯರನ್ನು ತಮಗೆ ಹೆಂಡರಾಗಿ ತಕ್ಕೊಂಡರು. ಅವರು ಹೆಚ್ಚು ಕಡಿಮೆ ಹತ್ತು ವರುಷ ಅಲ್ಲಿ ವಾಸವಾಗಿದ್ದ ಮೇಲೆ ಅವರಿಬ್ಬರೂ ಸತ್ತು ಹೋದರು. ಆಗ ನವೋಮಿ ತನ್ನ ಸೊಸೆಯರ ಸಂಗಡ ಮೋವಾಬ್ ದೇಶದಿಂದ ಯೆಹೂದ ದೇಶಕ್ಕೆ ತಿರಿಗಿ ಹೋಗುವದಕ್ಕೋಸ್ಕರ, ತಾನು ಇದ್ದ ಸ್ಥಳವನ್ನು ಬಿಟ್ಟು, ಹೊರಟಳು. ಯಾಕಂದರೆ ಯೆಹೋವನು ತನ್ನ ಜನರಿಗೆ ಆಹಾರವನ್ನು ಕೊಡುವ ಹಾಗೆ ಅವರನ್ನು ದರ್ಶಿಸಿದನೆಂದು ಕೇಳಿದ್ದಳು. ಅವರು ಮಾರ್ಗದಲ್ಲಿ ನಡಿಯುವಾಗ, ನವೋಮಿ ತನ್ನ ಇಬ್ಬರು ಸೊಸೆಯರಿಗೆ: ನೀವು ಒಬ್ಬೊಬ್ಬಳು ತನ್ನ ತಾಯಿಯ ಮನೆಗೆ ತಿರಿಗಿ ಹೋಗಿರಿ; ನೀವು ಸತ್ತವರಿಗೂ ನನಗೂ ಮಾಡಿದ ಹಾಗೆಯೇ, ಯೆಹೋವನು ನಿಮಗೆ ಕೃಪೆಯಿಂದ ಮಾಡಲಿ ಎಂದು ಹೇಳಿ, ಅವರನ್ನು ಮುದ್ದಿಟ್ಟು ಕೊಂಡಳು. ಆಗಲವರು ಶಬ್ದವನ್ನೆತ್ತಿ ಅತ್ತರು. ಮತ್ತು ಒರ್ಪಳು ತನ್ನ ಅತ್ತೆಯನ್ನು ಮುದ್ದಿಟ್ಟು ಕೊಂಡು, ತಿರುಗಿ ಹೋದಳು. ಆದರೆ ರೂತಳು ಪ್ರತ್ಯುತ್ತರವಾಗಿ: ನಿನ್ನನ್ನು ಬಿಟ್ಟು ಹಿಂದಕ್ಕೆ ಹೋಗ ನನ್ನನ್ನು ಬೇಡಿ ಕೊಳ್ಳ ಬೇಡ; ಯಾಕಂದರೆ ನೀನು ಎಲ್ಲಿಗೆ ಹೋಗುವಿಯೋ, ಅಲ್ಲಿಗೆ ನಾನು ಬರುವೆನು; ನೀನು ಎಲ್ಲಿ ಇಳುಕೊಳ್ಳುವಿಯೋ, ಅಲ್ಲಿ ನಾನು ಇಳುಕೊಳ್ಳುವೆನು; ನಿನ್ನ ಜನರೇ ನನ್ನ ಜನರು; ನಿನ್ನ ದೇವರೇ ನನ್ನ ದೇವರು. ನೀನು ಎಲ್ಲಿ ಸಾಯುತ್ತೀಯೋ, ಅಲ್ಲಿ ನಾನು ಸಾಯುತ್ತೇನೆ; ಮರಣವು ಮಾತ್ರ ನಿನ್ನನ್ನೂ ನನ್ನನ್ನೂ ಪ್ರತ್ಯೇಕಿಸ ಬಹುದು, ಅಂದಳು. ಹಾಗೆಯೇ ಇಬ್ಬರು ಬೆತ್ಲೆಹೇಮಿಗೆ ಹೋದರು. ಅವರು ಅಲ್ಲಿ ಪ್ರವೇಶಿಸುವಾಗ, ಪಟ್ಣವೆಲ್ಲಾ ಇವರಿಗೋಸ್ಕರ ಗದ್ದಲಾಗಿ: ಇವಳು ನವೋಮಿಯೋ? ಅಂದರು. ಆಗಲಿವಳು ಅವರಿಗೆ: ನೀವು ನನ್ನನ್ನು ನವೋಮಿ (ಅಂದರೆ ಸಂತೋಷದವಳು) ಎಂದು ಕರೆಯ ಬೇ

ಡಿರಿ, ನೀವು ನನ್ನನ್ನು ಮಾರಳು (ಅಂದರೆ ದುಃಖದವಳು) ಎಂದು ಕರೆಯಿರಿ; ಯಾಕಂದರೆ ನಾನು ಪರಿಪೂರ್ಣಳಾಗಿ ಹೊರಟು ಹೋದೆನು; ಆದರೆ ಯೆಹೋವನು ನನ್ನನ್ನು ಏನೂ ಇಲ್ಲದೆ ತಿರಿಗಿ ಬರ ಮಾಡಿದ್ದಾನೆ, ಅಂದಳು. ಆ ಸಮಯದಲ್ಲಿ ಜವೆಗೋಧಿಯ ಸುಗ್ಗಿಯ ಕಾಲ ಆರಂಭವಾಯಿತು. ಆಗ ರೂತಳು ಹಕ್ಕಲ ತೆನೆಗಳನ್ನು ಆದು ಕೊಳ್ಳುವದಕ್ಕೆ ಹೊಲಕ್ಕೆ ಹೋದಳು. ಅವಳು ಇದ್ದ ಹೊಲದ ಭಾಗವು ಎಲಿಮೇಲೆಕನ ಗೋತ್ರದವನಾದ ಬೋವಜನದಾಗಿತ್ತು. ಮತ್ತು ಇಗೋ, ಬೋವಜನು ಬೆತ್ಲೆಹೇಮಿನಿಂದ ಬಂದು, ಕೊಯ್ಯುವವರಿಗೆ: ಯೆಹೋವನು ನಿಮ್ಮ ಸಂಗಡ ಇರಲಿ, ಅಂದನು. ಅದಕ್ಕವರು: ಯೆಹೋವನು ನಿನ್ನನ್ನು ಆಶೀರ್ವದಿಸಲಿ, ಅಂದರು. ಮತ್ತು ಬೋವಜನು ತನ್ನ ಸೇವಕನಿಗೆ: ಈ ಹುಡುಗಿ ಯಾರವಳು? ಎಂದು ಕೇಳಿದನು. ಆ ಸೇವಕನು ಪ್ರತ್ಯುತ್ತರವಾಗಿ: ಇವಳು ಮೋವಾಬ್ ಶೀಮೆಯಿಂದ ನವೋಮಿಯ ಸಂಗಡ ಬಂದ ಮೋವಾಬ್ಯಳಾದ ಹುಡುಗಿ, ಅಂದನು. ಆಗ ಬೋವಜನು ರೂತಳಿಗೆ: ನನ್ನ ಮಗಳೇ, ನೀನು ಹಕ್ಕಲಾದು ಕೊಳ್ಳ ಅನ್ಯರ ಹೊಲಕ್ಕೆ ಹೋಗದೆ, ಇಲ್ಲಿಯೇ ನನ್ನ ದಾಸಿಗಳ ಸಂಗಡ ಕೂಡಿ ಕೊಂಡಿರು; ನಿನಗೆ ದಾಹವಾದರೆ, ಗಡಿಗೆಗಳ ಬಳಿಗೆ ಹೋಗಿ, ನೀರನ್ನು ಕುಡಿ; ಉಣ್ಣುವ ವೇಳೆಯಲ್ಲಿ ಇಲ್ಲಿ ಹತ್ತರ ಬಂದು ಉಣ್ಣು; ನಿನ್ನ ಗಂಡನು ಸತ್ತ ತರುವಾಯ, ನೀನು ನಿನ್ನ ಅತ್ತೆಗೋಸ್ಕರ ಮಾಡಿದ್ದೆಲ್ಲಾ ನನಗೆ ತಿಳಿದದೆ; ಯೆಹೋವನು ನೀನು ಮಾಡಿದ್ದಕ್ಕೆ ನಿನಗೆ ಬದಲು ಕೊಡಲಿ; ಅವನ ರೆಕ್ಕೆಗಳ ಕೆಳಗೆ ಆಶ್ರಯಿಸಿ ಕೊಳ್ಳ ಬಂದ ನಿನಗೆ ಅವನಿಂದ ಬರುವ ನಿನ್ನ ಸಂಬಳ ಪರಿಪೂರ್ಣವಾಗಿರಲಿ, ಅಂದನು. ಮತ್ತು ಅವಳು ಕೊಯ್ಯುವವರ ಬಳಿಯಲ್ಲಿ ಕೂತು ಕೊಂಡು, ತಿಂದು, ತೃಪ್ತಿ ಪಟ್ಟು, ಇನ್ನೂ ಮಿಗಿಸಿಟ್ಟಳು. ಅವಳು ಹಕ್ಕಲಾದು ಕೊಳ್ಳ ಏಳುವಾಗ, ಬೋವಜನು ತನ್ನ ಸೇವಕನಿಗೆ: ಇವಳು ಕೊಯಿದ ಸೂಡುಗಳ ಮಧ್ಯದಲ್ಲಿ ಹಕ್ಕಲಾದು ಕೊಳ್ಳಲಿ; ಅವಳು ಹಕ್ಕಲಾದು ಕೊಳ್ಳುವ ಹಾಗೆ ನೀ

ವು ಅವಳಿಗೋಸ್ಕರ ಸೂಡುಗಳಲ್ಲಿ ಕೆಲವು ಜಾರ ಬಿಡಿರಿ; ಅವಳನ್ನು ಗದರಿಸ ಬೇಡಿರಿ, ಅಂದನು. ಸಾಯಂಕಾಲದಲ್ಲಿ ಅವಳು ಹಕ್ಕಲಾದು ಕೊಂಡದ್ದನ್ನು ಅವಳ ಅತ್ತೆಯು ನೋಡಿದಾಗ, ಇವಳು: ನೀನು ಈ ಹೊತ್ತು ಎಲ್ಲಿ ಹಕ್ಕಲಾದು ಕೊಂಡಿ? ಎಂದು ಕೇಳಿದಳು. ಅದಕ್ಕೆ ರೂತಳು, ತಾನು ಯಾವನ ಹತ್ತರ ಕೆಲಸ ಮಾಡಿದಳೋ, ತನ್ನ ಅತ್ತೆಗೆ ತಿಳಿಸಿದಳು. ನವೋಮಿ ತನ್ನ ಸೊಸೆಗೆ: ಜೀವಿಸಿರುವವರಿಗೋಸ್ಕರವೂ ಸತ್ತವರಿಗೋಸ್ಕರವೂ ಮಾಡಿದ ಕೃಪೆಯನ್ನು ಬಿಡದೆ ಇರುವ ಆ ಮನುಷ್ಯನು ನಮ್ಮ ನೆಂಟನಾಗಿದ್ದಾನೆ, ಅಂದಳು. ಆ ಮೇಲೆ ರೂತಳು ತನ್ನ ಅತ್ತೆ ತನಗೆ ಆಜ್ಞಾಪಿಸಿದ ಪ್ರಕಾರ ಬೋವಜನ ಬಳಿಗೆ ಹೋಗಿ, ಅವನಿಗೆ: ನಿನ್ನ ದಾಸಿಯ ಮೇಲೆ ನಿನ್ನ ರೆಕ್ಕೆ ಚಾಚು; ಯಾಕಂದರೆ ನೀನು ಬಾಧ್ಯನು, ಅಂದಳು. (ಅದು ಹ್ಯಾಗಂದರೆ ಇಸ್ರಯೇಲ್ಯರಲ್ಲಿ ಇದ್ದ ನೇಮದ ಪ್ರಕಾರ ಒಬ್ಬನು ಮಕ್ಕಳಿಲ್ಲದೆ ಸತ್ತು ಹೋದರೆ, ಅವನ ಸಹೋದರನಾಗಲಿ ಬೇರೊಬ್ಬ ನೆಂಟನಾಗಲಿ ಸತ್ತು ಹೋದವನ ವಿಧವೆಯನ್ನು ಮದುವೆ ಮಾಡಿ ಕೊಳ್ಳ ಬೇಕಿತ್ತು.) ಆಗ ಬೋವಜನು ಪಟ್ಣದ ಹಿರಿಯರಲ್ಲಿ ಹತ್ತು ಮಂದಿಯನ್ನು ಕರೆದು, ಅವರನ್ನು ಸಾಕ್ಷಿಗಳಾಗಿ ಇಟ್ಟು, ರೂತಳನ್ನು ತನಗೆ ಹೆಂಡತಿಯಾಗಿ ತೆಕ್ಕೊಂಡನು. ಅವಳು ಒಬ್ಬ ಮಗನನ್ನು ಹೆತ್ತಳು. ಅವನಿಗೆ ಓಬೇದನೆಂದು ಹೆಸರಿಟ್ಟರು. ಇವನೇ ದಾವೀದನ ತಂದೆಯಾದ ಇಶಾಯನಿಗೆ ತಂದೆಯಾದವನು.

III. 44. ಬಾ. 155.

---

## ೩೪. ಏಲಿಯೂ ಸಮುವೇಲನೂ.

(೧ ಸಮು. ೧—೭.)

(ಕ್ರಿಸ್ತನ ಜನ್ಮದ ಮುಂಚೆ ಶುಮಾರು ೧೧೦೦.)

೧) ಇಸ್ರಯೇಲ್ಯರ ಮೇಲೆ ನಾಲ್ವತ್ತು ವರುಷ ಪರಿಯಂತರ ನ್ಯಾಯಾಧಿಪತಿಯಾಗಿದ್ದ ಪ್ರಧಾನಯಾಜಕನಾದ ಏಲಿಯ ಸಮಯ

ದಲ್ಲಿ ಎಲ್ಕಾನನೆಂಬ ಒಬ್ಬ ಮನುಷ್ಯನಿದ್ದನು. ಅವನಿಗೆ ಹನ್ನಳೆಂಬ ಹೆಂಡತಿ ಇದ್ದಳು. ಇವಳಿಗೆ ಮಕ್ಕಳು ಇರಲಿಲ್ಲ. ಎಲ್ಕಾನನು ಯೆಹೋವನಿಗೆ ಬಲಿ ಅರ್ಪಿಸಲಿಕ್ಕೆ ಪ್ರತಿ ವರುಷ ಷಿಲೋವಿಗೆ ಹೋಗುತ್ತಿದ್ದನು; ಹನ್ನಳೂ ಅವನ ಸಂಗಡ ಹೋಗುತ್ತಿದ್ದಳು. ಹೀಗಿರಲಾಗಿ ಅವರು ಒಂದಾನೊಂದು ವರುಷ ಷಿಲೋವಿನಲ್ಲಿ ಬಲಿ ಅರ್ಪಿಸಿ, ಊಟಕ್ಕೆ ಕೂತು ಕೊಂಡಿರುವಾಗ, ಅವಳು ಉಣ್ಣದೆ ದುಖ್ಖದಿಂದ ಇದ್ದಳು. ಆಗಲವರು ಉಂಡು ಕುಡಿದ ತರುವಾಯ ಹನ್ನಳು ಎದ್ದು ಹೋಗಿ, ಯೆಹೋವನನ್ನು ಪ್ರಾರ್ಥಿಸಿ, ಅತ್ತೇ ಅತ್ತು, ಹರಿಕೆಯನ್ನು ಮಾಡಿ ಕೊಂಡು, ಹೇಳಿದ್ದೇನಂದರೆ:—ಸೈನ್ಯಗಳ ಯೆಹೋವನೇ, ನೀನು ನಿಶ್ಚಯವಾಗಿ ನಿನ್ನ ದಾಸಿಯ ದೀನತೆಯನ್ನು ನೋಡಿ, ಅವಳನ್ನು ಮರೆಯದೆ, ನಿನ್ನ ದಾಸಿಗೆ ಗಂಡು ಕೂಸನ್ನು ಕೊಟ್ಟರೆ, ಅವನನ್ನು ಅವನು ಬದುಕುವ ಸಕಲ ದಿವಸಗಳಲ್ಲಿ ಯೆಹೋವನಿಗೆ ಒಪ್ಪಿಸಿ ಕೊಡುವೆನೆಂದು, ಹೇಳಿದಳು. ಅವಳು ಹೆಚ್ಚಾಗಿ ಪ್ರಾರ್ಥನೆ ಮಾಡುತ್ತಿರುವಾಗ, ಏಲಿಯು ಅವಳ ಬಾಯಿಯನ್ನು ನೋಡಿ ಕೊಂಡಿದ್ದನು. ಅವಳು ತನ್ನ ಹೃದಯದಲ್ಲಿ ಮಾತಾಡುತ್ತಾ, ತನ್ನ ತುಟಿಗಳನ್ನು ಮಾತ್ರ ಆಡಿಸುತ್ತಾ ಇದ್ದದರಿಂದ, ಅವಳ ಶಬ್ದವು ಕೇಳಲಿಲ್ಲ. ಆದದರಿಂದ ಏಲಿಯು ಅವಳು ಅಮಲೇರಿದವಳಾಗಿದ್ದಾಳೆಂದು ನೆನಸಿ, ಅವಳಿಗೆ: ಎಷ್ಟು ಪರಿಯಂತರ ಅಮಲೇರಿದವಳಾಗಿರುವಿ? ಅಂದನು. ಅದಕ್ಕೆ ಹನ್ನಳು ಅವನಿಗೆ ಪ್ರತ್ಯುತ್ತರವಾಗಿ: ನನ್ನ ಸ್ವಾಮಿಯೇ, ಹಾಗಲ್ಲ; ನಾನು ದುಖ್ಖದ ಆತ್ಮವುಳ್ಳ ಸ್ತ್ರೀಯಾಗಿದ್ದೇನೆ; ನಾನು ಯೆಹೋವನ ಮುಂದೆ ನನ್ನ ಪ್ರಾಣವನ್ನು ಹೊಯಿದು ಬಿಟ್ಟೆನು, ಅಂದಳು. ಆಗ ಏಲಿಯು ಅವಳಿಗೆ: ಸಮಾಧಾನದಿಂದ ಹೋಗು; ಇಸ್ರಯೇಲಿನ ದೇವರು ನೀನು ಅವನಿಂದ ಬೇಡಿ ಕೊಂಡ ನಿನ್ನ ವಿಜ್ಞಾಪನೆಯನ್ನು ನಿನಗೆ ಕೊಡಲಿ, ಅಂದನು.

ಮತ್ತು ಅವರು ಉದಯದಲ್ಲಿ ಎದ್ದು, ಯೆಹೋವನ ಮುಂದೆ ಅಡ್ಡ ಬಿದ್ದು, ತಿರುಗಿ ಕೊಂಡು, ತಮ್ಮ ಮನೆಗೆ ಬಂದರು. ಆಗ ಯೆ

ಹೋವನು ಹನ್ನಳನ್ನು ಜ್ಞಾಪಕ ಮಾಡಿ ಕೊಂಡದರಿಂದ, ಅವಳು ಒಬ್ಬ ಮಗನನ್ನು ಹೆತ್ತು: ನಾನು ಅವನನ್ನು ಯೆಹೋವನ ಬಳಿಯಲ್ಲಿ ಕೇಳಿ ಕೊಂಡೆನು ಎಂದು ಹೇಳಿ, ಅವನಿಗೆ ಸಮುವೇಲನು (ಅಂದರೆ ದೇವದತ್ತ) ಎಂದು ಹೆಸರಿಟ್ಟಳು. ಹನ್ನಳು ಅವನನ್ನು ಮೊಲೆ ಬಿಡಿಸಿದ ತರುವಾಯ, ಅವನನ್ನು ತನ್ನ ಸಂಗಡ ತಕ್ಕೊಂಡು, ಶಿಲೋವಿನಲ್ಲಿರುವ ಯೆಹೋವನ ಮನೆಗೆ ಹೋಗಿ, ಮಗುವನ್ನು ಏಲಿಯ ಬಳಿಗೆ ತಂದಳು. ಮತ್ತು ಅವಳು ಏಲಿಗೆ: ನನ್ನ ಸ್ವಾಮಿಯೇ, ಯೆಹೋವನಿಗೆ ಪ್ರಾರ್ಥನೆ ಮಾಡಿ, ಇಲ್ಲಿ ನಿನ್ನ ಬಳಿಯಲ್ಲಿ ನಿಂತಿದ್ದ ಸ್ತ್ರೀಯು ನಾನೇ; ಈ ಮಗನಿಗೋಸ್ಕರ ಮಾಡಿದ ವಿಜ್ಞಾಪನೆಯನ್ನು ಆತನು ನನಗೆ ಕೊಟ್ಟನು; ಆದದರಿಂದ ನಾನು ಅವನನ್ನು ಅವನು ಜೀವಿಸಿರುವ ಪರಿಯಂತರ ಯೆಹೋವನಿಗೆ ಒಪ್ಪಿಸಿದೆನು ಎಂದು ಹೇಳಿದಳು. ಮತ್ತು ಯೆಹೋವನಿಗೆ ಒಂದು ಕೀರ್ತನೆಯನ್ನು ಹಾಡಿದಳು.



೨) ಏಲಿಯ ಕುಮಾರರು ಯೆಹೋವನನ್ನು ಅರಿಯದೆ, ಬೆಲಿಯಾಳನ ಮಕ್ಕಳು (ಅಂದರೆ ಲುಚ್ಛಾ ಮನುಷ್ಯರು) ಆಗಿದ್ದರು. ಜನರು ಬಲಿ ಅರ್ಪಿಸುವಾಗ, ಅವರು ದೇವರ ನೇಮಕ್ಕೆ ವಿರೋಧವಾಗಿ ಮನಸ್ಸು ಬಂದ ಹಾಗೆ ಮಾಡಿ ಅರ್ಪಿಸಿದ ಬಲಿಯ ಮಾಂಸವನ್ನು ಬಲಾತ್ಕಾರದಿಂದ ತೆಗೆದು ಕೊಂಡು, ಜನರು ಯೆಹೋವನ

ಅರ್ಪಣೆಯನ್ನು ಅಸಂಹಿಸಿ ಕೊಳ್ಳುವಂತೆ ಕಾರಣವಾದರು. ಏಲಿಯು ಇದನ್ನು ಕೇಳಿ, ಅವರಿಗೆ ಹೇಳಿದ್ದೇನಂದರೆ:—ನೀವು ಇಂಥಾ ಕಾರ್ಯಗಳನ್ನು ಮಾಡುವದೇನು? ನನ್ನ ಕುಮಾರರೇ, ಬೇಡಿರಿ! ಯಾಕಂದರೆ ನಾನು ಕೇಳುವ ವರ್ತಮಾನ ಒಳ್ಳೇದಲ್ಲ; ಯೆಹೋವನ ಜನ ಮೀರಿ ನಡಿಯುವ ಹಾಗೆ ಮಾಡುತ್ತೀರಿ. ಆದರೆ ಅವರು ತಮ್ಮ ತಂದೆಯ ಮಾತನ್ನು ಕೇಳದೆ ಹೋದರು. ಆಗ ದೇವರ ಮನುಷ್ಯನು (ಅಂದರೆ ಪ್ರವಾದಿಯು) ಏಲಿಯ ಬಳಿಗೆ ಬಂದು, ಅವನಿಗೆ: ಯೆಹೋವನು ಹೇಳುವದೇನಂದರೆ—ನನಗಿಂತ ಹೆಚ್ಚಾಗಿ ನಿನ್ನ ಮಕ್ಕಳನ್ನು ಘನ ಪಡಿಸುವದೇನು? ನಿನ್ನ ಮನೆಯವರು ಎಂದೆಂದಿಗೂ ನನ್ನ ಸನ್ನಿಧಿಯಲ್ಲಿ (ಯಾಜಕರಾಗಿ) ನಡೆದು ಕೊಳ್ಳುವರೆಂದು ನಾನು ಹೇಳೇ ಹೇಳಿ ಇದ್ದೆನು. ಆದರೆ ಈಗ ಅದು ನನಗೆ ದೂರವಾಗಿರಲಿ; ಯಾಕಂದರೆ ನನ್ನನ್ನು ಘನ ಪಡಿಸುವವರನ್ನು ನಾನು ಘನ ಪಡಿಸುವೆನು; ನನ್ನನ್ನು ತಿರಸ್ಕರಿಸುವವರು ಉದಾಸೀನರಾಗುವರು. ನಿನ್ನ ಮನೆಯ ಗುಂಪೆಲ್ಲಾ ಪ್ರಾಯಸ್ಥರಾದಾಗಲೇ ಸಾಯುವರು. ಇದಲ್ಲದೆ ಇಗೋ, ನಿನ್ನ ಇಬ್ಬರು ಮಕ್ಕಳು ಒಂದೇ ದಿವಸದಲ್ಲಿ ಸಾಯುವರು. ಮತ್ತು ನಾನು ನನ್ನ ಹೃದಯಕ್ಕೆ ಸಮರ್ಪಕವಾದ ಹಾಗೆ ಮಾಡುವ ನಂಬಿಕೆಯುಳ್ಳ ಒಬ್ಬ ಯಾಜಕನನ್ನು ಎಬ್ಬಿಸುವೆನು ಎಂದು ಹೇಳಿದನು.

ಸಮುವೇಲ್ ಎಂಬ ಹುಡುಗನು ಏಲಿಯ ಮುಂದೆ ಯೆಹೋವನಿಗೆ ಸೇವೆ ಮಾಡಿದ ದಿನಗಳಲ್ಲಿ ಯೆಹೋವನ ವಾಕ್ಯವು ಅಮೂಲ್ಯವಾಗಿತ್ತು; ವಿಸ್ತಾರವಾದ ದರ್ಶನವು ಇರಲಿಲ್ಲ. ಒಂದು ದಿವಸದಲ್ಲಿ ಸಮುವೇಲನು ಯೆಹೋವನ ಮಂದಿರದಲ್ಲಿ ಮಲಗಿದಾಗ, ಯೆಹೋವನು ಸಮುವೇಲನನ್ನು ಕರೆದನು. ಅದಕ್ಕವನು ಏಲಿಯ ಬಳಿಗೆ ಓಡಿ ಬಂದು: ಇಗೋ, ಇದ್ದೇನೆ; ನೀನು ನನ್ನನ್ನು ಕರೆದಿಯಲ್ಲಾ? ಅಂದನು. ಏಲಿಯು ಅವನಿಗೆ: ನನ್ನ ಮಗನೇ, ನಾನು ಕರಿಯಲಿಲ್ಲ; ನೀನು ಹೋಗಿ, ಮಲಗಿಕೋ, ಅಂದನು. ಅವನು ಹೋಗಿ,

ಹಾಗೆಯೇ ಮಲಗಿದನು. ಮತ್ತು ಯೆಹೋವನು: ಸಮುವೇಲನೇ, ಎಂದು ತಿರಿಗಿ ಕರೆದನು. ಆಗ ಸಮುವೇಲನು ಎದ್ದು, ಏಲಿಯ ಬಳಿಗೆ ಬಂದು: ಇಗೋ, ಇದ್ದೇನೆ; ನನ್ನನ್ನು ಕರೆದಿಯಲ್ಲಾ? ಅಂದನು. ಅದಕ್ಕವನು: ನಾನು ಕರೆಯಲಿಲ್ಲ; ನೀನು ಹೋಗಿ, ಮಲಗಿಕೋ, ಅಂದನು. ಆದರೆ ಸಮುವೇಲನು ಆ ವರಿಗೂ ಯೆಹೋವನನ್ನು ಅರಿತವನಲ್ಲ; ಮತ್ತು ಯೆಹೋವನ ವಾಕ್ಯವು ಅವನಿಗೆ ತಿಳಿಯಲಿಲ್ಲ. ಯೆಹೋವನು ಮತ್ತೂ ಮೂರನೇ ಸಾರಿ, ಸಮುವೇಲನೇ, ಎಂದು ಕರೆದನು. ಅವನು ಎದ್ದು, ಏಲಿಯ ಬಳಿಗೆ ಬಂದು: ಇಗೋ, ಇದ್ದೇನೆ; ಯಾಕಂದರೆ ನನ್ನನ್ನು ಕರೆದಿ, ಅಂದನು. ಆಗ ಏಲಿಯು, ಯೆಹೋವನು ಹುಡುಗನನ್ನು ಕರೆದನೆಂದು ಗ್ರಹಿಸಿಕೊಂಡು, ಸಮುವೇಲನಿಗೆ: ನೀನು ಹೋಗಿ, ಮಲಗು; ಅವನು ನಿನ್ನನ್ನು ಕರೆದರೆ,—ಯೆಹೋವನೇ, ಮಾತಾಡು; ಯಾಕಂದರೆ ನಿನ್ನ ದಾಸನು ಕೇಳುತ್ತಾನೆ ಎಂದು ಹೇಳು, ಅಂದನು. ಹಾಗೆಯೇ ಸಮುವೇಲನು ಹೋಗಿ, ತನ್ನ ಸ್ಥಳದಲ್ಲಿ ಮಲಗಿದನು. ಆಗ ಯೆಹೋವನು ಬಂದು, ಮೊದಲಿನ ಹಾಗೆಯೇ: ಸಮುವೇಲನೇ, ಸಮುವೇಲನೇ, ಎಂದು ಕರೆದನು. ಅದಕ್ಕೆ ಸಮುವೇಲನು: ಮಾತಾಡು, ನಿನ್ನ ದಾಸನು ಕೇಳುತ್ತಾನೆ, ಅಂದನು. ಮತ್ತು ಯೆಹೋವನು ಸಮುವೇಲನಿಗೆ ಹೇಳಿದ್ದೇನಂದರೆ:—ಇಗೋ, ನಾನು ಇಸ್ರಯೇಲಿನಲ್ಲಿ ಒಂದು ಕಾರ್ಯವನ್ನು ಮಾಡುವೆನು; ಅದನ್ನು ಕೇಳುವವನ ಎರಡು ಕಿವಿಗಳು ಘಣಘಣಿಸುವವು. ಯಾಕಂದರೆ ನಾನು ಏಲಿಯ ಮನೆಯನ್ನು ಕುರಿತು ಹೇಳಿದ್ದನ್ನೆಲ್ಲಾ ಅವರಿಗೆ ಆ ದಿವಸದಲ್ಲಿ ಮಾಡುತ್ತೇನೆ; ಯಾಕಂದರೆ ಅವನು, ತನ್ನ ಕುಮಾರರು ತಮ್ಮನ್ನು ಶಾಪಕ್ಕೆ ಈಡಾಗಿ ಮಾಡಿ ಕೊಂಡಾಗ, ಅವರಿಗೆ ಗಂಟು ಮೋರೆ ತೋರಿಸಲಿಲ್ಲ. ಸಮುವೇಲನು ಈ ದರ್ಶನವನ್ನು ಏಲಿಗೆ ತಿಳಿಸ ಭಯ ಪಟ್ಟನು. ಆದರೆ ಏಲಿಯು ಅವನನ್ನು ಕರೆದು, ಅವನಿಗೆ: ಯೆಹೋವನು ನಿನಗೆ ಹೇಳಿದ ಮಾತೇನು? ನನಗೆ ಅದನ್ನು ಮಾಜ ಬೇಡ, ಅಂದನು. ಹಾಗೆ

ಯೇ ಸಮುವೇಲನು ಅವನಿಗೆ ಒಂದನ್ನೂ ಮಾಜದೆ, ಆ ಮಾತುಗಳನ್ನೆಲ್ಲಾ ತಿಳಿಸಿದನು. ಅದಕ್ಕೆ ಏಲಿಯು: ಆತನು ಯೆಹೋವನು, ತನ್ನ ಕಣ್ಣುಗಳಿಗೆ ಒಳ್ಳೇದಾಗಿ ತೋರುವದನ್ನು ಮಾಡಲಿ, ಅಂದನು. ಆದರೆ ಸಮುವೇಲನು ಬೆಳಿಯುತ್ತಾ ಬಂದನು; ಮತ್ತು ಯೆಹೋವನು ಅವನ ಸಂಗಡ ಇದ್ದು, ಅವನ ವಾಕ್ಯಗಳಲ್ಲಿ ಒಂದಾದರೂ ಭೂಮಿಗೆ ಬಿದ್ದು ಹೋಗ ಗೊಡಿಸಲಿಲ್ಲ. ಮತ್ತು ಸಮುವೇಲನು ಯೆಹೋವನ ಪ್ರವಾದಿಯಾಗಿದ್ದಾನೆಂದು ಇಸ್ರಯೇಲ್ಯರೆಲ್ಲರು ತಿಳಿದಿದ್ದರು.

೩) ಆ ಮೇಲೆ ಇಸ್ರಯೇಲ್ಯರು ಫಿಲಿಷ್ಟಿಯರಿಗೆ ವಿರೋಧವಾಗಿ ಯುದ್ಧಕ್ಕೆ ಹೊರಟು, ಅವರ ಮುಂದೆ ಸೋತು ಹೋದರು. ಆಗ ಇಸ್ರಯೇಲ್ಯರ ಹಿರಿಯರು: ಯೆಹೋವನ ಒಡಂಬಡಿಕೆಯ ಪೆಟ್ಟಿಗೆಯು ನಮ್ಮಲ್ಲಿ ಇದ್ದು, ನಮ್ಮನ್ನು ನಮ್ಮ ಶತ್ರುಗಳಿಂದ ತಪ್ಪಿಸಿ ರಕ್ಷಿಸುವ ಹಾಗೆ, ನಾವು ಅದನ್ನು ಶಿಲೋವಿನಿಂದ ತರುವ, ಅಂದರು. ಏಲಿಯ ಇಬ್ಬರು ಮಕ್ಕಳಾದ ಹೊಫ್ನಿಯೂ ಫಿನೆಹಾಸನೂ ದೇವರ ಒಡಂಬಡಿಕೆಯ ಪೆಟ್ಟಿಗೆಯ ಬಳಿಯಲ್ಲಿದ್ದರು. ಅದು ದಂಡಿನಲ್ಲಿ ಬಂದಾಗ ಇಸ್ರಯೇಲೆಲ್ಲಾ ಭೂಮಿ ಕಂಪಿಸುವ ಹಾಗೆ ಆರ್ಭಟಿಸಿದರು. ಆದರೆ ಇಸ್ರಯೇಲ್ಯರು ಅಪಜಯವಾಗಿ, ತಮ್ಮ ತಮ್ಮ ಗುಡಾರಗಳಿಗೆ ಓಡಿ ಹೋದರು. ಮತ್ತು ಇಸ್ರಯೇಲ್ಯರಲ್ಲಿ ಮೂವತ್ತು ಸಾವಿರ ಮಂದಿ ಬಿದ್ದರು; ಏಲಿಯ ಇಬ್ಬರು ಮಕ್ಕಳು ಸಹ ಸತ್ತರು. ದೇವರ ಪೆಟ್ಟಿಗೆಯನ್ನು ಫಿಲಿಷ್ಟಿಯರು ತಕ್ಕೊಂಡು ಹೋದರು. ಅದೇ ದಿವಸದಲ್ಲಿ ಒಬ್ಬನು ತನ್ನ ವಸ್ತ್ರಗಳನ್ನು ಹರೆದು ಕೊಂಡು, ಯುದ್ಧರಂಗದಿಂದ ಶಿಲೋವಿಗೆ ಓಡಿ ಬಂದನು. ಅವನು ಬಂದಾಗ, ಏಲಿಯು, ದೇವರ ಪೆಟ್ಟಿಗೆಗೋಸ್ಕರ ತನ್ನ ಹೃದಯವು ಹೆದರುತ್ತಾ ಇರುವದರಿಂದ, ಆಸನದ ಮೇಲೆ ಮಾರ್ಗದ ಬಳಿಯಲ್ಲಿ ಕೂತು ಕೊಂಡು ನಿರೀಕ್ಷಿಸಿ ಕೊಳ್ಳುತ್ತಾ ಇದ್ದನು. ಅವನು ತೊಂಭತ್ತೆಂಟು ವರುಷ ಪ್ರಾಯದವನಾಗಿದ್ದನು. ವರ್ತಮಾನ ತಂದವನು ಏಲಿಗೆ ತಿಳಿಸಿ, ಹೇಳಿದ್ದೆನಂದರೆ:—ಇಸ್ರಯೇಲ್ಯರು ಫಿಲಿಷ್ಟಿಯರ ಮುಂದೆ ಓಡಿ

ಹೋದರು; ಜನರಲ್ಲಿ ದೊಡ್ಡ ಸಂಹಾರವಾಯಿತು; ನಿನ್ನ ಇಬ್ಬರು ಮಕ್ಕಳು ಸತ್ತರು; ಇದಲ್ಲದೆ ದೇವರ ಪೆಟ್ಟಿಗೆಯು ತಕ್ಕೊಳ್ಳಲ್ಪಟ್ಟಿತು. ಏಲಿಯು ದೇವರ ಒಡಂಬಡಿಕೆಯ ಪೆಟ್ಟಿಗೆಯ ಮಾತು ಕೇಳಿದಾಗ, ಅವನು ಆಸನದ ಮೇಲಿಂದ ಬಾಗಲಿನ ಪಾರ್ಶ್ವವಾಗಿ ಹಿಂದಕ್ಕೆ ಬಿದ್ದು, ಗೋನು ಮುರಿದು, ಸತ್ತನು. ಫಿಲಿಷ್ಟಿಯರು ದೇವರ ಪೆಟ್ಟಿಗೆ



ಯನ್ನು ತಕ್ಕೊಂಡು, ಅಷ್ಡೋದಿಗೆ ವೈದರು. ಅಲ್ಲಿ ಅದನ್ನು ತಮ್ಮ ವಿಗ್ರಹವಾಗಿದ್ದ ದಗೋನನ ಮನೆಯಲ್ಲಿ ಅದರ ಬಳಿಯಲ್ಲಿಟ್ಟರು. ಆದರೆ ಅವರು ಮಾರಣೆ ದಿವಸ ಬೆಳಿಗ್ಯೆ ಎದ್ದಾಗ, ಇಗೋ, ದಗೋನ್ ಯೆಹೋವನ ಪೆಟ್ಟಿಗೆಯ ಮುಂದೆ ಬೋರ್ಲ ಬಿದ್ದಿತ್ತು. ಆಗಲ



ವರು ದಗೋನನ್ನು ತೆಗೆದು, ಅದನ್ನು ಅದರ ಸ್ಥಳದಲ್ಲಿ ತಿರಿಗಿ ಇಟ್ಟರು. ಅವರು ಮಾರಣೆ ದಿವಸ ಬೆಳಿಗ್ಯೆ ಬಂದಾಗ, ಇಗೋ, ದಗೋನ್ ತಿರಿಗಿ ಯೆಹೋವನ ಪೆಟ್ಟಿಗೆಯ ಮುಂದೆ ಬೋರ್ಲ ಬಿದ್ದಿತ್ತು; ಮತ್ತು ದಗೋನನ ತಲೆಯೂ ಎರಡು ಕೈಗಳೂ ಹೊಸ್ತಲ ಮೇಲೆ ಕಡಿಯಲ್ಪಟ್ಟು ಬಿದ್ದಿದ್ದವು; ಮತ್ಸ್ಯರೂಪ ಮಾತ್ರ ಅದಕ್ಕೆ ಉಳಿದಿತ್ತು. ಆದದರಿಂದ ಫಿಲಿಷ್ಟಿಯರು ಯೆಹೋವನ ಪೆಟ್ಟಿಗೆಯನ್ನು ಊರೂರಿಗೆ ಕಳುಹಿಸಿದರು. ಆದರೆ ಎಲ್ಲೆಲ್ಲಿಯೂ ಅವರಿಗೆ ಬಹಳ ತೊಂದರೆ ಆದದರಿಂದ ಏಳು ತಿಂಗಳಿನ ಮೇಲೆ ಅದನ್ನು ಕಾಣಿಕೆಗಳ ಕೂಡ ತಿರಿಗಿ ಇಸ್ರಯೇಲ್ಯರಿಗೆ ಕಳುಹಿಸಿದರು. ಇಸ್ರಯೇಲ್ಯರು ಅದನ್ನು ಕಿರ್ಯತ್ ಯಾರೀಮಿನಲ್ಲಿ ಇಟ್ಟರು.

ಪೆಟ್ಟಿಗೆ ತಿರಿಗಿ ಬಂದ ಮೇಲೆ, ಇಸ್ರಯೇಲ್ಯರು ಇನ್ನೂ ಇಪ್ಪತ್ತು ವರುಷ ಪರಿಯಂತರ ಫಿಲಿಷ್ಟಿಯರ ಕೈಯೊಳಗೆ ಇದ್ದರು. ಮತ್ತು ಅವರು ಯೆಹೋವನಿಗೆ ಕೂಗುತ್ತಿದ್ದರು. ಆಗ ಸಮುವೇಲನು ಇಸ್ರಯೇಲ್ಯರೆಲ್ಲರಿಗೆ ಹೇಳಿದ್ದೇನಂದರೆ:—ನೀವು ನಿಮ್ಮ ಪೂರ್ಣ ಹೃದಯದಿಂದ ಯೆಹೋವನ ಕಡೆಗೆ ತಿರುಗಿ, ನಿಮ್ಮಲ್ಲಿರುವ ಅನ್ಯ ದೇವರುಗಳನ್ನು ನಿಮ್ಮ ಮಧ್ಯದಲ್ಲಿಂದ ತೊರೆದು ಬಿಟ್ಟು, ನಿಮ್ಮ ಹೃದಯವನ್ನು ಯೆಹೋವನಿಗೆ ಸಿದ್ಧ ಮಾಡಿ, ಅವನೊಬ್ಬನನ್ನು ಸೇವಿಸಿದರೆ, ಅವನು ನಿಮ್ಮನ್ನು ಫಿಲಿಷ್ಟಿಯರ ಕೈಯೊಳಗಿಂದ ತಪ್ಪಿಸುವನು. ಆಗ ಇಸ್ರಯೇಲ್ ಮಕ್ಕಳು ಬಾಳೀಮನ್ನೂ ಅಷ್ಟರೋತನ್ನೂ ತೊರೆದು ಬಿಟ್ಟು, ಯೆಹೋವನೊಬ್ಬನನ್ನು ಸೇವಿಸಿದರು. ಮತ್ತು ಸಭೆಯೆಲ್ಲಾ ಮಿಜ್ಪೆಯಲ್ಲಿ ಕೂಡಿ ಬಂದು, ಆ ದಿವಸದಲ್ಲಿ ಉಪವಾಸ ಮಾಡಿ: ಯೆಹೋವನಿಗೆ ವಿರೋಧವಾಗಿ ಪಾಪ ಮಾಡಿದೆವು ಎಂದು, ಹೇಳಿದರು. ಆದರೆ ಸಮುವೇಲನು ಹಾಲು ಕುಡಿಯುವ ಕುರಿಮರಿಯನ್ನು ತೆಗೆದು ಕೊಂಡು, ಯೆಹೋವನಿಗೆ ಪೂರ್ಣ ಹೋಮವನ್ನು ಅರ್ಪಿಸಿ, ಇಸ್ರಯೇಲಿಗೋಸ್ಕರ ಕೂಗಿದನು. ಆಗ ಯೆಹೋವನು ಅವನ ಕೂಗನ್ನು ಕೇಳಿ, ಇಸ್ರಯೇಲ್ಯರಿಗೆ ವಿರೋಧವಾಗಿ ಯುದ್ಧ

ಮಾಡ ಬಂದ ಫಿಲಿಷ್ಟಿಯರ ಮೇಲೆ ದೊಡ್ಡ ಶಬ್ದದಿಂದ ಗುಡುಗಿ, ಅವರನ್ನು ಮುರಿಯ ಬಡಿದನು. ಹೀಗೆ ಅವರು ಇಸ್ರಯೇಲಿನ ಮುಂದೆ ಸೋತು ಹೋದರು. ಸಮುವೇಲನು ಒಂದು ಕಲ್ಲನ್ನು ತೆಗೆದು ಕೊಂಡು, ಮಿಚ್ಪೆಗೂ ಷೇನಿಗೂ ಮಧ್ಯದಲ್ಲಿ ನಿಲ್ಲಿಸಿ, ಈ ಪರಿಯಂತರ ಯೆಹೋವನು ನಮಗೆ ಸಹಾಯ ಮಾಡಿದ್ದಾನೆಂದು ಹೇಳಿ, ಅದಕ್ಕೆ ಎಬೆನೇಜರು (ಅಂದರೆ ಸಹಾಯದ ಕಲ್ಲು) ಎಂದು ಹೆಸರಿಟ್ಟನು. ಈ ಪ್ರಕಾರ ಫಿಲಿಷ್ಟಿಯರು ತಗ್ಗಿಸಿ ಕೊಂಡು, ಇಸ್ರಯೇಲಿನ ಮೇರೆಯಲ್ಲಿ ಇನ್ನು ಬಾರದೆ ಇದ್ದರು. ಇದಲ್ಲದೆ ಸಮುವೇಲನು ಇದ್ದ ದಿವಸಗಳೆಲ್ಲಾ ಯೆಹೋವನ ಕೈ ಫಿಲಿಷ್ಟಿಯರಿಗೆ ವಿರೋಧವಾಗಿತ್ತು.

II. 36. 48. ಬಾ. 151. 152.

---

## ೩೬. ಸಮುವೇಲನೂ ಸೌಲನೂ.

(೧ ಸಮು. ೮ -- ೧೫.)

(ಕ್ರಿಸ್ತನ ಜನ್ಮದ ಮುಂಚೆ ೧೦೮೦.)

ಸಮುವೇಲನು ಮುದುಕನಾದಾಗ, ಅವನು ತನ್ನ ಕುಮಾರರನ್ನು ಇಸ್ರಯೇಲಿಗೆ ನ್ಯಾಯಾಧಿಪತಿಗಳಾಗಿರ ಇಟ್ಟನು. ಆದರೆ ಅವರು ಅವನ ಮಾರ್ಗದಲ್ಲಿ ನಡೆಯದೆ, ಲೋಭಿಗಳಾಗಿ, ಲಂಚವನ್ನು ತಕ್ಕೊಂಡು, ನ್ಯಾಯವನ್ನು ತಪ್ಪಿಸಿದರು. ಆಗ ಇಸ್ರಯೇಲ್ ಹಿರಿಯರೆಲ್ಲರೂ ಕೂಡಿ ಕೊಂಡು, ಸಮುವೇಲನ ಬಳಿಗೆ ಬಂದು, ಅವನಿಗೆ: ಸಮಸ್ತ ಜನಾಂಗಗಳ ಹಾಗೆ ನಮಗೆ ನ್ಯಾಯತೀರಿಸುವದಕ್ಕೆ ನಮಗೆ ಒಬ್ಬ ಅರಸನನ್ನು ನೇಮಿಸು, ಅಂದರು. ಈ ಮಾತು ಸಮುವೇಲನಿಗೆ ಕೆಟ್ಟದ್ದಾಗಿ ಕಾಣಿಸಿತು; ಮತ್ತು ಅವನು ಯೆಹೋವನಿಗೆ ಪ್ರಾರ್ಥನೆ ಮಾಡಿದನು. ಆಗ ಯೆಹೋವನು ಸಮುವೇಲನಿಗೆ: ಜನರ ಶಬ್ದ ಕೇಳು; ಯಾಕಂದರೆ ಅವರು ನಿನ್ನನ್ನು ಅಲಕ್ಷ್ಯ

ಮಾಡದೆ, ನಾನು ಅವರನ್ನು ಆಳದ ಹಾಗೆ, ನನ್ನನ್ನು ಅಲಕ್ಷ್ಯ ಮಾಡಿದ್ಧಾರೆ, ಅಂದನು.

ಆದರೆ ಬೆನ್ಯಮೀನನ ವಂಶದವನಾದ ಕೀಷನೆಂಬ ಒಬ್ಬ ಮನುಷ್ಯನು ಇದ್ದನು. ಅವನ ಕತ್ತೆಗಳು ಕಾಣದೆ ಹೋದವು. ಅದು ಕಾರಣ ಅವನು ತನ್ನ ಮಗನಾದ ಸೌಲನಿಗೆ: ನೀನು ಚಾಕ್ರಿಯವರಲ್ಲಿ ಒಬ್ಬನನ್ನು ಕರ ಕೊಂಡು, ಕತ್ತೆಗಳನ್ನು ಹುಡುಕ ಹೋಗು, ಅಂದನು. ಹಾಗೆ ಅವರು ಬೇರೆ ಬೇರೆ ಶೀಮೆಗಳನ್ನು ದಾಟಿ, ಕತ್ತೆಗಳನ್ನು ಕಾಣಲಿಲ್ಲ. ಆಗ ಸಮುವೇಲನು ವಾಸವಾಗಿದ್ದ ರಾಮವೆಂಬ ಪಟ್ಟಕ್ಕೆ ಬಂದರು.

ಇವನು ತಾವು ಹೋಗ ಬೇಕಾದ ಮಾರ್ಗವನ್ನು ತಮಗೆ ತಿಳಿಸುವನೆಂದು ಹೇಳಿ ಕೊಂಡು, ಸಮುವೇಲನ ಬಳಿಗೆ ಹೋದರು. ಆದರೆ ಸೌಲನು ಬರುವದಕ್ಕೆ ಒಂದು ದಿವಸ ಮುಂದಾಗಿ ಯೆಹೋವನು ಸಮುವೇಲನಿಗೆ ತಿಳಿಸಿದ್ದೇನಂದರೆ: ನಾಳೆ ಇಷ್ಟು ಹೊತ್ತಿಗೆ ಬೆನ್ಯಮೀನನ ದೇಶದವನಾದ ಒಬ್ಬ ಮನುಷ್ಯನನ್ನು ನಿನ್ನ ಬಳಿಗೆ ಕಳುಹಿಸುವೆನು; ನೀನು ಅವನನ್ನು ಇಸ್ರಯೇಲಿನ ಮೇಲೆ ನಾಯಕನಾಗಿರ ಅಭಿಷೇಕಿಸ ಬೇಕು; ಅವನು ನನ್ನ ಜನರನ್ನು ಫಿಲಿಷ್ಟಿಯರ ಕೈಯಿಂದ ತಪ್ಪಿಸಿ ರಕ್ಷಿಸುವನು. ಸಮುವೇಲನು ಸೌಲನನ್ನು ನೋಡಿದಾಗ, ಯೆಹೋವನು ಅವನಿಗೆ: ಇಗೋ, ನಾನು ನಿನಗೆ ಹೇಳಿದ ಮನುಷ್ಯನು ಇವನೇ; ಇವನೇ ನನ್ನ ಜನರನ್ನು ಆಳುವನು, ಅಂದನು. ಆಗ ಸಮುವೇಲನು ಸೌಲನಿಗೆ: ಈ ಹೊತ್ತು ನೀನು ನನ್ನ ಸಂಗಡ ಉಣ್ಣ ಬೇಕು; ಕಾಣದೆ ಹೋದ ನಿನ್ನ ಕತ್ತೆಗಳ ಮೇಲೆ ಚಿಂತೆ ಮಾಡ ಬೇಡ, ಯಾಕಂದರೆ ಅವು ದೊರಕಿದವು. ಇದಲ್ಲದೆ ಇಸ್ರಯೇಲಿನ ಅಭಿಲಾಷೆ ಎಲ್ಲಾ ಯಾರ ಮೇಲೆ ಇರುವದು? ನಿನ್ನ ಮೇಲೆಯೂ ನಿನ್ನ ತಂದೆಯ ಮನೆಯವರೆಲ್ಲರ ಮೇಲೆಯೂ ಅಲ್ಲವೋ? ಅಂದನು. ಅದಕ್ಕೆ ಸೌಲನು ಪ್ರತ್ಯುತ್ತರವಾಗಿ: ನಾನು ಇಸ್ರಯೇಲ್ಯರ ಕುಲಗಳಲ್ಲೆಲ್ಲಾ ಚಿಕ್ಕದಾದ ಬೆನ್ಯಮೀನನ ಗೋತ್ರದವ

ನಲ್ಲವೇ? ನೀನು ಯಾಕೆ ಹೀಗೆ ನನ್ನ ಸಂಗಡ ಮಾತಾಡುತ್ತೀ? ಅಂದನು. ಮರು ದಿವಸದಲ್ಲಿ ಸೌಲನು ತಿರಿಗಿ ಹೋದಾಗ, ಸಮುವೇಲನು ಎಣ್ಣೆಯ ಪಾತ್ರೆಯನ್ನು ತಕ್ಕೊಂಡು, ಆ ಎಣ್ಣೆಯನ್ನು ಸೌಲನ ತಲೆಯ ಮೇಲೆ ಹೊಯಿದು, ಅವನಿಗೆ ಮುದ್ದಿಟ್ಟು, ಹೇಳಿದ್ದೇನಂದರೆ:—ಯೆಹೋವನು ನಿನ್ನನ್ನು ತನ್ನ ಬಾಧ್ಯತೆಯ ಮೇಲೆ ನಾಯಕನಾಗಿರ ಅಭಿಷೇಕ ಮಾಡಿದ್ದಾನಲ್ಲವೋ? ಅಂದನು. ಮತ್ತು ಸೌಲನು ಸಮುವೇಲನನ್ನು ಬಿಟ್ಟು ಹೋಗ ಬೆಂದಿರಿಗಿಸಿದಾಗ, ದೇವರು ಅವನಿಗೆ ಬೇರೆ ಹೃದಯವನ್ನು ಕೊಟ್ಟನು; ಅವನು ಒಂದು ಗುಡ್ಡಕ್ಕೆ ಬಂದಾಗ, ಇಗೋ, ಪ್ರವಾದಿಗಳ ಗುಂಪು ಅವನೆದುರಿಗೆ ಬಂತು; ಆಗ ದೇವರ ಆತ್ಮವು ಅವನ ಮೇಲೆ ಬಂದದರಿಂದ ಅವರಲ್ಲಿದ್ದು, ಪ್ರವಾದಿಸಿದನು. ಅದಕ್ಕೆ ಜನರು: ಸೌಲನು ಪ್ರವಾದಿಗಳಲ್ಲಿ ಇದ್ದಾನೋ? ಅಂದರು.

ತರುವಾಯ ಸಮುವೇಲನು ಜನರನ್ನು ಮಿಚ್ಪೆಯಲ್ಲಿ ಯೆಹೋವನ ಬಳಿಗೆ ಕೂಡ ಕರಿಸಿದನು. ಅಲ್ಲಿ ಅವರು ಯೆಹೋವನ ಮುಂದೆ ತಮ್ಮ ತಮ್ಮ ಕುಲಗಳ ಪ್ರಕಾರವಾಗಿಯೂ ಗೋತ್ರಗಳ ಪ್ರಕಾರವಾಗಿಯೂ ನಿಲ್ಲುವಾಗ, ಬೆನ್ಯಮೀನನ ಕುಲವೂ, ಈ ಕುಲದಲ್ಲಿ ಮಟ್ರಿಯ ಗೋತ್ರವೂ, ಈ ಗೋತ್ರದಲ್ಲಿ ಕೀಷನ ಮಗನಾದ ಸೌಲನೂ ತಕ್ಕೊಳ್ಳಲ್ಪಟ್ಟನು. ಆದರೆ ಅವನನ್ನು ಹುಡುಕುವಾಗ, ಅವನು ಶಿಕ್ಕಲಿಲ್ಲ. ಮತ್ತು ಅವನು ಸಾಮಾನಿನಲ್ಲಿ ಅಡಗಿ ಕೊಂಡಿದ್ದಾನೆಂದು ಯೆಹೋವನು ಹೇಳಲು, ಅವರು ಓಡಿ ಹೋಗಿ, ಅಲ್ಲಿಂದ ಅವನನ್ನು ಕರ ತಂದರು. ಅವನು ಜನರ ಮಧ್ಯದಲ್ಲಿ ನಿಲ್ಲುವಾಗ, ಎಲ್ಲಾ ಜನರಿಗಿಂತ ಎತ್ತರವಾಗಿದ್ದನು. ಆಗ ಸಮುವೇಲನು ಸಮಸ್ತ ಜನರಿಗೆ: ಯೆಹೋವನು ಆದು ಕೊಂಡವನನ್ನು ನೋಡಿರಿ; ಎಲ್ಲಾ ಜನರಲ್ಲಿ ಇವನಿಗೆ ಸಮಾನವಾದವನು ಯಾವನೂ ಇಲ್ಲವಲ್ಲ? ಅಂದನು. ಆಗ ಜನರೆಲ್ಲರು ಆರ್ಭಟಿಸಿ, ಅರಸಾದವನು ಬಾಳಲಿ, ಅಂದರು.

೨) ಆ ಮೇಲೆ ಅಮ್ಮೋನ್ಯರ ಅರಸನಾದ ನಹಾಷನು ಬಂದು, ಗಿಲ್ಯಾದಿನಲ್ಲಿರುವ ಯಾಬೆಷಿಗೆ ವಿರೋಧವಾಗಿ ದಂಡು ಇರಿಸಿದನು. ಸೌಲನು ಈ ವರ್ತಮಾನವನ್ನು ಕೇಳಿದಾಗ, ದೇವರ ಆತ್ಮವು ಅವನ ಮೇಲೆ ಬಂತು. ಅವನು ಇಸ್ರಯೇಲ್ಯರೆಲ್ಲರನ್ನು ಯುದ್ಧಕ್ಕೆ ಕರೆಸಿದನು. ಆಗ ಯೆಹೋವನಿಂದ ಉಂಟಾದ ಭಯವು ಜನರ ಮೇಲೆ ಬಿದ್ದದರಿಂದ, ಅವರು ಒಬ್ಬನೇ ಮನುಷ್ಯನ ಹಾಗೆ ಹೊರಟು ಬಂದು, ಅಮ್ಮೋನ್ಯರನ್ನು ಜಯಿಸಿದರು. ಮತ್ತು ಜನರೆಲ್ಲರು ಗಿಲ್ಗಾಲಿಗೆ ಹೋಗಿ, ಆ ಸ್ಥಳದಲ್ಲಿ ಯೆಹೋವನ ಮುಂದೆ ಸೌಲನನ್ನು ಅರಸನಾಗ ಮಾಡಿ, ಯೆಹೋವನಿಗೆ ಸಮಾಧಾನದ ಬಲಿಗಳನ್ನು ಅರ್ಪಿಸಿದರು. ಅಲ್ಲಿ ಸೌಲನೂ ಸಮಸ್ತ ಇಸ್ರಯೇಲ್ಯರೂ ಬಹಳವಾಗಿ ಸಂತೋಷ ಪಟ್ಟರು. ಮತ್ತು ಸಮುವೇಲನು ಇಸ್ರಯೇಲ್ಯರೆಲ್ಲರಿಗೆ ಹೇಳಿದ್ದೇನಂದರೆ:—ಇಗೋ, ನೀವು ನನಗೆ ಹೇಳಿದ್ದೆಲ್ಲಾದರಲ್ಲಿ ನಿಮ್ಮ ಮಾತು ಕೇಳಿ, ನಿಮ್ಮ ಮೇಲೆ ಒಬ್ಬ ಅರಸನನ್ನು ಇಟ್ಟೆನು. ನೀವು ನಿಮಗೆ ಒಬ್ಬ ಅರಸನನ್ನು ಕೇಳಿದ್ದರಿಂದ ಯೆಹೋವನ ದೃಷ್ಟಿಗೆ ನೀವು ಮಾಡಿದ ನಿಮ್ಮ ಕೆಟ್ಟತನವು ಹೆಚ್ಚಾಗಿದೆ ಎಂದು ತಿಳು ಕೊಂಡು ನೋಡುವ ಹಾಗೆ, ನಾನು ಯೆಹೋವನಿಗೆ ಕೂಗುವೆನು; ಆಗಲವನು ಗುಡುಗುಗಳನ್ನೂ ಮಳೆಯನ್ನೂ ಕಳುಹಿಸುವನು. ಮತ್ತು ಹಾಗೆಯೇ ಆಯಿತು. ಆಗ ಜನರೆಲ್ಲರು ಯೆಹೋವನಿಗೂ ಸಮುವೇಲನಿಗೂ ಬಹಳವಾಗಿ ಭಯ ಪಟ್ಟು, ಸಮುವೇಲನಿಗೆ: ನಾವು ಸಾಯದ ಹಾಗೆ, ನಿನ್ನ ದೇವರಾದ ಯೆಹೋವನಿಗೆ ನಿನ್ನ ಸೇವಕರಿಗೋಸ್ಕರ ಪ್ರಾರ್ಥನೆ ಮಾಡು; ಯಾಕಂದರೆ ನಮಗೆ ಒಬ್ಬ ಅರಸನು ಬೇಕೆಂದು ಕೇಳಿ, ನಮ್ಮ ಸಮಸ್ತ ಪಾಪಗಳಿಗೆ ಕೆಟ್ಟತನ ಕೂಡಿಸಿದೆವೆಂದು, ಹೇಳಿದರು. ಆಗ ಸಮುವೇಲನು ಜನರಿಗೆ ಹೇಳಿದ್ದೇನಂದರೆ:—ನೀವು ಭಯ ಪಡ ಬೇಡಿರಿ; ಈ ಕೆಟ್ಟತನವೆಲ್ಲಾ ಮಾಡಿದ್ಧೀರಿ; ಆದರೂ ಯೆಹೋವನನ್ನು ಬಿಟ್ಟು ತೊಲಗದೆ, ನಿಮ್ಮ ಪೂರ್ಣ ಹೃದಯದಿಂದ ಅವನನ್ನು ಸೇವಿಸಿರಿ; ಯಾಕಂದರೆ ಯೆಹೋವನು ತನ್ನ ದೊಡ್ಡ ಹೆಸರಿಗೋಸ್ಕರ ತನ್ನ ಜನರನ್ನು

ಕೈ ಬಿಡುವದಿಲ್ಲ. ಇದಲ್ಲದೆ ನಾನು ನಿಮಗೋಸ್ಕರ ಪ್ರಾರ್ಥನೆ ಮಾಡದೆ, ಯೆಹೋವನಿಗೆ ವಿರೋಧವಾಗಿ ಮಾಡುವ ಪಾಪ ನನಗೆ ದೂರವಾಗಿರಲಿ.

೩) ಸೌಲನು ಇಸ್ರಯೇಲಿನ ಮೇಲೆ ರಾಜ್ಯದ ಅಧಿಕಾರವನ್ನು ತಕ್ಕೊಂಡ ಮೇಲೆ ಅವನು ಸುತ್ತಲಿದ್ದ ತನ್ನ ಶತ್ರುಗಳೆಲ್ಲರ ಮೇಲೆ ಯುದ್ಧ ಮಾಡಿ, ಇಸ್ರಯೇಲ್ಯರನ್ನು ಕೊಳ್ಳೆ ಮಾಡಿ ಕೊಂಡವರ ಕೈಗಳಿಗೆ ಅವರನ್ನು ತಪ್ಪಿಸಿದನು. ಮತ್ತು ಸಮುವೇಲನು ಸೌಲನಿಗೆ ಹೇಳಿದ್ದೇನಂದರೆ:—ಇಸ್ರಯೇಲ್ಯರು ಐಗುಪ್ತದಿಂದ ಏರಿ ಬರುವಾಗ, ಅಮಲೇಕ್ಯರು ಅವರ ಮಾರ್ಗಕ್ಕೆ ಅಡ್ಡಗಟ್ಟಿದ್ದನ್ನು ನಾನು ನೆನಸಿಕೊಂಡಿದ್ದೇನೆ. ಈಗ ನೀನು ಹೋಗಿ, ಅಮಲೇಕ್ಯರನ್ನು ಹೊಡೆದು, ಅವರಿಗೆ ಉಂಟಾದದ್ದನ್ನೆಲ್ಲಾ ನಿರ್ಮೂಲ ಮಾಡಿ ಬಿಟ್ಟು, ಅವರನ್ನು ಕನಿಕರಿಸದೆ ಕೊಂದು ಹಾಕು ಎಂದು ಸೈನ್ಯಗಳ ಯೆಹೋವನು ಹೇಳುತ್ತಾನೆ. ಆಗ ಸೌಲನು ಜನರನ್ನು ಕೂಡಿಸಿ, ಅಮಲೇಕ್ಯರ ಪಟ್ಣದ ಪರಿಯಂತರ ಬಂದು, ಅವರನ್ನು ಹೊಡೆದನು. ಆದರೆ ಅಮಲೇಕ್ಯರ ಅರಸನಾದ ಅಗಾಗನನ್ನೂ ದನ ಕುರಿಗಳಲ್ಲಿ ಮೇಲ್ತರವಾದವುಗಳನ್ನೂ ಉತ್ತಮವಾದ ಸಮಸ್ತವನ್ನೂ ಕನಿಕರಿಸಿ, ನಿರ್ಮೂಲ ಮಾಡಲಿಲ್ಲ. ಆಗ ಸಮುವೇಲನು ಸೌಲನನ್ನು ಎದುರುಗೊಳ್ಳ ಹೋದನು. ಆಗ ಸೌಲನು ಅವನಿಗೆ: ನಿನಗೆ ಯೆಹೋವನ ಆಶೀರ್ವಾದವಾಗಲಿ; ನಾನು ಯೆಹೋವನ ಮಾತನ್ನು ಈಡೇರಿಸಿದೆನು, ಅಂದನು. ಆಗ ಸಮುವೇಲನು: ನನ್ನ ಕಿವಿಗಳಲ್ಲಿ ಬೀಳುವ ಕುರಿ ದನಗಳ ಶಬ್ದವೇನೆಂದು ಕೇಳಲು, ಸೌಲನು: ಜನರು ಅಮಲೇಕ್ಯರ ಬಳಿಯಿಂದ ತಕ್ಕೊಂಡು ಬಂದವುಗಳು; ಯಾಕಂದರೆ ನಿನ್ನ ದೇವರಾದ ಯೆಹೋವನಿಗೆ ಬಲಿಯನ್ನು ಅರ್ಪಿಸುವದಕ್ಕೋಸ್ಕರ ಮೇಲ್ತರವಾದ ದನ ಕುರಿಗಳನ್ನು ಉಳಿಸಿಟ್ಟು, ಮಿಕ್ಕಾದವುಗಳನ್ನೆಲ್ಲಾ ನಿರ್ಮೂಲ ಮಾಡಿ ಬಿಟ್ಟರು, ಅಂದನು. ಆಗ ಸಮುವೇಲನು ಸೌಲನಿಗೆ ಹೇಳಿದ್ದೇನಂದರೆ:—ಬಿಡು; ಯೆಹೋವನು ಈ ರಾತ್ರಿಯಲ್ಲಿ

ನನಗೆ ಹೇಳಿದ್ದನ್ನು ನಿನಗೆ ತಿಳಿಸುವೆನು; ನೀನು ನಿನ್ನ ಕಣ್ಣುಗಳಿಗೆ ಚಿಕ್ಕವನಾಗಿರುವಾಗಲೇ, ಇಸ್ರಯೇಲ್ಯರ ಮೇಲೆ ಅರಸನಾಗ ಯೆಹೋವನು ನಿನ್ನನ್ನು ಅಭಿಷೇಕಿಸಿದನಲ್ಲವೋ? ಮತ್ತು ಪಾಪಿಷ್ಠರಾದ ಅಮಲೇಕ್ಯರನ್ನು ನಿರ್ಮೂಲ ಮಾಡಿ, ಅವರು ತೀರಿ ಹೋಗುವ ಮಟ್ಟಿಗೂ ಅವರ ಸಂಗಡ ಯುದ್ಧ ಮಾಡ ಬೇಕೆಂದು ನಿನ್ನನ್ನು ಕಳುಹಿಸಿದನಲ್ಲವೋ? ಹೀಗಿರುವಾಗ, ನೀನು ಯಾಕೆ ಯೆಹೋವನ ಮಾತನ್ನು ಕೇಳದೆ, ಅವನ ದೃಷ್ಟಿಗೆ ಕೆಟ್ಟದ್ದನ್ನು ಮಾಡಿದಿ? ಆಗ ಸೌಲನು ಸಮುವೇಲನಿಗೆ: ನಾನು ನಿಶ್ಚಯವಾಗಿ ಯೆಹೋವನ ಮಾತನ್ನು ಕೇಳಿ, ಅಮಲೇಕ್ಯರನ್ನು ನಿರ್ಮೂಲ ಮಾಡಿದೆನು; ಆದರೆ ಜನರು ಯೆಹೋವನಿಗೆ ಬಲಿ ಕೊಡುವದಕ್ಕಾಗಿ, ಕೊಳ್ಳೆಯಲ್ಲಿ ನಿರ್ಮೂಲ ಮಾಡ ತಕ್ಕ ಕುರಿ ದನಗಳಲ್ಲಿ ಮೇಲ್ತರವಾದವುಗಳನ್ನು ಹಿಡು ಕೊಂಡು ಬಂದರು, ಅಂದನು. ಅದಕ್ಕೆ ಸಮುವೇಲನು: ಯೆಹೋವನ ಮಾತು ಕೇಳಿದರೆ, ಅವನಿಗೆ ಆಗುವ ಸಂತೋಷವು ಹೋಮಗಳಲ್ಲಿಯೂ ಬಲಿಗಳಲ್ಲಿಯೂ ಆಗುವದೋ? ಇಗೋ, ಬಲಿಗಿಂತ ಕೇಳುವದು ಉತ್ತಮವಾಗಿರುವದು. ಯಾಕಂದರೆ ತಿರುಗ ಬೀಳ್ವಿಕೆಯು ಕಣಿ ಹೇಳುವ ಪಾಪವಾಗಿದೆ; ಒರಟುತನವು ವಿಗ್ರಹಾರಾಧನೆಗೆ ಸರಿಯಾಗಿದೆ. ನೀನು ಯೆಹೋವನ ವಾಕ್ಯವನ್ನು ಅಲಕ್ಷ್ಯ ಮಾಡಿದ್ದರಿಂದ, ಅವನು ನಿನ್ನನ್ನು, ಅರಸನಾಗಿರದ ಹಾಗೆ, ಅಲಕ್ಷ್ಯ ಮಾಡಿ ಬಿಟ್ಟನು. ಆ ಮೇಲೆ ಸಮುವೇಲನು ತನ್ನ ಮನೆಗೆ ಹೋಗಿ, ತಾನು ಸಾಯುವ ದಿವಸದ ವರೆಗೂ ಸೌಲನನ್ನು ತಿರಿಗಿ ನೋಡ ಬರಲಿಲ್ಲ. ಆದರೆ ಸಮುವೇಲನು ಅವನಿಗೋಸ್ಕರ ದುಃಖ ಪಟ್ಟನು.

ಬಾ. 19. II. 21.

---

## ೩೬. ಕುರುಬನಾಗಿರುವ ದಾವೀದನು.

(೧ ಸಮು. ೧೬—೧೮.)

(ಕ್ರಿಸ್ತನ ಜನ್ಮದ ಮುಂಚೆ ೧೦೫೫.)

೧) ಮತ್ತು ಯೆಹೋವನು ಸಮುವೇಲನಿಗೆ: ನೀನು ನಿನ್ನ ಕೊಂಬನ್ನು ತೈಲದಿಂದ ತುಂಬಿಸಿ ಕೊಂಡು ಬಾ; ಬೆತ್ಲೆಹೇಮಿನವನಾದ ಇಷಾಯನ ಬಳಿಗೆ ನಿನ್ನನ್ನು ಕಳುಹಿಸುವೆನು; ಯಾಕಂದರೆ ಅವನ ಮಕ್ಕಳಲ್ಲಿ ನಾನು ಒಬ್ಬನನ್ನು ಅರಸನಾಗ ಆದು ಕೊಂಡೆನು, ಅಂದನು. ಸಮುವೇಲನು ಹೋಗಿ, ಇಷಾಯನನ್ನೂ ಅವನ ಮಕ್ಕಳನ್ನೂ ಪರಿಶುದ್ಧ ಮಾಡಿ, ಬಲಿಗೆ ಕರೆದನು. ಅವರು ಬಂದಾಗ, ಚೊಚ್ಚಲದವನಾದ ಎಲ್ಯಾಬನನ್ನು ನೋಡಿ, ನಿಶ್ಚಯವಾಗಿ ಯೆಹೋವನ ಅಭಿಷಿಕ್ತನು ತನ್ನ ಮುಂದೆ ಇದ್ಧಾನೆ ಅಂದು ಕೊಂಡನು. ಆದರೆ ಯೆಹೋವನು ಸಮುವೇಲನಿಗೆ: ನೀನು ಅವನ ರೂಪವನ್ನೂ ಅವನ ದೇಹದ ಉದ್ದವನ್ನೂ ದೃಷ್ಟಿಸ ಬೇಡ; ಯಾಕಂದರೆ ಅವನನ್ನು ನಾನು ಅಲಕ್ಷ್ಯ ಮಾಡಿದೆನು. ಯಾಕಂದರೆ ಮನುಷ್ಯನು ನೋಡುವದು ಪ್ರಮಾಣವಲ್ಲ; ಮನುಷ್ಯನು ಕಣ್ಣಿ ನೋಟದಿಂದ ನೋಡುವನು; ಆದರೆ ಯೆಹೋವನು ಹೃದಯವನ್ನು ನೋಡುವನು, ಅಂದನು. ಇಷಾಯನು ತನ್ನ ಏಳು ಮಂದಿ ಮಕ್ಕಳನ್ನು ಕರೆದು, ಅವರನ್ನು ಸಮುವೇಲನ ಮುಂದೆ ಹಾಯ ಮಾಡಿದನು. ಆದರೆ ಸಮುವೇಲನು ಇಷಾಯನಿಗೆ: ಯೆಹೋವನು ಇವರಲ್ಲಿ ಒಬ್ಬನನ್ನಾದರೂ ಆದು ಕೊಳ್ಳಲಿಲ್ಲ. ನಿನಗಿರುವ ಮಕ್ಕಳು ಇಷ್ಟೇನೋ? ಎಂದು ಕೇಳಿದನು. ಅದಕ್ಕವನು: ಚಿಕ್ಕವನೊಬ್ಬನು ಉಳಿದಿದ್ಧಾನೆ; ಇಗೋ, ಅವನು ಕುರಿಗಳನ್ನು ಕಾಯುತ್ತಾ ಇದ್ಧಾನೆ, ಅಂದನು. ಆಗ ಸಮುವೇಲನು ಇಷಾಯನಿಗೆ: ಅವನನ್ನು ಕರೆಯ ಕಳುಹಿಸು, ಅಂದನು. ಇಷಾಯನು ಕರೆಯ ಕಳುಹಿಸಿದನು. ಅವನು ಕೆಂಪಾದ ಮೈಬಣ್ಣದವನಾಗಿಯೂ ಸುಂದರ ಮುಖವುಳ್ಳವನಾಗಿಯೂ ನೋ

ಟಕ್ಕೆ ಚೆಲುವಿಕೆಯುಳ್ಳವನಾಗಿಯೂ ಇದ್ದನು. ಆಗ ಯೆಹೋವನು ಸಮುವೇಲನಿಗೆ: ನೀನೆದ್ದು, ಇವನನ್ನು ಅಭಿಷೇಕಿಸು; ಇವನೇ ನಾನು ಆದು ಕೊಂಡವನು. ಹೀಗೆ ಸಮುವೇಲನು ಅವನನ್ನು ಅವನ ಸಹೋದರರ ಮಧ್ಯದಲ್ಲಿ ಅಭಿಷೇಕ ಮಾಡಿದನು. ಆ ದಿವಸದಾರಭ್ಯವಾಗಿ ಯೆಹೋವನ ಆತ್ಮವು ದಾವೀದನ ಮೇಲೆ ಬಂತು.

ಆದರೆ ಯೆಹೋವನ ಆತ್ಮ ಸೌಲನನ್ನು ಬಿಟ್ಟು ಹೋಯಿತು; ಯೆಹೋವನಿಂದ ಬಂದ ದುರಾತ್ಮವು ಅವನನ್ನು ಹೆದರಿಸಿತು. ಆಗ ಸೌಲನು ತನ್ನ ಸೇವಕರಿಗೆ: ಚನ್ನಾಗಿ ಬಾರಿಸ ಬಲ್ಲವನಾದ ಒಬ್ಬನನ್ನು ನನಗೋಸ್ಕರ ನೋಡಿ, ನನ್ನ ಬಳಿಗೆ ಕರ ಕೊಂಡು ಬನ್ನಿರಿ, ಅಂದನು. ಆಗ ಸೇವಕರಲ್ಲಿ ಒಬ್ಬನು ಪ್ರತ್ಯುತ್ತರವಾಗಿ ಅವನಿಗೆ: ಇಗೋ, ನಾನು ಇಷಾಯನ ಮಗನನ್ನು ನೋಡಿದೆನು; ಅವನು ಬಾರಿಸ ತಿಳಿದವನೂ ಧೈರ್ಯವಂತನೂ ಪರಾಕ್ರಮಶಾಲಿಯೂ ರಣಶೂರನೂ ಬುದ್ಧಿವಂತನೂ ಆಗಿದ್ದಾನೆ, ಅಂದನು. ಮತ್ತು ಸೌಲನು ದಾವೀದನನ್ನು ತರಿಸಿ, ಅವನನ್ನು ಬಹಳವಾಗಿ ಪ್ರೀತಿ ಮಾಡಿದನು; ದಾವೀದನು ಅವನಿಗೆ ಆಯುಧ ಹಿಡಿಯುವವನಾದನು. ದೇವರಿಂದ



ಬಂದ ದುರಾತ್ಮವು ಸೌಲನ ಮೇಲೆ ಬಂದಾಗ, ದಾವೀದನು ಕಿನ್ನರಿಯನ್ನು ತೆಗೆದು ಕೊಂಡು, ಬಾರಿಸುವನು. ಅದರಿಂದ ಸೌಲನು ವಿಶ್ರಾಂತಿ ಹೊಂದಿದನು; ಮತ್ತು ದುರಾತ್ಮವು ಅವನನ್ನು ಬಿಟ್ಟು ಹೋಗುವದು.

೨) ತರುವಾಯ ಫಿಲಿಷ್ಟಿಯರು ಯುದ್ಧ ಮಾಡುವದಕ್ಕೆ ತಮ್ಮ ರಾಣುವೆಯನ್ನು ಯೆಹೂದ ದೇಶದ ಸೋಕೊವಿನಲ್ಲಿ ಕೂಡಿಸಿ, ಅಲ್ಲಿ ದಂಡಿಳಿದರು. ಆಗ ಗೊಲೆಯಾತನೆಂಬ ರಣವೀರನು ಅವರ ದಂಡಿನಿಂದ ಹೊರಟನು. ಅವನ ಉದ್ದವು ಆರುವರೆ ಮೊಳ; ಅವನ ತಲೆಯ ಮೇಲೆ ಹಿತ್ತಾಳಿಯ ಶಿರಸ್ತ್ರಾಣವಿತ್ತು; ಅವನ ಕಾಲುಗಳಲ್ಲಿ ಹಿತ್ತಾಳಿಯ ಚಮ್ಮಳಿಗೆ; ಅವನು ಲೋಹಕವಚವನ್ನು ತೊಟ್ಟು ಕೊಂಡಿದ್ದನು; ಅವನ ಈಟಿಯ ಗಣೆಯು ಜಾಡನ ಗುಂಟಿಗೆಯ ದಂಡಿನ ಹಾಗಿತ್ತು; ಅವನು ನಿಂತು, ಇಸ್ರಯೇಲ ಸೈನ್ಯಗಳಿಗೆ ಕೂಗಿ, ಹೇಳಿದ್ದೇನಂದರೆ:—ನೀವು ನಿಮಗೋಸ್ಕರ ಒಬ್ಬನನ್ನು ಆದು ಕೊಳ್ಳಿರಿ; ಅವನು ನನ್ನ ಸಂಗಡ ಯುದ್ಧ ಮಾಡ ಬಲ್ಲವನಾಗಿದ್ದು ನನ್ನನ್ನು ಕೊಂದರೆ, ನಾವು ನಿಮಗೆ ಸೇವಕರಾಗಿರುವೆವು; ನಾನು ಅವನನ್ನು ಕೊಂದರೆ, ನೀವು ನಮಗೆ ಸೇವಕರಾಗಿರ ಬೇಕು. ಇಗೋ, ನಾನು ಈ ದಿನ ಇಸ್ರಯೇಲಿನ ಸೈನ್ಯವನ್ನು ನಿಂದಿಸುತ್ತೇನೆ, ಅಂದನು. ಸೌಲನೂ ಸಮಸ್ತ ಇಸ್ರಯೇಲ್ಯರೂ ಆ ಫಿಲಿಷ್ಟಿಯನ ಮಾತುಗಳನ್ನು ಕೇಳಿದಾಗ, ಹೆದರಿ ಕೊಂಡು, ಬಹು ಭಯ ಪಟ್ಟರು. ಆದರೆ ಇಷಾಯನ ಮೂವರು ಹಿರಿಯ ಮಕ್ಕಳು ಸೌಲನ ಹಿಂದೆ ಯುದ್ಧಕ್ಕೆ ಹೋಗಿದ್ದರು; ದಾವೀದನು ಸೌಲನನ್ನು ಬಿಟ್ಟು, ಬೆತ್ಲೆಹೇಮಿಗೆ ತನ್ನ ತಂದೆಯ ಕುರಿಗಳನ್ನು ಮೇಯಿಸ ಹೋಗಿದ್ದನು. ಮತ್ತು ಇಷಾಯನು ದಾವೀದನನ್ನು, ತನ್ನ ಸಹೋದರರಿಗೆ ಹುರಿದ ಧಾನ್ಯವನ್ನೂ ರೊಟ್ಟಿಗಳನ್ನೂ ತಕ್ಕೊಂಡು ಹೋಗಿ, ಅವರ ಕ್ಷೇಮಸಮಾಚಾರವನ್ನು ವಿಚಾರಿಸಲಿಕ್ಕೆ ಕಳುಹಿಸಿದನು. ದಾವೀದನು ತನ್ನ ಸಹೋದರರ ಬಳಿಗೆ ಬಂದು, ಅವರ ಸಂಗಡ ಮಾತಾಡಿ ಕೊಳ್ಳುತ್ತಾ ಇರುವಾಗ, ಇಗೋ, ಗೊ

ಲೆಯಾತನು ಫಿಲಿಷ್ಟಿಯರ ಸೈನ್ಯದಿಂದ ಹೊರಟು, ಮುಂಚಿನ ಹಾಗೆಯೇ ಮಾತಾಡಿದನು. ಆ ಮಾತುಗಳನ್ನು ದಾವೀದನು ಕೇಳಿದಾಗ, ತನ್ನ ಬಳಿಯಲ್ಲಿ ನಿಂತಿದ್ದ ಮನುಷ್ಯರಿಗೆ: ಈ ಫಿಲಿಷ್ಟಿಯನನ್ನು ಹೊಡೆದು, ಇಸ್ರಯೇಲಿನ ಮೇಲಿನಿಂದ ನಿಂದೆಯನ್ನು ತೊರೆದು ಬಿಡುವ ಆ ಮನುಷ್ಯನಿಗೆ ಏನು ಮಾಡುವದು? ಪರಿಛೇದನೆ ಇಲ್ಲದ ಈ ಫಿಲಿಷ್ಟಿಯನು ಜೀವವುಳ್ಳ ದೇವರ ಸೈನ್ಯಗಳನ್ನು ನಿಂದಿಸುವದಕ್ಕೆ ಎಷ್ಟರವನು? ಅಂದನು. ಜನರು: ಅವನನ್ನು ಅರಸನು ಬಹಳ ಐಶ್ವರ್ಯವಂತನಾಗ ಮಾಡಿ, ಅವನಿಗೆ ತನ್ನ ಮಗಳನ್ನು ಕೊಟ್ಟು, ಅವನ ತಂದೆಯ ಮನೆಯನ್ನು ಇಸ್ರಯೇಲಲ್ಲಿ ಮಾನ್ಯವಾಗಿ ಮಾಡುವನು, ಅಂದರು. ದಾವೀದನು ಆ ಮನುಷ್ಯರ ಸಂಗಡ ಮಾತಾಡುತ್ತಿರುವದನ್ನು ಅವನ ಅಣ್ಣನಾದ ಎಲ್ಯಾಬನು ಕೇಳಿದಾಗ, ಅವನು ಕೋಪಗೊಂಡು, ದಾವೀದನಿಗೆ: ನೀನು ಇಲ್ಲಿಗೆ ಬಂದದ್ದೇನು? ನಿನ್ನ ಗರ್ವವನ್ನೂ ಅಹಂಕಾರವನ್ನೂ ನಾನು ಬಲ್ಲೆನು; ಯುದ್ಧವನ್ನು ನೋಡ ಇಳಿದು ಬಂದಿದ್ಧೀ, ಅಂದನು. ಅದಕ್ಕೆ ದಾವೀದನು: ನಾನು ಈಗ ಮಾಡಿದ್ದೇನು? ಆ ಮಾತು ಉಂಟಲ್ಲ? ಅಂದನು. ಆಗ ಜನರು ದಾವೀದನು ಹೇಳಿದ ಮಾತುಗಳನ್ನು ಸೌಲನಿಗೆ ತಿಳಿಸಿದರು. ಅವನು ದಾವೀದನನ್ನು ಕರೇ ಕಳುಹಿಸಿದನು. ಮತ್ತು ದಾವೀದನು ಸೌಲನಿಗೆ: ಈ ಫಿಲಿಷ್ಟಿಯನ ನಿಮಿತ್ತವಾಗಿ ಯಾವನ ಹೃದಯವೂ ಕುಂಗ ಬಾರದು; ನಿನ್ನ ಸೇವಕನು ಹೋಗಿ, ಅವನ ಸಂಗಡ ಯುದ್ಧ ಮಾಡುವನು, ಅಂದನು. ಸೌಲನು ಅವನಿಗೆ: ಇದು ನಿನ್ನಿಂದಲಾಗದು; ಯಾಕಂದರೆ ನೀನು ಹುಡುಗನಾಗಿದ್ಧೀ; ಆದರೆ ಅವನು ಚಿಕ್ಕಂದಿನಿಂದ ಯುದ್ಧದ ಮನುಷ್ಯನಾಗಿದ್ದಾನೆ, ಅಂದನು. ಅದಕ್ಕೆ ದಾವೀದನು ಪ್ರತ್ಯುತ್ತರವಾಗಿ: ನಿನ್ನ ಸೇವಕನು ತನ್ನ ತಂದೆಯ ಕುರಿಗಳನ್ನು ಮೇಯಿಸಿ ಕೊಂಡಿರುವಾಗ, ಸಿಂಹವೂ ಕರಡಿಯೂ ಬಂದು, ಕುರಿಮರಿಯನ್ನು ಹಿಡಿದವು; ಆಗ ನಾನು ಅವುಗಳನ್ನು ಹೊಡೆದು ಬಿಟ್ಟು, ಆ ಕುರಿಮರಿಯನ್ನು ಅವುಗಳ ಬಾಯಿಯಿಂದ

ತಪ್ಪಿಸಿದೆನು; ಹೀಗೆ ನನ್ನನ್ನು ಸಿಂಹದ ಕೈಗೂ ಕರಡಿಯ ಕೈಗೂ ತಪ್ಪಿಸಿ ಬಿಟ್ಟ ಯೆಹೋವನು ಈ ಫಿಲಿಷ್ಟಿಯನ ಕೈಗೂ ತಪ್ಪಿಸಿ ಬಿಡುವನು, ಅಂದನು. ಆಗ ಸೌಲನು ದಾವೀದನಿಗೆ: ನೀನು ಹೋಗು; ಯೆಹೋವನು ನಿನ್ನ ಸಂಗಡ ಇರಲಿ ಎಂದು ಹೇಳಿ, ದಾವೀದನಿಗೆ ತನ್ನ ವಸ್ತ್ರಗಳನ್ನು ಧರಿಸ ಮಾಡಿ, ಅವನ ತಲೆಯ ಮೇಲೆ ಒಂದು ಹಿತ್ತಾಳಿಯ ಶಿರಸ್ತ್ರಾಣವನ್ನು ಇಟ್ಟು, ಅವನಿಗೆ ಕವಚವನ್ನು ತೊಡಿಸಿದನು. ಮತ್ತು ದಾವೀದನು ಅವನ ಕತ್ತಿಯನ್ನು ತನ್ನ ವಸ್ತ್ರಗಳ ಮೇಲೆ ಕಟ್ಟಿ ಕೊಂಡು ಹೋಗ ಬೇಕೆಂದು ಇದ್ದನು. ಆದರೆ ಅವನು ಸೌಲನಿಗೆ: ನಾನು ಪರೀಕ್ಷಿಸದ್ದರಿಂದ ಇವುಗಳನ್ನು ಧರಿಸಿ ಕೊಂಡು ಹೋಗಲಾರೆನೆಂದು ಹೇಳಿ, ಅವುಗಳನ್ನು ಬಿಚ್ಚಿ ಹಾಕಿದನು. ಮತ್ತು ತನ್ನ ಕೋಲನ್ನು ಹಿಡಿದು, ಹಳ್ಳದಲ್ಲಿರುವ ಐದು ನುಣ್ಣ ಕಲ್ಲುಗಳನ್ನು ಆದು ಕೊಂಡು, ತನ್ನ ವಟ್ಟೀ ಚೀಲದಲ್ಲಿ ಹಾಕಿ, ತನ್ನ ಕವಣೆಯನ್ನು ಕೈಯಲ್ಲಿ ಹಿಡುಕೊಂಡು, ಆ ಫಿಲಿಷ್ಟಿಯನ ಬಳಿಗೆ ಶೇರ ಹೋದನು. ಆಗ ಫಿಲಿಷ್ಟಿಯನು ನಡೆದೇ ನಡೆದು, ದಾವೀದನ ಬಳಿಗೆ ಸಮಿಾಪಿಸಿ ಬಂದನು.

ಅವನು ದಾವೀದನನ್ನು ದೃಷ್ಟಿಸಿ ನೋಡಿದಾಗ, ಅವನನ್ನು ತಿರಸ್ಕರಿಸಿ, ಅವನಿಗೆ: ನೀನು ಕೋಲನ್ನು ಹಿಡು ಕೊಂಡು ನನ್ನ ಬಳಿಗೆ ಬರುವ ಹಾಗೆ ನಾನು ನಾಯಿಯೋ? ನನ್ನ ಬಳಿಗೆ ಬಾ; ನಿನ್ನ ಮಾಂಸವನ್ನು ಆಕಾಶದ ಪಕ್ಷಿಗಳಿಗೂ ಅಡವಿಯ ಮೃಗಗಳಿಗೂ ಆಹಾರವಾಗಿ ಕೊಡುವೆನು, ಅಂದನು. ಅದಕ್ಕೆ ದಾವೀದನು: ನೀನು ಕತ್ತಿ, ಈಟಿ, ಡಾಲುಗಳನ್ನು ಹಿಡಿದು ಕೊಂಡು, ನನ್ನ ಬಳಿಗೆ ಬರುತ್ತೀ; ಆದರೆ ನಾನು ಯೆಹೋವನ ಹೆಸರಿನಲ್ಲಿ ಬರುತ್ತೇನೆ; ಅವನು ನಿನ್ನನ್ನು ನನ್ನ ಕೈಯಲ್ಲಿ ಒಪ್ಪಿಸಿ ಕೊಡುವನು; ಮತ್ತು ಈ ದಿನ ಇಸ್ರಯೇಲಿಗೆ ದೇವರು ಉಂಟೆಂದು ಭೂಲೋಕದವರೆಲ್ಲರೂ ತಿಳಿಯುವರು. ಯೆಹೋವನು ಕತ್ತಿಯಿಂದಲೂ ಈಟಿಯಿಂದಲೂ ರಕ್ಷಿಸುವದಿಲ್ಲವೆಂದು ಈ ಕೂಟವೆಲ್ಲಾ ತಿಳಿಯುವದು, ಅಂದನು. ಮತ್ತು ಏನಾ

ಯಿತಂದರೆ—ಆ ಫಿಲಿಷ್ಟಿಯನು ಎದ್ದು, ದಾವೀದನಿಗೆ ಸಮೀಪಿಸಿ ಬರುವಾಗ, ದಾವೀದನು ತ್ವರೆ ಪಟ್ಟು, ಅವನಿಗೆ ಎದುರಾಗಿ ಓಡಿ ಬಂದು, ತನ್ನ ಚೀಲದಲ್ಲಿರುವ ಒಂದು ಕಲ್ಲನ್ನು ತೆಗೆದು ಕೊಂಡು, ಕವಣೆಯಲ್ಲಿಟ್ಟು, ಬೀಸಿ, ಫಿಲಿಷ್ಟಿಯನ ಹಣೆಯನ್ನು ತಾಗ ಎಸೆದನು.



ಆ ಕಲ್ಲು ಅವನ ಹಣೆಯೊಳಗೆ ಹೊಕ್ಕಿ, ಅವನು ನೆಲದ ಮೇಲೆ ಬೋರ್ಲ ಬಿದ್ದನು. ಮತ್ತು ದಾವೀದನು ಓಡಿ ಬಂದು, ಅವನ ಮೇಲೆ ನಿಂತು, ಅವನ ಕತ್ತಿಯನ್ನು ತೆಗೆದು ಕೊಂಡು, ಅವನ ತಲೆಯನ್ನು ಕಡಿದು ಹಾಕಿದನು. ಫಿಲಿಷ್ಟಿಯರು ತಮ್ಮ ಪರಾಕ್ರಮಶಾಲಿ ಸತ್ತು ಹೋದದ್ದನ್ನು ಕಂಡಾಗ, ಓಡಿ ಹೋದರು. ಮತ್ತು ಇಸ್ರಯೇಲ್ಯರು ಅವರನ್ನು ಹಿಂದಟ್ಟಿ, ಜಯಿಸಿದರು.

ದಾವೀದನು ಆ ಫಿಲಿಷ್ಟಿಯನ ತಲೆಯನ್ನು ತೆಗೆದು ಕೊಂಡು ತಿರಿಗಿ ಬರುವಾಗ, ಸೌಲನು ಅವನಿಗೆ: ಪ್ರಾಯಸ್ಥನೇ, ನೀನು ಯಾರ ಮಗನು? ಎಂದು ಕೇಳಿದನು. ಅದಕ್ಕೆ ದಾವೀದನು: ನಾನು ನಿನ್ನ ಸೇವಕನಾಗಿರುವ ಇಷಾಯನ ಮಗನು, ಅಂದನು. ಆದರೆ ಅವನು

ಸೌಲನ ಸಂಗಡ ಮಾತಾಡಿ ತೀರಿಸಿದಾಗ, ಯೋನತಾನನ ಪ್ರಾಣವು ದಾವೀದನ ಪ್ರಾಣದ ಸಂಗಡ ಕಟ್ಟಲ್ಪಟ್ಟಿತು. ಯೋನತಾನನು ಅವನನ್ನು ತನ್ನ ಪ್ರಾಣದ ಹಾಗೆಯೇ ಪ್ರೀತಿ ಮಾಡಿದನು. ಅವರಿಬ್ಬರು ಒಂದು ಒಡಂಬಡಿಕೆಯನ್ನು ಮಾಡಿ ಕೊಂಡರು. ಮತ್ತು ಸೌಲನು ದಾವೀದನನ್ನು ಯುದ್ಧಸ್ಥರ ಮೇಲೆ ಅಧಿಕಾರಿಯಾಗ ಮಾಡಿದನು. II. 21. 32. 33.

---

## ೩೭. ದಾವೀದನ ಹಿಂಸೆಯು.

(೧ ಸಮು. ೧೮ — ೨೬.)

೧) ದಾವೀದನು ಫಿಲಿಷ್ಟಿಯನನ್ನು ಹೊಡೆದು ತಿರುಗಿ ಬರುವಾಗ, ಇಸ್ರಯೇಲ್ಯರ ಸಮಸ್ತ ಪಟ್ಣಗಳಿಂದ ಸ್ತ್ರೀಯರು ಹೊರಟು, ದಮ್ಮಡಿಗಳಿಂದಲೂ ಸಂತೋಷದಿಂದಲೂ ಎದುರುಗೊಳ್ಳ ಬಂದು, ಆಡುತ್ತಾ ಒಬ್ಬರಿಗೊಬ್ಬರು: ಸೌಲನು ಸಾವಿರಗಳನ್ನೂ ದಾವೀದನು ಹತ್ತು ಸಾವಿರಗಳನ್ನೂ ಕೊಂದನೆಂದು ಪ್ರತ್ಯುತ್ತರ ಕೊಟ್ಟರು. ಅದು ಕಾರಣ ಸೌಲನಿಗೆ ಬಹು ಕೋಪವಾಯಿತು. ಆ ದಿವಸ ಮೊದಲ್ಗೊಂಡು ಅವನು ದಾವೀದನ ಮೇಲೆ ಕಣ್ಣಿಟ್ಟನು. ಮಾರಣೆ ದಿವಸದಲ್ಲಿ ದೇವರಿಂದ ಬಂದ ದುರಾತ್ಮವು ಸೌಲನ ಮೇಲೆ ಇಳಿಯಿತು. ಆಗ ದಾವೀದನು ದಿನ ದಿನ ಮಾಡುತ್ತಿದ್ದ ಹಾಗೆಯೇ ತನ್ನ ಕೈಯಿಂದ ಬಾರಿಸುತ್ತಿದ್ದನು. ಆದರೆ ಸೌಲನು ದಾವೀದನನ್ನು ಗೋಡೆಗೆ ಹತ್ತಂಡವಾಗ ಹೊಡೆಯುವೆನೆಂದು ಈಟಿಯನ್ನು ಹಾಕಿದನು. ಆದರೆ



ದಾವೀದನು ಎರಡು ಸಾರಿ ತಪ್ಪಿಸಿ ಕೊಂಡನು. ಮತ್ತು ಸೌಲನು ದಾವೀದನಿಗೆ ಭಯ ಪಟ್ಟನು; ಯಾಕಂದರೆ ಯೆಹೋವನು ಅವನ ಸಂಗಡ ಇದ್ದನು; ಆದರೆ ಸೌಲನ ಕಡೆಯಿಂದ ಯೆಹೋವನು ತೊಲಗಿ ಹೋಗಿದ್ದನು. ಆದದರಿಂದ ಸೌಲನು ದಾವೀದನನ್ನು ತನ್ನ ಬಳಿಯಿಂದ ತೊಲಗಿಸಿ ಬಿಟ್ಟು, ಸಾವಿರ ಜನಕ್ಕೆ ಪ್ರಧಾನನಾಗಿ ಇಟ್ಟನು. ಆದರೆ ದಾವೀದನು ತನ್ನ ಸಕಲ ಮಾರ್ಗಗಳಲ್ಲಿ ಬುದ್ಧಿಯುಳ್ಳವನಾಗಿದ್ದನು. ಇಸ್ರಯೇಲ್ ಜನರೆಲ್ಲರು ಅವನನ್ನು ಪ್ರೀತಿ ಮಾಡಿದರು. ಫಿಲಿಷ್ಟಿಯರ ಪ್ರಧಾನರು ಇಸ್ರಯೇಲ್ಯರ ಮೇಲೆ ಯುದ್ಧ ಮಾಡ ಬಂದಾಗ, ಸೌಲನ ಸಮಸ್ತ ಸೇವಕರಿಗಿಂತ ದಾವೀದನು ಕಾರ್ಯವನ್ನು ಬುದ್ಧಿಯಾಗಿ ನಡಿಸಿದನು. ಆದದರಿಂದ ಅವನು ದೊಡ್ಡ ಹೆಸರು ಹೊಂದಿದನು. ಮತ್ತು ಸೌಲನು ಅವನನ್ನು ಕೊಂದು ಹಾಕ ಬೇಕೆಂದು, ಆಲೋಚನೆ ಮಾಡಿದನು. ಒಂದು ಸಾರಿ ಅವನನ್ನು ಕೊಂದು ಹಾಕುವ ಹಾಗೆ ಅವನ ಮನೆಗೆ ಜನರನ್ನು ಕಳುಹಿಸಿದನು. ಆದರೆ ಸೌಲನ ಮಗಳಾಗಿರುವ ದಾವೀದನ ಹೆಂಡತಿಯಾದ ಮೀಕಳು ಅವನನ್ನು ಕಿಟಕಿಯಿಂದ ಇಳಿಸಿ ಬಿಟ್ಟು, ತಪ್ಪಿಸಿದಳು. ಮತ್ತು ಒಂದು ಗೊಂಬೆಯನ್ನು ತೆಗೆದು ಕೊಂಡು, ಮಂಚದ ಮೇಲೆ ಮಲಗಿಸಿ, ಅದನ್ನು ವಸ್ತ್ರದಿಂದ ಮುಚ್ಚಿದಳು. ಆಗ ಆ ಜನರು ಅವನನ್ನು ಸೌಲನ ಹತ್ತರ ಕರಿಸ ಬಂದಾಗ, ಮೀಕಳು: ಅವನು ರೋಗದಲ್ಲಿ ಇದ್ದಾನೆ, ಅಂದಳು. ತಿರಿಗಿ ಸೌಲನು ಅವನನ್ನು ಮಂಚದ ಮೇಲೆ ತಕ್ಕೊಂಡು ಬರ ಬೇಕೆಂದು ಸೇವಕರನ್ನು ಕಳುಹಿಸಿದಾಗ, ಇಗೋ, ಗೊಂಬೆಯು ಮಂಚದ ಮೇಲೆ ಇತ್ತು. ಹೀಗೆ ದಾವೀದನು ಓಡಿ ಹೋಗಿ, ತಪ್ಪಿಸಿ ಕೊಂಡು, ರಾಮದಲ್ಲಿರುವ ಸಮುವೇಲನ ಬಳಿಗೆ ಬಂದನು. ಸೌಲನು ಅಲ್ಲಿ ಸಹ ಅವನನ್ನು ಹುಡಿಕಿಸಿದಾಗ, ದಾವೀದನು ಅಲ್ಲಿಂದ ಓಡಿ ಹೋಗಿ, ಯೋನತಾನನ ಬಳಿಗೆ ಬಂದನು. ಯೋನತಾನನು ಅವನಿಗೋಸ್ಕರ ತನ್ನ ತಂದೆಯಾದ ಸೌಲನ ಸಂಗಡ ಮಾತಾಡಿ, ಅವನನ್ನು ಶಾಂತ ಪಡಿಸ ಯತ್ನೈಸಿದ

ನು. ಆದರೆ ಸೌಲನು: ದಾವೀದನು ಸಾಯ ಬೇಕೆಂದು ಹೇಳಿದನು. ಅದು ಕಾರಣ ಯೋನತಾನನು ದಾವೀದನಿಗೆ: ನೀನು ಓಡಿ ಹೋಗು, ಅಂದನು. ಹೀಗೆ ದಾವೀದನು ನೋಬಿನಲ್ಲಿರುವ ಯಾಜಕನಾದ ಅಹಿಮೇಲೆಕನ ಬಳಿಗೆ ಬಂದು, ರೊಟ್ಟಿಗಳನ್ನು ಕೇಳಿದನು. ಬೇರೆ ರೊಟ್ಟಿಯು ಅಲ್ಲಿ ಇಲ್ಲದ್ದರಿಂದ, ಯಾಜಕನು ಅವನಿಗೆ ಸಮುಖದ ರೊಟ್ಟಿಗಳನ್ನು ಕೊಟ್ಟನು; ಇದಲ್ಲದೆ ಅಲ್ಲಿ ಇದ್ದ ಗೊಲೆಯಾತನ ಕತ್ತಿಯನ್ನೂ ಸಹ ಕೊಟ್ಟನು. ಮತ್ತು ದಾವೀದನು ಎದ್ದು, ಗಾತಿನ ಅರಸನಾದ ಅಕೀಷನ ಬಳಿಗೆ ಓಡಿ ಹೋದನು. ಆದರೆ ಅಕೀಷನ ಸೇವಕರು ಅವನಿಗೆ: ಇವನು ಅರಸನಾದ ದಾವೀದನಲ್ಲವೋ? ಸೌಲನು ಸಾವಿರಗಳನ್ನೂ ದಾವೀದನು ಹತ್ತು ಸಾವಿರಗಳನ್ನೂ ಸಂಹರಿಸಿದನೆಂದು ಇವನನ್ನು ಕುರಿತು ನಾಟ್ಯದಲ್ಲಿ ಒಬ್ಬರಿಗೊಬ್ಬರು ಹಾಡಿದರಲ್ಲವೇ? ಅಂದರು. ದಾವೀದನು ಈ ಮಾತುಗಳನ್ನು ಕೇಳಿ, ಮಹಾ ಭಯಸ್ಥನಾಗಿ, ಅವರ ಕಣ್ಣಿನ ಮುಂದೆ ತನ್ನ ಬುದ್ಧಿಯನ್ನು ಮಾರ್ಪಡಿಸಿ, ತನ್ನನ್ನು ಹುಚ್ಚನ ಹಾಗೆ ತೋರಮಾಡಿದನು. ಅಕೀಷನು ತನ್ನ ಸೇವಕರಿಗೆ: ಇವನನ್ನು ನನ್ನ ಬಳಿಗೆ ಯಾಕೆ ತಕ್ಕೊಂಡು ಬಂದಿರಿ? ಹುಚ್ಚರು ನನಗೆ ಅವಶ್ಯವೋ? ಅಂದನು. ಮತ್ತು ದಾವೀದನು ಆ ಸ್ಥಳದಿಂದ ತಪ್ಪಿಸಿ ಕೊಂಡು, ಅಡುಲ್ಲಮು ಎಂಬ ಗವಿಗೆ ಬಂದನು. ಆ ವರ್ತಮಾನವನ್ನು ಅವನ ಸಹೋದರರೂ ಅವನ ತಂದೆಯ ಮನೆಯವರೂ ಮತ್ತು ಶ್ರಮೆ ಪಟ್ಟವರೆಲ್ಲರೂ ಕೇಳಿ, ಅವನ ಸಂಗಡ ಕೂಡಿ ಕೊಂಡರು. ಹೆಚ್ಚು ಕಡಿಮೆ ನಾನೂರು ಜನರು ಅವನ ಬಳಿಯಲ್ಲಿ ಇದ್ದರು. ಅವನು ಅವರಿಗೆ ಅಧಿಪತಿಯಾದನು.

ಆ ಮೇಲೆ ಸೌಲನ ಸೇವಕರಿಗೆ ಯಜಮಾನನಾಗಿದ್ದ ಎದೋಮ್ಯನಾದ ದೋಯೆಗನು, ನೋಬಿನಲ್ಲಿರುವ ಯಾಜಕನಾದ ಅಹಿಮೇಲೆಕನು ದಾವೀದನಿಗೆ ಆಹಾರವನ್ನೂ ಗೊಲೆಯಾತನ ಕತ್ತಿಯನ್ನೂ ಕೊಟ್ಟನೆಂದು ಸೌಲನಿಗೆ ತಿಳಿಸಿದನು. ಆದದರಿಂದ ಸೌಲನು

ಅಹಿಮೇಲೆಕನನ್ನೂ ಅವನ ಸಂಗಡ ಇದ್ದ ಬೇರೆ ಯಾಜಕರನ್ನೂ ಒಟ್ಟಿಗೆ ಎಂಭತ್ತೈದು ಜನರನ್ನು ಕೊಂದು ಹಾಕಿಸಿ, ಅವರ ಪಟ್ಣದಲ್ಲಿರುವ ಪುರುಷರನ್ನೂ ಸ್ತ್ರೀಯರನ್ನೂ ಕೂಸುಗಳನ್ನೂ ಪಶುಗಳನ್ನೂ ಕತ್ತಿಯಿಂದ ಹೊಡೆದು ಬಿಟ್ಟನು. ಅಹಿಮೇಲೆಕನ ಮಗನಾದ ಅಬ್ಯತಾರನು ತಪ್ಪಿಸಿ ಕೊಂಡು, ದಾವೀದನ ಬಳಿಗೆ ಓಡಿ ಬಂದು, ಆದದ್ದನ್ನು ಅವನಿಗೆ ತಿಳಿಸಿದನು. ದಾವೀದನು ಅವನಿಗೆ: ನನ್ನ ಬಳಿಯಲ್ಲಿರು, ಆಗ ನೀನು ಸುರಕ್ಷಿತನಾಗಿರುವಿ, ಅಂದನು.

೨) ದಾವೀದನು ಯೆಹೂದ ದೇಶದ ಅರಣ್ಯದಲ್ಲಿ ತಿರುಗಾಡುತ್ತಾ ಇದ್ದನು. ಅವನು ಎಂಗೇದಿಯಲ್ಲಿ ಇದ್ದಾನೆಂದು, ಸೌಲನಿಗೆ ವರ್ತಮಾನ ಬಂದಾಗ, ಅವನು ಸಮಸ್ತ ಇಸ್ರಯೇಲಲ್ಲಿ ಮೂರು ಸಾವಿರ ಜನರನ್ನು ಆದು ಕೊಂಡು, ದಾವೀದನನ್ನು ಹುಡುಕ ಬಂದನು. ಅಲ್ಲಿ ಸೌಲನು (ಒಬ್ಬನಾಗಿ) ಒಂದು ಗವಿಯೊಳಗೆ ಬಂದನು; ದಾವೀದನೂ ಅವನ ಜನರೂ ಆ ಗವಿಯ ಪಕ್ಕೆಗಳಲ್ಲಿ ಇದ್ದರು. ಆಗ ದಾವೀದನ ಜನರು ಅವನಿಗೆ: ಇಗೋ, ನಾನು ನಿನ್ನ ಶತ್ರುವನ್ನು ನಿನ್ನ ಕೈಯಲ್ಲಿ ಒಪ್ಪಿಸಿ ಕೊಡುವೆನೆಂದು, ಯೆಹೋವನು ನಿನಗೆ ಹೇಳಿದ ದಿವಸ ಇದೇ, ಅಂದರು. ಆಗ ದಾವೀದನು ಎದ್ದು ಹೋಗಿ, ಏಕಾಂತವಾಗಿ ಸೌಲನ ನಿಲುವಂಗಿಯ ಶರಗನ್ನು



ಕೊಯಿದು ಬಿಟ್ಟನು. ಅವನು ಅದನ್ನು ಮಾಡಿದ್ದರಿಂದ ಅವನ ಹೃದಯವು ಬಡುಕೊಂಡಿತು. ಮತ್ತು ಅವನು ತನ್ನ ಜನರಿಗೆ: ಅವನು ಯೆಹೋವನ ಅಭಿಷಿಕ್ತನಾದದರಿಂದ, ನನ್ನ ಕೈ ಅವನಿಗೆ ವಿರೋಧವಾಗಿ ಚಾಚಿ, ನನ್ನ ಸ್ವಾಮಿಗೆ ಈ ಕಾರ್ಯ ಮಾಡುವದು ನನಗೆ ದೂರವಾಗಿರಲಿ, ಅಂದನು. ಹೀಗೆ ದಾವೀದನು ತನ್ನ ಜನರನ್ನು ಸೌಲನ ಮೇಲೆ ಏಳಗೊಡದೆ, ಅವರನ್ನು ನಿಲ್ಲಿಸಿದನು. ಸೌಲನು ಎದ್ದು, ಗವಿಯನ್ನು ಬಿಟ್ಟು, ನಡೆದು ಹೋದನು. ತರುವಾಯ ದಾವೀದನು ಸಹ ಗವಿಯಿಂದ ಹೊರಟು, ಸೌಲನ ಹಿಂದೆ ಕೂಗಿದ್ದೇನಂದರೆ:—ಅರಸನಾದ ನನ್ನ ಸ್ವಾಮಿಯೇ, ಇಗೋ, ಯೆಹೋವನು ಈ ಹೊತ್ತು ಗವಿಯಲ್ಲಿ ನಿನ್ನನ್ನು ನನ್ನ ಕೈಯಲ್ಲಿ ಒಪ್ಪಿಸಿ ಕೊಟ್ಟನೆಂಬುವದನ್ನು ಈ ದಿನ ನೀನು ನೋಡುತ್ತೀ; ಆದರೆ ನನ್ನ ಕಣ್ಣು ನಿನ್ನನ್ನು ಕರುಣಿಸಿತು. ನನ್ನ ತಂದೆಯೇ, ನನ್ನ ಕೈಯಲ್ಲಿರುವ ನಿನ್ನ ನಿಲುವಂಗಿಯ ಶರಗನ್ನು ನೋಡು; ನನ್ನ ಕೈ ನಿನ್ನ ಮೇಲೆ ಇರುವದಿಲ್ಲ ಎಂದು ನೀನು ತಿಳು ಕೊಂಡು ನೋಡು, ಅಂದನು. ಸೌಲನು ಇದನ್ನು ಕೇಳಿ, ಅತ್ತನು. ಮತ್ತು ದಾವೀದನಿಗೆ: ನೀನು ನನಗಿಂತ ನೀತಿವಂತನು; ಯಾಕಂದರೆ ನೀನು ನನಗೆ ಒಳ್ಳೇದನ್ನು ಸಲ್ಲಿಸಿದಿ. ನೀನು ನಿಶ್ಚಯವಾಗಿ ಅರಸನಾಗುವಿ ಎಂದು ನಾ ಬಲ್ಲೆನು ಎಂದು ಹೇಳಿ, ತನ್ನ ಮನೆಗೆ ಹೋದನು. ಆದರೆ ಸ್ವಲ್ಪ ದಿವಸದ ಮೇಲೆ ಸೌಲನು ತಿರಿಗಿ ದಾವೀದನನ್ನು ಹಿಂದಟ್ಟುವದಕ್ಕೆ ಮೂರು ಸಾವಿರ ಜನರ ಸಂಗಡ ಹೊರಟು, ಜೀಫು ಅರಣ್ಯದಲ್ಲಿ ದಂಡಿಳಿದನು. ರಾತ್ರಿಯಲ್ಲಿ ದಾವೀದನೂ ದಾವೀದನ ಅಕ್ಕಳಾಗಿರುವ ಚೆರೂಯಳ ಮಗನಾದ ಅಬಿಷಯ್ಯನೂ ಸೌಲನ ದಂಡಿನ ಬಳಿಗೆ ಹೋದರು. ಆಗ ಇಗೋ, ಸೌಲನು ಮಧ್ಯದಲ್ಲಿ ಮಲಗಿ, ನಿದ್ರೆ ಮಾಡುತ್ತಿದ್ದನು; ಅವನ ಈಟಿಯು ಅವನ ತಲೆಗಿಂಬಿನ ದೆಶೆಯಲ್ಲಿ ನೆಟ್ಟಿತ್ತು. ಆದರೆ ಅವನ ಸುತ್ತಲು ಅವನ ಸೈನ್ಯಾಧಿಪತಿಯಾದ ಅಬ್ನೇರನೂ ಜನರೂ ಮಲಗಿದ್ದರು. ಆಗ ಅಬಿಷಯ್ಯನು ದಾವೀದನಿಗೆ: ಈ ಹೊ

ತ್ತು ದೇವರು ನಿನ್ನ ಶತ್ರುವನ್ನು ನಿನ್ನ ಕೈಯಲ್ಲಿ ಒಪ್ಪಿಸಿ ಕೊಟ್ಟಿದ್ದಾನೆ; ಈಗ ನಾನು ಅವನಿಗೆ ಈಟಿಯಿಂದ ಒಂದೇ ಪೆಟ್ಟು, ನೆಲಕ್ಕೆ ಹತ್ತುವ ಹಾಗೆ, ಹೊಡೆಯ ಅಪ್ಪಣೆ ಕೊಡ ಬೇಕು; ಎರಡು ಸಾರಿ ಹೊಡೆಯುವದಿಲ್ಲ, ಅಂದನು. ಆದರೆ ದಾವೀದನು ಅವನಿಗೆ: ಅವನನ್ನು ಸಂಹರಿಸ ಬೇಡ; ಯಾಕಂದರೆ ಅಪರಾಧವಿಲ್ಲದೆ ಯೆಹೋವನ ಅಭಿಷಿಕ್ತನಿಗೆ ವಿರೋಧವಾಗಿ ಕೈ ಹಾಕುವವನು ಯಾರು? ಅಂದನು. ಆಗ ದಾವೀದನು ಸೌಲನ ಈಟಿಯನ್ನೂ ನೀರಿನ ತಂಬಿಗೆಯನ್ನೂ ತೆಗೆದು ಕೊಂಡನು; ಮತ್ತು ಅವರು ಹೊರಟು ಹೋದರು. ಒಬ್ಬನಾದರೂ ನೋಡಿದ್ದಿಲ್ಲ, ಅರಿತಿದ್ದಿಲ್ಲ. ಯಾಕಂದರೆ ಯೆಹೋವನಿಂದ ಅಗಾಧ ನಿದ್ರೆಯು ಅವರ ಮೇಲೆ ಬಿದ್ದಿತ್ತು. ದಾವೀದನು ದಾಟಿ ಬಂದ ಮೇಲೆ, ದೂರವಾಗಿರುವ ಒಂದು ಬೆಟ್ಟದ ಕೊನೆಯ ಮೇಲೆ ನಿಂತು, ಕೂಗಿ, ಹೇಳಿದ್ದೇನಂದರೆ:—ಅಬ್ನೇರನೇ, ನೀನು ನಿನ್ನ ಸ್ವಾಮಿಯಾದ ಅರಸನನ್ನು ಕಾಯದೆ ಹೋದದ್ದೇನು? ಅರಸನ ತಲೆಗಿಂಬಿನ ಬಳಿಯಲ್ಲಿದ್ದ ಅವನ ಈಟಿಯೂ ನೀರಿನ ತಂಬಿಗೆಯೂ ಎಲ್ಲಿ ಅವೆಯೋ, ನೋಡು. ಆಗ ಸೌಲನು ದಾವೀದನ ಶಬ್ದವನ್ನು ತಿಳು ಕೊಂಡು: ನನ್ನ ಕುಮಾರನಾದ ದಾವೀದನೇ, ಇದು ನಿನ್ನ ಶಬ್ದವಲ್ಲವೋ? ನಾನು ಪಾಪ ಮಾಡಿದೆನು; ತಿರಿಗಿ ಬಾ; ಇನ್ನು ಮೇಲೆ ನಾನು ನಿನಗೆ ಕೇಡನ್ನು ಮಾಡೆನೆಂದು ಹೇಳಿದನು. ಆದರೆ ದಾವೀದನು ಈಟಿಯನ್ನೂ ತಂಬಿಗೆಯನ್ನೂ ಸೌಲನಿಗೆ ಕಳುಹಿಸಿ ಕೊಟ್ಟು, ತನ್ನ ಮಾರ್ಗವಾಗಿ ಹೋದನು. ಸೌಲನು ತನ್ನ ಸ್ಥಳಕ್ಕೆ ತಿರುಗಿದನು.

II. 59. III. 2. 17. 31.

---

# ೩೮. ಸೌಲನು ಸತ್ತದ್ದು, ದಾವೀದನು ಅರಸಾದದ್ದು.

(೧ ಸಮು. ೨೭—೨ ಸಮು. ೫.)

(ಸೃಷ್ಟಿಯಾದ ಮೇಲೆ ೨೯೫೦, ಕ್ರಿಸ್ತನ ಜನ್ಮದ ಮುಂಚೆ ೧೦೫೦.)

ದಾವೀದನು ತನ್ನ ಹೃದಯದಲ್ಲಿ: ನಾನು ಎಂದಿಗಾದರೂ ಒಂದು ದಿನ ಸೌಲನ ಕೈಯಿಂದ ಮಡಿದು ಹೋಗುತ್ತೇನೆ ಎಂದು ಹೇಳಿ, ಎದ್ದು, ತನ್ನ ಸಂಗಡಲಿದ್ದ ಆರುನೂರು ಜನರೊಡನೆ ಗಾತಿನ ಅರಸನಾಗಿರುವ ಅಕೀಷನ ಬಳಿಗೆ ದಾಟಿ ಹೋದನು. ಆಗ ಅಕೀಷನು ಅವನಿಗೆ ಚಿಕ್ಲಗ್ ಪಟ್ಣವನ್ನು ಕೊಟ್ಟನು. ಅಲ್ಲಿ ದಾವೀದನು ಒಂದು ವರುಷ ನಾಲ್ಕು ತಿಂಗಳು ವಾಸಿಸಿದ್ದನು. ಆ ಸಮಯದಲ್ಲಿ ಫಿಲಿಷ್ಟಿಯರು ಇಸ್ರಯೇಲ್ಯರ ಮೇಲೆ ಯುದ್ಧ ಮಾಡ ತಮ್ಮ ರಾಣುವೆಗಳನ್ನು ಕೂಡಿಸಿ ಕೊಂಡರು. ಆಗ ಅಕೀಷನು ದಾವೀದನಿಗೆ: ನೀನೂ ನಿನ್ನ ಜನರೂ ಯುದ್ಧವನ್ನು ಮಾಡ ನಮ್ಮ ಸಂಗಡ ಬರಬೇಕೆಂದು ತಿಳುಕೋ, ಅಂದನು. ಆದರೆ ಫಿಲಿಷ್ಟಿಯರ ಅಧಿಪತಿಗಳು: ಈ ಇಬ್ರಿಯರು ಯಾಕೆ? ಅಂದಾಗ, ಅಕೀಷನು ದಾವೀದನನ್ನೂ ಅವನ ಜನರನ್ನೂ ಹಿಂದಕ್ಕೆ ಕಳುಹಿಸಿದನು. ದಾವೀದನೂ ಅವನ ಜನರೂ ಮೂರನೇ ದಿವಸದಲ್ಲಿ ಚಿಕ್ಲಗಿಗೆ ಬಂದು ಶೇರುವಷ್ಟರಲ್ಲಿ, ಅಮಲೇಕ್ಯರು ಚಿಕ್ಲಗಿನ ಮೇಲೆ ಬಿದ್ದು, ಅದನ್ನು ಹೊಡೆದು, ಸುಟ್ಟು ಬಿಟ್ಟು, ಅದರಲ್ಲಿದ್ದ ಸ್ತ್ರೀಯರನ್ನೂ ಹಿರಿಯರನ್ನೂ ಕಿರಿಯರನ್ನೂ ಶೆರೆ ಹಿಡಿದು, ಕೊಂದು ಹಾಕದೆ, ಸುಲು ಕೊಂಡು ಹೋದರು. ದಾವೀದನೂ ಅವನ ಸಂಗಡಲಿದ್ದ ಜನರೂ ಅದನ್ನು ನೋಡಿದಾಗ, ಅತ್ತರು; ಮತ್ತು ಎದ್ದು, ಅಮಲೇಕ್ಯರನ್ನು ಹಿಂದಟ್ಟಿ, ಅವರನ್ನು ಹೊಡೆದು, ಅವರು ತಕ್ಕೊಂಡು ಹೋದದ್ದನ್ನೆಲ್ಲಾ ಬಿಡಿಸಿ, ತಿರಿಗಿ ತಕ್ಕೊಂಡು ಬಂದರು.

ಫಿಲಿಷ್ಟಿಯರು, ಇಸ್ರಯೇಲಿನ ಮೇಲೆ ಯುದ್ಧ ಮಾಡಿದಾಗ,

ಇಸ್ರಯೇಲ್ಯರು ಫಿಲಿಷ್ಟಿಯರ ಎದುರಿನಿಂದ ಓಡಿ ಹೋಗಿ, ಕೊಲ್ಲಲ್ಪಟ್ಟವರಾಗಿ ಬಿದ್ದರು. ಫಿಲಿಷ್ಟಿಯರು ಅರಸನಾದ ಸೌಲನನ್ನೂ ಅವನ ಕುಮಾರನಾದ ಯೋನತಾನನನ್ನೂ ಅಬಿನದಾಬನನ್ನೂ ಮಲ್ಕಿಷೂವನನ್ನೂ ಹೊಡೆದರು. ಇದಲ್ಲದೆ ಸೌಲನಿಗೆ ಯುದ್ಧವು ಭಾರವಾಗಿತ್ತು; ಅವನು ಬಿಲ್ಲುಗಾರರಿಂದ ಭಹು ಘಾಯ ಪಟ್ಟು, ತನ್ನ ಆಯುಧ ಹಿಡಿಯುವವನಿಗೆ: ಈ ಪರಿಛೇದನೆ ಇಲ್ಲದವರು ಬಂದು, ನನ್ನನ್ನು ತಿವಿದು ಬಿಟ್ಟು, ಅಪಮಾನ ಮಾಡದ ಹಾಗೆ, ನೀನು ನಿನ್ನ ಕತ್ತಿಯಿಂದ ನನ್ನನ್ನು ತಿವಿ, ಅಂದನು. ಆದರೆ ಅವನು ಬಹು ಭಯ ಪಟ್ಟದರಿಂದ, ಹಾಗೆ ಮಾಡಲೊಲ್ಲದೆ ಹೋದನು. ಆಗ ಸೌಲನು ತಾನೇ ಕತ್ತಿಯನ್ನು ತಕ್ಕೊಂಡು, ಅದರ ಮೇಲೆ ಬಿದ್ದು, ಸತ್ತನು.



ಸೌಲನು ಸತ್ತ ತರುವಾಯ ದಾವೀದನು ಅಮಲೇಕ್ಯರನ್ನು ಹೊಡೆದು, ಚಿಕ್ಲಗಿಗೆ ತಿರಿಗಿ ಬಂದು, ಎರಡು ದಿವಸ ಅಲ್ಲಿ ಇದ್ದ ಮೇಲೆ, ಇಗೋ, ಮೂರನೇ ದಿವಸದಲ್ಲಿ ತನ್ನ ವಸ್ತ್ರಗಳನ್ನು ಹರ ಕೊಂಡು, ತನ್ನ ತಲೆಯ ಮೇಲೆ ಮಣ್ಣು ಹೊಯಿದು ಕೊಂಡಿದ್ದ ಒಬ್ಬ ಅಮಲೇಕ್ಯನು ಬಂದು, ದಾವೀದನಿಗೆ: ಇಸ್ರಯೇಲ್ಯರು ಯುದ್ಧದಿಂದ ಓಡಿ ಹೋದರು; ಜನರಲ್ಲಿ ಅನೇಕರು ಸತ್ತರು; ಸೌಲನು ಅವನ ಮಗನಾದ ಯೋನತಾನನೂ ಸಹ ಸತ್ತರು; ಸೌಲನು ತನ್ನ

ಈಟಿಯ ಮೇಲೆ ಆತು ಕೊಂಡಿದ್ದಾಗ, ರಥಗಳೂ ರಾಹುತರೂ ಅವನನ್ನು ಹಿಂದಟ್ಟಿ ಕೊಂಡೇ ಇದ್ದರು. ಆಗಲವನು ನನ್ನನ್ನು ಕಂಡು, ಕರೆದು, ನನಗೆ: ನೀನು ದಯ ಮಾಡಿ, ನನ್ನನ್ನು ಕೊಂದು ಹಾಕು, ಅಂದನು; ಹೀಗೆ ನಾನು ಅವನನ್ನು ಕೊಂದು ಹಾಕಿದೆನು; ಮತ್ತು ಅವನ ಕಿರೀಟವನ್ನೂ ಖಡ್ಗವನ್ನೂ ನನ್ನ ಸ್ವಾಮಿಗೆ ಇಲ್ಲಿ ತಂದೆನು, ಅಂದನು. ಆಗ ದಾವೀದನೂ ಅವನ ಸಂಗಡಲಿದ್ದ ಸಮಸ್ತ ಜನರೂ ತಮ್ಮ ವಸ್ತ್ರಗಳನ್ನು ಹರ ಕೊಂಡು, ಗೋಳಾಡಿ, ಅತ್ತು, ಅಸ್ತಮಾನದ ವರೆಗೂ ಉಪವಾಸವಾಗಿದ್ದರು. ಮತ್ತು ದಾವೀದನು ಆ ಸುಳ್ಳು ವರ್ತಮಾನ ತಂದವನಿಗೆ: ಯೆಹೋವನ ಅಭಿಷಿಕ್ತನನ್ನು ಕೊಂದು ಹಾಕಿದೆನೆಂದು ನಿನ್ನ ಬಾಯಿ ನಿನಗೆ ವಿರೋಧವಾಗಿ ಸಾಕ್ಷಿ ಹೇಳಿದ್ದರಿಂದ, ನಿನ್ನ ರಕ್ತವು ನಿನ್ನ ತಲೆಯ ಮೇಲೆ ಇರಲಿ! ಎಂದು ಹೇಳಿ, ಅವನನ್ನು ಕೊಂದು ಹಾಕ ಬೇಕೆಂದು ಅಪ್ಪಣೆ ಕೊಟ್ಟನು. ಆ ತರುವಾಯ ದಾವೀದನು ಯೆಹೋವನ ಹತ್ತರ: ಯೆಹೂದದ ಪಟ್ಣಗಳಲ್ಲಿ ಯಾವದಕ್ಕಾದರೂ ಹೋಗಲೋ? ಎಂದು ಕೇಳಿ ಕೊಂಡನು. ಯೆಹೋವನು ಅವನಿಗೆ: ಹೋಗು, ಅಂದನು. ಹಾಗೆ ದಾವೀದನು ಹೆಬ್ರೋನಿಗೆ ಬಂದನು. ಆಗ ಯೆಹೂದನ ಮನುಷ್ಯರು ಬಂದು, ಅಲ್ಲಿ ದಾವೀದನನ್ನು ಯೆಹೂದನ ಮನೆಯವರ ಮೇಲೆ ಅರಸನಾಗ ಅಭಿಷೇಕಿಸಿದರು. ಆದರೆ ಸೌಲನ ಸೈನ್ಯಾಧಿಪತಿಯಾದ ಅಬ್ನೇರನು ಸೌಲನ ಮಗನಾದ ಇಷ್ಬೋಷತನನ್ನು ಮಿಕ್ಕಾದ ಇಸ್ರಯೇಲ್ಯರ ಮೇಲೆ ಅರಸನಾಗ ಮಾಡಿದನು. ಮತ್ತು ಸೌಲನ ಮನೆಗೂ ದಾವೀದನ ಮನೆಗೂ ಬಹಳ ದಿವಸ ಪರಿಯಂತರ ಯುದ್ಧವಿತ್ತು. ಆದರೆ ಆರು ವರುಷದ ಮೇಲೆ ಇಷ್ಬೋಷತನು ತನ್ನ ಜನರ ಕೈಯಿಂದ ಸತ್ತ ಮೇಲೆ ಮಿಕ್ಕಾದ ಗೋತ್ರಗಳು ದಾವೀದನ ಬಳಿಗೆ ಹೆಬ್ರೋನಿಗೆ ಬಂದು, ಅವನನ್ನು ಇಸ್ರಯೇಲೆಲ್ಲಾದರ ಮೇಲೆ ಅರಸನಾಗ ಮಾಡಿದರು.

II. 58. 38.

---

## ೩೮. ದಾವೀದನಿಗಾದ ವಾಗ್ದತ್ತವು, ಅವನ ಪಾಪವೂ ಮಾನಸಾಂತರವೂ.

(೨ ಸಮು. ೬—೧೨.)

೧) ಆಗ ಅರಸನಾದ ದಾವೀದನೂ ಅವನ ಜನರೂ ದೇಶದ ನಿವಾಸಿಗಳಾದ ಎಬೂಸಿಯರ ಬಳಿಗೆ ಯೆರೂಸಲೇಮಿಗೆ ಬಂದು, ಚಿಯೋನಿನ ಕೋಟೆಯನ್ನು ಹಿಡಿದರು. ಮತ್ತು ದಾವೀದನು ಕೋಟೆಯಲ್ಲಿ ವಾಸ ಮಾಡಿ, ಅದಕ್ಕೆ ದಾವೀದನ ಪಟ್ಟವೆಂದು ಹೆಸರಿಟ್ಟನು.

ಮತ್ತು ದಾವೀದನು ಇಸ್ರಯೇಲಿನಲ್ಲಿ ಮೂವತ್ತು ಸಾವಿರ ಮಂದಿಯನ್ನು ಆದು ಕೊಂಡು, ದೇವರ ಪೆಟ್ಟಿಗೆಯನ್ನು ಕಿರ್ಯತ್ಯಾರೀಮಿನಿಂದ ಜಯ ಧ್ವನಿಯಿಂದಲೂ ತುತೂರಿಯ ಶಬ್ದದಿಂದಲೂ ದಾವೀದನ ಪಟ್ಟಕ್ಕೆ ತಕ್ಕೊಂಡು ಬಂದರು. ಯೆಹೋವನು ಅರಸನನ್ನು ಅವನ ಸುತ್ತಲಿದ್ದ ಎಲ್ಲಾ ಶತ್ರುಗಳಿಂದ ತಪ್ಪಿಸಿ, ಅವನಿಗೆ ವಿಶ್ರಾಂತಿಯನ್ನು ಕೊಟ್ಟ ತರುವಾಯ, ಅವನು: ನಾನು ದೇವದಾರುಗಳ ಮನೆಯಲ್ಲಿ ವಾಸವಾಗಿದ್ದೇನೆ; ಆದರೆ ದೇವರ ಪೆಟ್ಟಿಗೆಯು ತೆರೆಗಳಲ್ಲಿ ವಾಸವಾಗಿದೆ ಎಂದು ಹೇಳಿ, ಒಂದು ದೇವಾಲಯವನ್ನು ಕಟ್ಟಿಸ ಬೇಕೆಂದು, ಆಲೋಚನೆ ಮಾಡಿದನು. ಆದರೆ ಯೆಹೋವನ ವಾಕ್ಯವು ಪ್ರವಾದಿಯಾದ ನತಾನನಿಗೆ ರಾತ್ರಿಯಲ್ಲಿ ಉಂಟಾಗಿ ಹೇಳಿದ್ದೇನಂದರೆ:—ನೀನು ನನ್ನ ಸೇವಕನಾದ ದಾವೀದನ ಬಳಿಗೆ ಹೋಗಿ, ಅವನಿಗೆ ಹೇಳ ಬೇಕಾದದ್ದೇನಂದರೆ, ನಾನು ವಾಸವಾಗಿರಲಿಕ್ಕೆ ನೀನು ನನಗೆ ಮನೆಯನ್ನು ಕಟ್ಟುವಿಯೋ? ನಿಶ್ಚಯವಾಗಿ ನಾನು ಐಗುಪ್ತದಿಂದ ಇಸ್ರಯೇಲ್ಯರನ್ನು ಬರ ಮಾಡಿದ ಕಾಲ ಮೊದಲ್ಗೊಂಡು ಇಂದಿನ ವರೆಗೂ ಮನೆಯಲ್ಲಿ ವಾಸ ಮಾಡದೆ, ಗುಡಾರಗಳಲ್ಲಿ ವಾಸ ಮಾಡಿ ಕೊಂಡಿದ್ದೇನೆ. ನೀನು ಬಹು ರಕ್ತವನ್ನು ಚೆಲ್ಲಿದಿ; ಮಹಾ ಯುದ್ಧಗಳನ್ನು ಮಾಡಿದಿ;

ನೀನು ನನ್ನ ಹೆಸರಿಗೆ ಮನೆಯನ್ನು ಕಟ್ಟಿಸ ಬೇಡ; ಆದರೆ ನಾನು ನಿನಗೆ ಮನೆಯನ್ನು ಉಂಟು ಮಾಡುವೆನು. ಇಗೋ, ವಿಶ್ರಾಂತಿಯುಳ್ಳ ಮನುಷ್ಯನಾಗಿರುವ ಒಬ್ಬ ಮಗನು ನಿನಗೆ ಹುಟ್ಟುವನು; ಅವನಿಗೆ ಸೊಲೊಮೋನನೆಂಬ ಹೆಸರಾಗುವದು; ಅವನು ನನ್ನ ನಾಮಕ್ಕೆ ಮನೆಯನ್ನು ಕಟ್ಟಿಸುವನು; ನಾನು ಅವನ ರಾಜ್ಯದ ಸಿಂಹಾಸನವನ್ನು ಯುಗಯುಗಾಂತರಕ್ಕೆ ಸ್ಥಿರ ಮಾಡುವೆನು; ನಾನು ಅವನಿಗೆ ತಂದೆಯಾಗಿರುವೆನು; ಅವನು ನನಗೆ ಮಗನಾಗಿರುವನು; ನಿನ್ನ ಮನೆಯನ್ನೂ ನಿನ್ನ ರಾಜ್ಯವನ್ನೂ ನಿನ್ನ ಮುಂದೆ ಯುಗಯುಗಾಂತರಕ್ಕೆ ಸ್ಥಿರ ಮಾಡುವೆನು ಎಂದು ಹೇಳು, ಅಂದನು. ನತಾನನು ಈ ಸಕಲ ವಾಕ್ಯಗಳನ್ನು ದಾವೀದನ ಸಂಗಡ ಮಾತಾಡಿದನು. ಆಗ ಅರಸನಾದ ದಾವೀದನು ಒಳಗೆ ಪ್ರವೇಶಿಸಿ, ಯೆಹೋವನ ಮುಂದೆ ನಿಂತು, ಹೇಳಿದ್ದೇನಂದರೆ:—ಕರ್ತನಾದ ಯೆಹೋವನೇ, ನೀನು ನನ್ನನ್ನು ಇಷ್ಟು ಪರಿಯಂತರಕ್ಕೂ ತಂದದ್ದಕ್ಕೆ ನಾನು ಎಷ್ಟರವನು? ನನ್ನ ಮನೆ ಎಷ್ಟರದು? ಇದಲ್ಲದೆ ನೀನು ಮುಂದೆ ಬರುವ ಬಹು ಕಾಲದ ಮಾತು ನಿನ್ನ ದಾಸನ ಮನೆಯನ್ನು ಕುರಿತು ಹೇಳಿದಿ. ಕರ್ತನಾದ ಯೆಹೋವನೇ, ಇದು ಮನುಷ್ಯನ ನ್ಯಾಯವೋ? ನಿನ್ನ ವಾಕ್ಯದ ನಿಮಿತ್ತವಾಗಿಯೂ ನಿನ್ನ ಹೃದಯದ ಪ್ರಕಾರವಾಗಿಯೂ ನಿನ್ನ ದಾಸನಿಗೆ ತಿಳಿಯ ಮಾಡುವ ಹಾಗೆ, ಈ ದೊಡ್ಡ ಕಾರ್ಯಗಳನ್ನೆಲ್ಲಾ ಮಾಡಿದಿ.

ಆ ಮೇಲೆ ದಾವೀದನು ಫಿಲಿಷ್ಟಿಯರನ್ನು ಹೊಡೆದು, ಮೋವಾಬ್ಯರನ್ನು ವಶ ಮಾಡಿ ಕೊಂಡನು. ಅರಾಮ್ಯರನ್ನು ಜೈಸಿ, ಎದೋಮ್ಯರನ್ನು ತನಗೆ ದಾಸರು ಮಾಡಿ ಕೊಂಡನು. ದಾವೀದನು ಎಲ್ಲಿಗೆ ಹೋದರೂ ಯೆಹೋವನು ಅವನಿಗೆ ಸಹಾಯ ಮಾಡಿದನು.

೨) ಮತ್ತು ದಾವೀದನು ಅಮ್ಮೋನನ ಮಕ್ಕಳನ್ನು ಸಂಹರಿಸಲಿಕ್ಕೆ ಸೈನ್ಯಾಧಿಪತಿಯಾದ ಯೊವಾಬನನ್ನೂ ಸಮಸ್ತ ಇಸ್ರಾಯೇ

ಲ್ಯರನ್ನೂ ಕಳುಹಿಸಿದನು. ಆದರೆ ದಾವೀದನು ಯೆರೂಸಲೇಮಿನಲ್ಲಿಯೇ ನಿಂತನು. ಮತ್ತು ಅವನು ಒಂದು ದಿನ ಸಾಯಂಕಾಲದಲ್ಲಿ ಅರಮನೆಯ ಉಪ್ಪರಿಗೆಯ ಮೇಲೆ ತಿರುಗಾಡುತ್ತಾ ಇದ್ದಾಗ, ಸ್ನಾನ ಮಾಡುತ್ತಿರುವ ಸೌಂದರ್ಯ ರೂಪ ಉಳ್ಳ ಸ್ತ್ರೀಯನ್ನು ನೋಡಿದನು. ಅವಳು ದಂಡಿನ ಸಂಗಡ ಹೋಗಿದ್ದ ಊರೀಯನ ಹೆಂಡತಿಯಾಗಿರುವ ಬತ್ಶೇಬಳು ಆಗಿದ್ದಳು. ದಾವೀದನು ಅವಳನ್ನು ಕರೆಸಿ, ಅವಳ ಸಂಗಡ ಮಲಗಿದನು.

ಆಗ ದಾವೀದನು ಯೊವಾಬನಿಗೆ ಒಂದು ಪತ್ರಿಕೆಯನ್ನು ಬರೆದನು, ಏನಂದರೆ:—ಊರೀಯನನ್ನು ಯುದ್ಧ ಬಲವಾಗಿರುವಲ್ಲಿ ನಿಲ್ಲಿಸಿ, ಅವನು ಹೊಡೆಯಲ್ಪಟ್ಟು ಸಾಯುವ ಹಾಗೆ, ಅವನನ್ನು ಬಿಟ್ಟು, ಹಿಂದಕ್ಕೆ ಸರಿಯಿರಿ. ಯೊವಾಬನು ಹಾಗೆಯೇ ಮಾಡಿದ್ದರಿಂದ ಊರೀಯನು ಸತ್ತನು. ಆ ಮೇಲೆ ದಾವೀದನು ಬತ್ಶೇಬಳನ್ನು ತನ್ನ ಮನೆಗೆ ಕರೇ ಕಳುಹಿಸಿದನು. ಅವಳು ಅವನಿಗೆ ಹೆಂಡತಿಯಾಗಿ ಒಬ್ಬ ಮಗನನ್ನು ಹೆತ್ತಳು. ಆದರೆ ದಾವೀದನು ಮಾಡಿದ ಈ ಕಾರ್ಯವು ಯೆಹೋವನ ದೃಷ್ಟಿಗೆ ಕೆಟ್ಟದ್ದಾಗಿತ್ತು.

ಹೀಗಿರುವದರಿಂದ ಯೆಹೋವನು ಪ್ರವಾದಿಯಾದ ನತಾನನನ್ನು ದಾವೀದನ ಬಳಿಗೆ ಕಳುಹಿಸಿದನು. ಇವನು ಅವನಿಗೆ ಹೇಳಿದ್ದೇನಂದರೆ:—ಒಂದು ಪಟ್ಟಣದಲ್ಲಿ ಇಬ್ಬರು ಮನುಷ್ಯರು ಇದ್ದರು; ಒಬ್ಬನು ಐಶ್ವರ್ಯವಂತನು, ಮತ್ತೊಬ್ಬನು ದರಿದ್ರನು. ಐಶ್ವರ್ಯವಂತನಿಗೆ ಕುರಿ ದನಗಳು ಬಹಳವಾಗಿದ್ದವು. ಆದರೆ ದರಿದ್ರನಿಗೆ ತಾನು ಕೊಂಡು ಬದುಕಿಸಿದ ಒಂದು ಚಿಕ್ಕ ಹೆಣ್ಣು ಕುರಿಮರಿಯ ಹೊರ್ತು ಬೇರೆ ಒಂದು ಇರಲಿಲ್ಲ. ಅದು ಅವನ ಸಂಗಡಲೂ ಅವನ ಮಕ್ಕಳ ಸಂಗಡಲೂ ಬೆಳೆದು, ಅವನ ತುಂಡು ತಿಂದು, ಅವನ ಪಾತ್ರೆಯಲ್ಲಿ ಕುಡಿದು, ಅವನ ಮಗ್ಗುಲಲ್ಲಿ ಮಲಗಿ ಕೊಂಡು, ಅವನಿಗೆ ಕುಮಾರ್ತೆಯ ಹಾಗೆ ಇತ್ತು. ಹೀಗಿರಲಾಗಿ ಐಶ್ವರ್ಯವಂತನ ಬಳಿಗೆ ಒಬ್ಬ ಮಾರ್ಗಸ್ಥನು ಬಂದಾಗ, ಇವನಿಗೆ ಅಡಿಗೆಯನ್ನು ಮಾಡಿಸ

ತನ್ನ ಕುರಿ ದನಗಳಲ್ಲಿ ಒಂದನ್ನು ತಕೊಳ್ಳ ಮನಸ್ಸಿಲ್ಲದೆ, ಆ ದರಿದ್ರನ ಕುರಿಯನ್ನು ತಕ್ಕೊಂಡು, ಅಡಿಗೆಯನ್ನು ಮಾಡಿಸಿದನು.

ಆಗ ದಾವೀದನು ಆ ಮನುಷ್ಯನ ಮೇಲೆ ಬಹಳ ಕೋಪಿಸಿಕೊಂಡು, ನತಾನನಿಗೆ: ಯೆಹೋವನ ಜೀವದಾಣೆ, ಇದನ್ನು ಮಾಡಿದ ಆ ಮನುಷ್ಯನು ಮರಣಕ್ಕೆ ಪಾತ್ರನಾಗಿದ್ಧಾನೆ, ಅಂದನು. ಆಗ ನತಾನನು ದಾವೀದನಿಗೆ: ನೀನೆ ಆ ಮನುಷ್ಯನು, ಇಸ್ರಯೇಲಿನ



ದೇವರಾದ ಯೆಹೋವನು ಹೇಳುವದೇನಂದರೆ—ನಾನು ನಿನ್ನನ್ನು ಇಸ್ರಯೇಲಿನ ಮೇಲೆ ಅರಸನಾಗಿ ಅಭಿಷೇಕ ಮಾಡಿ, ನಿನ್ನನ್ನು ಸಾಲನ ಕೈಗೆ ತಪ್ಪಿಸಿ ಬಿಟ್ಟೆನು. ನೀನು ಯೆಹೋವನ ದೃಷ್ಟಿಗೆ ಈ ಕೆಟ್ಟ ಕಾರ್ಯವನ್ನು ಮಾಡುವ ಹಾಗೆ, ಅವನ ಮಾತನ್ನು ತಿರಸ್ಕರಿಸಿದ್ದೇನು? ಉರೀಯನನ್ನು ಕತ್ತಿಯಿಂದ ಹೊಡೆಯ ಮಾಡಿ, ಅವನ ಹೆಂಡತಿಯನ್ನು ನಿನ್ನ ಹೆಂಡತಿಯಾಗಿ ತೆಗೆದು ಕೊಂಡಿ; ಅದು ಕಾರಣ ಯೆಹೋವನು ಹೇಳುವದೇನಂದರೆ—ಇಗೋ, ನಾನು ನಿನ್ನ ಮನೆಯಲ್ಲಿ ನಿನಗೆ ವಿರೋಧವಾಗಿ ಕೆಟ್ಟದ್ದನ್ನು ಏಳ ಮಾಡುವೆನು, ಅಂದನು. ಆಗ ದಾವೀದನು ನತಾನನಿಗೆ: ನಾನು ಯೆಹೋವನಿಗೆ ವಿರೋಧವಾಗಿ ಪಾಪ ಮಾಡಿದೆನು, ಅಂದನು. ನತಾನನು ದಾವೀದನಿಗೆ; ನೀನು ಸಾಯದ ಹಾಗೆ ಯೆಹೋವನು ನಿನ್ನ ಪಾಪವನ್ನು ಪರಿಹರಿಸಿದನು. ಆದರೆ ಈ ಕಾರ್ಯದಿಂದ ನೀನು ಯೆಹೋವನ

ಶತ್ರುಗಳಿಗೆ ಬಹಳವಾಗಿ ಅಸಂಹಿಸ ಆಸ್ಪದ ಕೊಟ್ಟ ಕಾರಣ, ನಿನಗೆ ಹುಟ್ಟಿದ ಮಗುವು ಸಾಯಲೇ ಸಾಯುವದು, ಅಂದನು. ಆಗ ನತಾನನು ತನ್ನ ಮನೆಗೆ ಹೋದನು. ಮತ್ತು ಯೆಹೋವನು ಉರೀಯನ ಹೆಂಡತಿಯು ದಾವೀದನಿಗೆ ಹೆತ್ತ ಕೂಸನ್ನು ಶ್ರಮೆ ಪಡಿಸಿದನು. ಅದು ಏಳನೇ ದಿವಸದಲ್ಲಿ ಸತ್ತು ಹೋಯಿತು.

೩) ಪ್ರವಾದಿಯಾದ ನತಾನನು ದಾವೀದನ ಬಳಿಗೆ ಬಂದು, ಅವನ ಪಾಪವನ್ನು ಅವನಿಗೆ ತೋರಿಸಿ ಕೊಟ್ಟ ಮೇಲೆ, ದಾವೀದನು ಪ್ರಾರ್ಥನೆ ಮಾಡಿ, ಹೇಳಿದ್ದೇನಂದರೆ:—ದೇವರೇ, ನಿನ್ನ ಕೃಪೆಯ ಪ್ರಕಾರ ನನಗೆ ದಯ ಮಾಡು; ನಿನ್ನ ಅಂತಃಕರಣದ ಬಾಹುಳ್ಯದ ಪ್ರಕಾರ ನನ್ನ ದ್ರೋಹಗಳನ್ನು ಅಳಿಸಿ ಬಿಡು; ನನ್ನ ಅಕ್ರಮದಿಂದ ನನ್ನನ್ನು ಪೂರ್ಣವಾಗಿ ತೊಳಿ; ನನ್ನ ಪಾಪದಿಂದ ನನ್ನನ್ನು ಶುಚಿ ಮಾಡು; ಯಾಕಂದರೆ ನನ್ನ ದ್ರೋಹಗಳನ್ನು ನಾನು ತಿಳಿದಿದ್ದೇನೆ; ನನ್ನ ಪಾಪವು ಯಾವಾಗಲೂ ನನ್ನ ಮುಂದೆ ಅದೆ. ನಿನಗೆ, ನಿನಗೊಬ್ಬನಿಗೆ ವಿರೋಧವಾಗಿ ಪಾಪ ಮಾಡಿ, ನಿನ್ನ ದೃಷ್ಟಿಯಲ್ಲಿ ಈ ಕೇಡನ್ನು ಮಾಡಿದ್ದೇನೆ; ಯೆಹೋವನೇ, ನನ್ನಲ್ಲಿ ಶುದ್ಧ ಹೃದಯವನ್ನು ಸೃಷ್ಟಿಸಿ, ದೃಢವಾದ ಆತ್ಮವನ್ನು ನನ್ನ ಅಂತರಂಗದಲ್ಲಿ ನೂತನ ಪಡಿಸು; ನಿನ್ನ ಸಮುಖದಿಂದ ನನ್ನನ್ನು ಹೊರಗೆ ಹಾಕ ಬೇಡ; ನಿನ್ನ ಪರಿಶುದ್ಧಾತ್ಮವನ್ನು ನನ್ನಿಂದ ತೆಗೆದು ಕೊಳ್ಳ ಬೇಡ.

ಆದರೆ ಪಾಪ ಪರಿಹಾರವನ್ನು ಹೊಂದಿದ ಮೇಲೆ ದಾವೀದನು ಹೇಳಿದ್ದೇನಂದರೆ:—ನನ್ನ ಪ್ರಾಣವೇ, ಕರ್ತನನ್ನು, ನನ್ನ ಎಲ್ಲಾ ಅಂತರಂಗವೇ, ಆತನ ಪರಿಶುದ್ಧವಾದ ಹೆಸರನ್ನು ಆಶೀರ್ವದಿಸು. ಅವನು ನಿನ್ನ ಅಕ್ರಮಗಳನ್ನೆಲ್ಲಾ ಮನ್ನಿಸಿ, ನಿನ್ನ ರೋಗಗಳನ್ನೆಲ್ಲಾ ಸ್ವಸ್ಥ ಮಾಡಿ, ನಿನ್ನ ಜೀವವನ್ನು ನಾಶನದೊಳಗಿಂದ ಬಿಡಿಸಿ, ಕೃಪೆ ಅಂತಃಕರಣಗಳನ್ನು ನಿನಗೆ ಕಿರೀಟವಾಗಿ ಇಡುವನು. ಮನುಷ್ಯನಾದರೆ, ಅವನ ದಿವಸಗಳು ಹುಲ್ಲಿನ ಹಾಗೆ ಅವೆ; ಹೊಲದ ಹುಲ್ಲಿನ ಹಾಗೆಯೇ ಅರುಳುತ್ತಾನೆ. ಯಾಕಂದರೆ ಘಾಳಿಯು ಅದರ

ಮೇಲೆ ಬೀಸುತ್ತಲೇ ಇಲ್ಲದೆ ಹೋಗುತ್ತದೆ. ಅದರ ಸ್ಥಳವು ಅದನ್ನು ಇನ್ನೂ ಅರಿಯದು. ಆದರೆ ಯೆಹೋವನ ಕೃಪೆಯು ಅವನಿಗೆ ಭಯ ಪಡುವವರೆಲ್ಲರ ಮೇಲೆ ಯುಗ ಯುಗದಿಂದ ಯುಗ ಯುಗಕ್ಕೂ ಇರುವದು. ಮತ್ತು ಅವನ ನೀತಿಯು ಅವನ ಒಡಂಬಡಿಕೆಯನ್ನೂ ಕೈಕೊಂಡು, ಅವನ ಎಲ್ಲಾ ಕಟ್ಟಳೆಗಳನ್ನು ನೆನಸಿ ಮಾಡುವವರಿಗೂ ಅವರ ಮಕ್ಕಳ ಮಕ್ಕಳಿಗೂ ಇರುವದು. ಆ ಮೇಲೆ ಬತ್ಶೇಬಳು ದಾವೀದನಿಗೆ ಒಬ್ಬ ಮಗನನ್ನು ಹೆತ್ತಳು. ಅವನಿಗೆ ಸೊಲೊಮೋನನೆಂದು ಹೆಸರಿಟ್ಟನು. ಯೆಹೋವನು ಅವನನ್ನು ಪ್ರೀತಿ ಮಾಡಿದನು. ಮತ್ತು ದಾವೀದನು ಅವನನ್ನು ಪ್ರವಾದಿಯಾದ ನತಾನನ ಕೈಯಲ್ಲಿ ಒಪ್ಪಿಸಿದನು.

II. 7. 109. I. 21. ಬಾ. 52. III. 20.

---

## ೪೦. ಅಬ್ಶಲೋಮನು.

(೨ ಸಮು. ೧೩ — ೨೦.)

೧) ತರುವಾಯ ಏನಾಯಿತಂದರೆ, ದಾವೀದನ ಮಗನಾದ ಅಬ್ಶಲೋಮನು ತನ್ನ ಸಹೋದರನಾದ ಅಮ್ನೋನನನ್ನು ಕೊಂದು ಹಾಕಿದನು; ಯಾಕಂದರೆ ಅಮ್ನೋನನು ಅಬ್ಶಲೋಮನ ಸಹೋದರಿಯಾದ ತಾಮರಳನ್ನು ಬಲಾತ್ಕಾರದಿಂದ ಕೆಡಿಸಿದ್ದನು. ದಾವೀದನು ಅಬ್ಶಲೋಮನ ಮೇಲೆ ಬಹಳ ಕೋಪ ಮಾಡಿದರಿಂದ, ಅಬ್ಶಲೋಮನು ಓಡಿ ಹೋಗಿ, ಐದು ವರುಷ ಮಟ್ಟಿಗೂ ತನ್ನ ತಂದೆಯ ಮುಖವನ್ನು ನೋಡಲಿಲ್ಲ. ತರುವಾಯ ಸೈನ್ಯಾಧಿಪತಿಯಾದ ಯೊವಾಬನು ಅವನಿಗೋಸ್ಕರ ದಾವೀದನ ಹತ್ತರ ಬೇಡಿ ಕೊಂಡಾಗ, ದಾವೀದನು ಅಬ್ಶಲೋಮನನ್ನು ತರಿಸಿ, ಮುದ್ದಿಟ್ಟು ಕೊಂಡನು. ಆದರೆ ಸಮಸ್ತ ಇಸ್ರಯೇಲಲ್ಲಿ ಅಬ್ಶಲೋಮನಿಗೆ ಸಮಾನವಾದ ಸೌಂದರ್ಯ ಉಳ್ಳವನು ಒಬ್ಬನೂ ಇರಲಿಲ್ಲ; ಅಂಗಾಲು

ಮೊದಲ್ಗೊಂಡು ನಡುನೆತ್ತಿಯ ವರೆಗೂ ಅವನಲ್ಲಿ ಒಂದು ಕಳಂಕವಾದರೂ ಇಲ್ಲದೆ ಇತ್ತು. ಮತ್ತು ಅಬ್ಶಲೋಮನು ಇಚ್ಛಕ ಮಾತುಗಳಿಂದಲೂ ಮರ್ಯಾದೆಯಿಂದಲೂ ಇಸ್ರಯೇಲ್ಯರ ಹೃದಯಗಳನ್ನು ಕದ್ದು ಕೊಂಡನು. ಒಂದು ದಿನ ಅಬ್ಶಲೋಮನು ಹರಿಕೆಯನ್ನು ಸಲ್ಲಿಸುತ್ತೇನೆಂದು, ಇನ್ನೂರು ಜನರನ್ನು ಕರ ಕೊಂಡು ಹೆಬ್ರೋನಿಗೆ ಹೋದನು. ಅಲ್ಲಿ ಅವನು ತುತೂರಿಗಳನ್ನು ಊದಿಸಿ, ಅಬ್ಶಲೋಮನು ಹೆಬ್ರೋನಿನಲ್ಲಿ ಅರಸನಾದನು ಎಂದು, ಪ್ರಕಟಿಸಿದನು. ಅವನು ಬಲಿಗಳನ್ನು ಅರ್ಪಿಸುತ್ತಿರುವಾಗ ಅವನ ಸಂಗಡ ಕೂಡುವ ಜನರು ಆಗಾಗ್ಯೆ ಹೆಚ್ಚಿದ್ದರಿಂದ, ಒಳಸಂಚಿನ ಗುಂಪು ಬಲವಾಯಿತು. ದಾವೀದನು ಯೆರೂಸಲೇಮಿನಲ್ಲಿ ಈ ವರ್ತಮಾನವನ್ನು ಕೇಳಿದಾಗ, ಅವನು ತನ್ನ ಸೇವಕರಿಗೆ: ಏಳಿರಿ! ನಾವು ಓಡಿ ಹೋಗುವ; ಇಲ್ಲದಿದ್ದರೆ, ಅಬ್ಶಲೋಮನ ಕೈಗೆ ತಪ್ಪಿಸಿ ಕೊಂಡು ಹೋಗಲಾರೆವು, ಅಂದನು. ಹೀಗೆ ಅರಸನು ಕಿದ್ರೋನ್ ಹಳ್ಳವನ್ನು ದಾಟಿ, ಅಳುತ್ತಾ, ತನ್ನ ಮುಖವನ್ನು ಮುಚ್ಚಿ ಕೊಂಡು, ಬರಿಗಾಲಾಗಿ ಇಪ್ಪೇ ಗುಡ್ಡವನ್ನು ಏರಿದನು. ಅವನ ಸಂಗಡ ಇರುವ ಸಮಸ್ತ ಜನರೂ ತಮ್ಮ ತಮ್ಮ ಮುಖಗಳನ್ನು ಮುಚ್ಚಿ ಕೊಂಡು, ಅಳುತ್ತಾ ಮೇಲಕ್ಕೆ ಏರಿದರು. ಅರಸನಾದ ದಾವೀದನು ಬಹೂರಿಮಿನ ಮಟ್ಟಿಗೂ ಬಂದಾಗ, ಇಗೋ, ಸೌಲನ ಗೋತ್ರದವನಾದ ಶಿಮ್ಯೆ ಎಂಬ ಮನುಷ್ಯನು ಅಲ್ಲಿಂದ ಹೊರಟು, ದಾವೀದನನ್ನು ದೂಷಿಸಿ: ರಕ್ತದ ಮನುಷ್ಯನೇ, ಹೊರಗೆ ಹೋಗು! ಅಂದನು. ಆಗ ಅಬಿಷಯ್ಯನು ಅರಸನಿಗೆ: ನಾನು ಹೋಗಿ, ಅವನ ತಲೆಯನ್ನು ತೆಗದು ಕೊಳ್ಳ ಅಪ್ಪಣೆ ಆಗಲಿ, ಅಂದನು. ಆದರೆ ಅರಸನು: ಬೇಡ, ಅವನು ನನ್ನನ್ನು ದೂಷಿಸಲಿ; ಯಾಕಂದರೆ ಯೆಹೋವನು ಅವನಿಗೆ ಹೇಳಿದ್ದಾನೆ, ಅಂದನು.

ಮತ್ತು ಅಬ್ಶಲೋಮನೂ ಇಸ್ರಯೇಲ್ಯ ಮನುಷ್ಯರಾದ ಸಮಸ್ತ ಜನರೂ ಯೆರೂಸಲೇಮಿಗೆ ಬಂದರು. ಅಲ್ಲಿಂದ ಅವರು

ಯೊರ್ದನನ್ನು ದಾಟಿ, ದಾವೀದನನ್ನು ಹಿಂದಟ್ಟಿದರು. ಮತ್ತು ದಾವೀದನು ತನ್ನ ಸಂಗಡಲಿದ್ದ ಜನರನ್ನು ಮೂರು ಪಾಲು ಮಾಡಿ, ಕ್ರಮವಾಗಿ ಇರಿಸಿ, ತಾನೂ ಬರುತ್ತೇನೆ ಎಂದು ಹೇಳಿದನು. ಆದರೆ ಜನರು: ನೀನು ನಮ್ಮ ಸಂಗಡ ಬರ ಬೇಡ; ಯಾಕಂದರೆ ನೀನಾದರೆ ನಮ್ಮ ಸಮಾನವಾದ ಹತ್ತು ಸಾವಿರ ಜನಕ್ಕೆ ಸರಿಯಾಗಿದ್ಧೀ; ಈಗ ನೀನು ಪಟ್ಟಣದಲ್ಲಿದ್ದು, ನಮಗೆ ಸಹಾಯವಾಗಿರುವದು ಉತ್ತಮ, ಅಂದರು. ಆಗ ಅರಸನು ಜನರೆಲ್ಲರಿಗೆ ಕೇಳುವ ಹಾಗೆ ಅಧಿಪತಿಗಳೆಲ್ಲರಿಗೆ ಆಜ್ಞಾಪಿಸಿ, ಹೇಳಿದ್ದೇನಂದರೆ: ನನಗೋಸ್ಕರ ಪ್ರಾಯಸ್ಥನಾದ ಅಬ್ಶಲೋಮನಿಗೆ ಮೆಲ್ಲಗಿರ್ರಿ. ಹೀಗೆ ಜನರು ಇಸ್ರಯೇಲ್ಯರಿಗೆ ವಿರೋಧವಾಗಿ ಹೊರಟರು. ಇಸ್ರಯೇಲ್ ಜನರು ದಾವೀದನ ಸೇವಕರ ಮುಂದೆ ಸಂಹಾರವಾದರು. ಇಪ್ಪತ್ತು ಸಾವಿರ ಜನರು ಬಿದ್ದರು. ಆದರೆ ಅಬ್ಶಲೋಮನು ಹಾಸರ ಕತ್ತೆಯ ಮೇಲೆ ಏರಿ ಇದ್ದನು. ಆ ಹಾಸರ ಕತ್ತೆಯು ಒಂದು ದೊಡ್ಡ ಏಲಾಮರದ ಬಲವಾದ ಕೊಂಬೆಗಳ ಕೆಳಗೆ ಬಂದಾಗ, ಅವನ ತಲೆಯು ಆ ಮರದ ಕೊಂಬೆಯಲ್ಲಿ ಶಿಕ್ಕಿ ಕೊಂಡಿತು. ಆದದರಿಂದ ಅವನು ಆಕಾಶಕ್ಕೂ ಭೂಮಿಗೂ ಮಧ್ಯದಲ್ಲಿ ತೂಗ್ಯಾಡುತ್ತಿದ್ದನು. ಹಾಸರ ಕತ್ತೆಯು ಹಾದು ಹೋಯಿತು. ಒಬ್ಬನು ನೋಡಿ, ಅದನ್ನು



ಯೊವಾಬನಿಗೆ ತಿಳಿಸಿದನು. ಅದಕ್ಕೆ ಯೊವಾಬನು: ಇಗೋ, ಅವನನ್ನು ಯಾಕೆ ಅಲ್ಲಿ ನೆಲಕ್ಕೆ ಹೊಡೆದು ಬಿಡಲಿಲ್ಲ? ಅಂದನು. ಆ

ದರೆ ಆ ಮನುಷ್ಯನು ಯೊವಾಬನಿಗೆ: ನೀನು ನನ್ನ ಕೈಯಲ್ಲಿ ಸಾವಿರ ರೂಪಾಯಿಗಳನ್ನು ಕೊಟ್ಟರೂ, ನಾನು ಅರಸನ ಮಗನ ಮೇಲೆ ನನ್ನ ಕೈ ಚಾಚುವದಿಲ್ಲ; ಯಾಕಂದರೆ ಅಬ್ಸಲೋಮನೆಂಬ ಪ್ರಾಯಸ್ಥನಿಗೆ ಯಾರೂ ನಷ್ಟ ಮಾಡದ ಹಾಗೆ ಜಾಗ್ರತೆಯಾಗಿರಿ ಎಂದು ಅರಸನು ಆಜ್ಞಾಪಿಸಿದನು, ಅಂದನು. ಆಗ ಯೊವಾಬನು ಮೂರು ಭಲ್ಯಗಳನ್ನು ತೆಗದು ಕೊಂಡು, ಅಬ್ಸಲೋಮನು ಇನ್ನೂ ಏಲಾ ಮರದಲ್ಲಿ ಜೀವದಿಂದಿರುವಾಗ, ಅವುಗಳನ್ನು ಅವನ ಹೃದಯದಲ್ಲಿ ತಿವಿದನು. ಮತ್ತು ಅವರು ಅಬ್ಸಲೋಮನನ್ನು ಅಡವಿಯಲ್ಲಿರುವ ಒಂದು ದೊಡ್ಡ ಕುಣಿಯಲ್ಲಿ ಹಾಕಿ, ಅವನ ಮೇಲೆ ದೊಡ್ಡ ಕಲ್ಲಿನ ಕುಪ್ಪೆಯನ್ನು ಇಟ್ಟರು. ಆಗ ಯೊವಾಬನು ತುತೂರಿಯನ್ನು ಊದಿದಾಗ, ಜನರು ಇಸ್ರಯೇಲ್ಯರ ಹಿಂದೆ ಹತ್ತುವದನ್ನು ಬಿಟ್ಟು, ತಿರುಗಿದರು. ಆದರೆ ದಾವೀದನು ಯುದ್ಧದ ವರ್ತಮಾನ ಕೇಳ ಬೇಕೆಂದು ಪಟ್ಟದ ಬಾಗಲಿನಲ್ಲಿ ನಿರೀಕ್ಷಿಸಿ, ಕೂತು ಕೊಂಡಿದ್ದನು. ಆಗ ಇಗೋ, ಕೂಷಿ ಎಂಬವನು ಓಡಿ ಬಂದಾಗ, ಅರಸನು ಅವನಿಗೆ: ಪ್ರಾಯಸ್ಥನಾದ ಅಬ್ಸಲೋಮನಿಗೆ ಕ್ಷೇಮವೋ? ಎಂದು ಕೇಳಿದನು. ಕೂಷಿಯು ಪ್ರತ್ಯುತ್ತರವಾಗಿ: ಅರಸನ ಶತ್ರುಗಳೂ ಕೇಡು ಮಾಡಲಿಕ್ಕೆ ನಿನಗೆ ವಿರೋಧವಾಗಿ ಏಳುವ ಸಮಸ್ತರೂ ಆ ಪ್ರಾಯಸ್ಥನ ಹಾಗೆಯೇ ಇರಲಿ, ಅಂದನು. ಆಗ ಅರಸನು ನಡುಗುತ್ತಾ, ಕೊಠಡಿಗೆ ಹೋಗಿ, ಅತ್ತು: ನನ್ನ ಮಗನಾದ ಅಬ್ಸಲೋಮನೇ, ನನ್ನ ಮಗನೇ, ನಿನಗೆ ಪ್ರತಿಯಾಗಿ ನಾನು ಸತ್ತರೆ, ಉತ್ತಮ; ಅಬ್ಸಲೋಮನೇ, ನನ್ನ ಮಗನೇ, ನನ್ನ ಮಗನೇ, ಅಂದನು. ಆ ಮೇಲೆ ಸಕಲ ಯೆಹೂದ ಮನುಷ್ಯರು ಅರಸನಾದ ದಾವೀದನಿಗೆ: ನೀನೂ ನಿನ್ನ ಸಮಸ್ತ ಸೇವಕರೂ ತಿರಿಗಿ ಬನ್ನಿರಿ ಎಂದು ಹೇಳಿ ಕಳುಹಿಸಿದರು. ಅರಸನು ತಿರಿಗಿ ಬಂದನು. ಶಿಮ್ಯೆಯು ಸಹ ತ್ವರೆಯಾಗಿ ಯೆಹೂದ ಮನುಷ್ಯರ ಸಂಗಡ ಬಂದು, ಅರಸನ ಮುಂದೆ ಅಡ್ಡ ಬಿದ್ದು, ತನಗೆ ಕ್ಷಮಿಸ ಬೇಕೆಂದು ಬೇಡಿ ಕೊಂಡನು.

ಆಗ ಅಬಿಷಯ್ಯನು: ಯೆಹೋವನ ಅಭಿಷಿಕ್ತನನ್ನು ಶಿಮ್ಯೈ ದೂಷಿಸಿದ್ದರಿಂದ, ಅವನನ್ನು ಕೊಲ್ಲ ಬೇಕಲ್ಲವೋ? ಅಂದನು. ಆದರೆ ದಾವೀದನು: ಈ ಹೊತ್ತು ಇಸ್ರಯೇಲಿನಲ್ಲಿ ಯಾವನಾದರೂ ಕೊಲೆ ಪಡನು ಎಂದು ಹೇಳಿ, ಶಿಮ್ಯೈಗೆ: ನೀನು ಸಾಯುವದಿಲ್ಲ, ಅಂದನು. ಮತ್ತು ಅವನಿಗೆ ಆಣೆ ಇಟ್ಟನು.

ಆದರೆ ಬೆನ್ಯಮೀನನ ಗೋತ್ರದವನಾದ ಶೇಬನೆಂಬ ಒಬ್ಬ ಲುಚ್ಚ ಮನುಷ್ಯನು ತುತೂರಿಯನ್ನೂದಿ: ನಮಗೆ ದಾವೀದನಲ್ಲಿ ಪಾಲಿಲ್ಲ; ಇಸ್ರಯೇಲ್ಯರೇ, ನಿಮ್ಮ ನಿಮ್ಮ ಗುಡಾರಗಳಿಗೆ ಹೋಗಿರಿ, ಅಂದನು. ಆಗ ಇಸ್ರಯೇಲ್ ಜನರೆಲ್ಲರು ದಾವೀದನನ್ನು ಬಿಟ್ಟು, ಶೇಬನ ಹಿಂದೆ ಹೋದರು. ಆದರೆ ಯೊವಾಬನು ಶೇಬನನ್ನು ಹಿಂದಟ್ಟಿ, ಅಬೇಲೆಂಬ ಊರಿನ ಮಟ್ಟಿಗೂ ಹೋಗಿ, ಶೇಬನು ಆ ಪಟ್ಣದಲ್ಲಿ ಆಶ್ರಯಿಸಿ ಕೊಂಡದರಿಂದ, ಅದಕ್ಕೆ ಅಲ್ಲಿ ಮುತ್ತಿಗೆ ಹಾಕಿದನು. ಮತ್ತು ಆ ಊರಿನವರು ಜ್ಞಾನವುಳ್ಳ ಒಬ್ಬ ಸ್ತ್ರೀಯ ಮಾತು ಕೇಳಿ, ಶೇಬನ ತಲೆಯನ್ನು ಕಡಿದು, ಯೊವಾಬನ ಬಳಿಗೆ ಹಾಕಿದರು. ಆಗಲವನು ತುತೂರಿಯನ್ನು ಊದಿದ್ದರಿಂದ ಒಬ್ಬೊಬ್ಬನು ತನ್ನ ತನ್ನ ಗುಡಾರಕ್ಕೆ ಹೋದನು.

ಬಾ. 105. 156. III. 43. 31. ಬಾ. 106.

---

## ೪೧. ಇಸ್ರಯೇಲಿನಲ್ಲಿ ಹುಟ್ಟಿದ ಮೂಲವ್ಯಾಧಿ.

(೨ ಸಮು. ೨೪. ೧ಅರಸು. ೧.)

೧) ಯೆಹೋವನ ಕೋಪವು ತಿರಿಗಿ ಇಸ್ರಯೇಲಿಗೆ ವಿರೋಧವಾಗಿ ಉರಿಯಿತು; ಆಗ, ಇಸ್ರಯೇಲನ್ನೂ ಯೆಹೂದವನ್ನೂ ಲೆಖ್ಖಿಸ ಹೋಗೆಂದು, ಸೈತಾನನು ದಾವೀದನನ್ನು ಪ್ರೇರೇಪಿಸಿದನು. ಅರಸನು ಸೈನ್ಯಾಧಿಪತಿಯಾದ ಯೊವಾಬನಿಗೆ: ನೀನು ಇಸ್ರಯೇಲಿನ ಸಮಸ್ತ ಕುಲಗಳಲ್ಲಿ ಹೋಗಿ, ಜನರನ್ನು ಲೆಖ್ಖಿಸು, ಅಂದನು. ಆಗ

ಯೊವಾಬನು ಅರಸನಿಗೆ: ನನ್ನ ಸ್ವಾಮಿ ಈ ಕಾರ್ಯವನ್ನು ಇಚ್ಛೈಸುವದೇನು? ಅಂದನು. ಆದರೆ ಅರಸನ ಮಾತು ಯೊವಾಬನ ಮೇಲೆ ಬಲವಾಗಿತ್ತು. ಅದು ಕಾರಣ ಇಸ್ರಯೇಲ ಜನರನ್ನು ಲೆಖ್ಖಿಸಲಿಕ್ಕೆ ಯೊವಾಬನೂ ಸೈನ್ಯಾಧಿಪತಿಗಳೂ ಅರಸನ ಸಮುಖದಿಂದ ಹೊರಟು ಹೋದರು. ಹೀಗೆ ಅವರು ಸಮಸ್ತ ದೇಶದ ಮೇಲೆ ಹೋಗಿ, ಒಂಭತ್ತು ತಿಂಗಳು ಇಪ್ಪತ್ತು ದಿವಸವಾದ ತರುವಾಯ ಯೆರೂಸಲೇಮಿಗೆ ಬಂದರು. ಯೊವಾಬನು ಅರಸನಿಗೆ ಕೊಟ್ಟ ಜನರ ಒಟ್ಟು ಲೆಖ್ಖವೇಸಂದರೆ — ಇಸ್ರಯೇಲಲ್ಲಿ ಕತ್ತಿ ಹಿಡಿಯ ತಕ್ಕವರು ಎಂಟು ಲಕ್ಷ ಮಂದಿ ಆಗಿದ್ದರು; ಯೆಹೂದ ಜನರು ಐದು ಲಕ್ಷ ಮಂದಿಯಾಗಿದ್ದರು. ಆದರೆ ಲೇವಿಯರನ್ನೂ ಬೆನ್ಯಮಿಾನರನ್ನೂ ಅವರಲ್ಲಿ ಎಣಿಸಲಿಲ್ಲ; ಯಾಕಂದರೆ ಅರಸನ ಮಾತು ಯೊವಾಬನಿಗೆ ಅಸಹ್ಯಕರವಾಗಿತ್ತು. ಆದರೆ ಜನರನ್ನು ಲೆಖ್ಖಸಿದ ತರುವಾಯ ದಾವೀದನ ಹೃದಯದಲ್ಲಿ ಭಯ ಹುಟ್ಟಿತು. ಆದದರಿಂದ ಅವನು ಯೆಹೋವನಿಗೆ: ನಾನು ಮಾಡಿದ್ದರಲ್ಲಿ ಮಹಾ ಪಾಪ ಮಾಡಿದೆನು, ಅಂದನು. ಅವನು ಉದಯದಲ್ಲಿ ಎದ್ದಾಗ, ಗಾಡನೆಂಬ ಪ್ರವಾದಿಗೆ ಯೆಹೋವನ ವಾಕ್ಯವು ಉಂಟಾಗಿ, ಅವನಿಗೆ ಹೇಳಿದ್ದೇನಂದರೆ: ನೀನು ಹೋಗಿ, ದಾವೀದನಿಗೆ—ಮೂರು ಕಾರ್ಯಗಳನ್ನು ನಿನ್ನ ಮುಂದೆ ಇಡುತ್ತೇನೆ; ನಾನು ನಿನಗೆ ಮಾಡುವ ಹಾಗೆ ಅವುಗಳಲ್ಲಿ ಒಂದನ್ನು ಆದುಕೋ ಎಂದು, ಯೆಹೋವನು ಹೇಳುತ್ತಾನೆ ಎಂದು ಹೇಳು. ಹಾಗೆ ಗಾಡನು ದಾವೀದನ ಬಳಿಗೆ ಬಂದು, ಅವನಿಗೆ ತಿಳಿಸಿದ್ದೇನಂದರೆ: ನಿನ್ನ ದೇಶದಲ್ಲಿ ನಿನಗೆ ಏಳು ವರುಷ ಬರವು ಆಗ ಬೇಕೋ? ಇಲ್ಲವೆ ನೀನು ಮೂರು ತಿಂಗಳು ನಿನ್ನ ಶತ್ರುಗಳ ಮುಂದೆ ಓಡಿ ಹೋಗ ಬೇಕೋ? ಇಲ್ಲವೆ ನಿನ್ನ ದೇಶದಲ್ಲಿ ಮೂರು ದಿವಸ ಬಾಧೆ ಉಂಟಾಗ ಬೇಕೋ? ಯೋಚಿಸಿ ನೋಡು. ಆಗ ದಾವೀದನು ಗಾಡನಿಗೆ: ನಾನು ಬಹು ಇಕ್ಕಟ್ಟಿನಲ್ಲಿ ಇದ್ದೇನೆ. ಈಗ ಯೆಹೋವನ ಕೈಯಲ್ಲಿ ಬೀಳುವೆವು; ಯಾಕಂದರೆ ಅವನ ಅಂತಃಕರಣವು

ಬಹಳವಾಗಿದೆ; ಮನುಷ್ಯನ ಕೈಯಲ್ಲಿ ಬೀಳೆನು, ಅಂದನು. ಆಗ ಯೆಹೋವನು ಇಸ್ರಯೇಲಿನ ಮೇಲೆ ಬಾಧೆಯನ್ನು ಕಳುಹಿಸಿದನು. ಅದರಿಂದ ಎಪ್ಪತ್ತು ಸಾವಿರ ಜನರು ಸತ್ತು ಹೋದರು. ಆದರೆ ದೂತನು ಯೆರೂಸಲೇಮನ್ನು ಕೆಡಿಸಲಿಕ್ಕೆ ಅದರ ಮೇಲೆ ತನ್ನ ಕೈ ಚಾಚಿದಾಗ, ಯೆಹೋವನು ಆ ಕೇಡಿಗೆ ಪಶ್ಚಾತ್ತಾಪ ಪಟ್ಟು, ಆ ದೂತನಿಗೆ: ಸಾಕು; ಈಗ ನಿನ್ನ ಕೈಯನ್ನು ಎಳಕೋ, ಅಂದನು. ದೂತನು ಅರವ್ನನ ಕಣದ ಬಳಿಯಲ್ಲಿ ಇದ್ದನು. ದಾವೀದನು ದೂತನನ್ನು ನೋಡಿದಾಗ, ಯೆಹೋವನಿಗೆ: ಇಗೋ, ನಾನೇ ಪಾಪ ಮಾಡಿದೆನು; ಆದರೆ ಈ ಕುರಿಗಳು ಮಾಡಿದ್ದೇನು? ಎಂದು ಹೇಳಿ, ಯೆಹೋವನಿಗೆ ಅಲ್ಲಿ ಒಂದು ಬಲಿಪೀಠವನ್ನು ಕಟ್ಟಿಸಿ, ಹೋಮಗಳನ್ನೂ ಸಮಾಧಾನದ ಬಲಿಗಳನ್ನೂ ಅರ್ಪಿಸಿದನು. ಆಗ ಆ ಬಾಧೆಯು ನಿಂತು ಹೋಯಿತು.

೨) ತರುವಾಯ ದಾವೀದನು ಮೋಶೆಯ ನ್ಯಾಯಪ್ರಮಾಣದ ಪ್ರಕಾರ ಲೇವಿಯರಿಗೆ ಅವರವರ ಕೆಲಸವನ್ನು ನೇಮಿಸಿದನು. ಹ್ಯಾಗಂದರೆ:—ಅವರ ಪುರುಷರ ಲೆಖ್ಖ (೩೦ ವರುಷ ಪ್ರಾಯ ಮೊದಲ್ಗೊಂಡು) ೩೮೦೦೦ವಾಗಿತ್ತು. ಇವರಲ್ಲಿ ೨೪೦೦೦ ಮಂದಿ ಯೆಹೋವನ ಮನೆಯ ಕೆಲಸವನ್ನು ನಡಿಸುವವರಾಗಿದ್ದರು; ೬೦೦೦ ಮಂದಿ ಪಾರುಪತ್ಯಗಾರರೂ ನ್ಯಾಯಾಧಿಪತಿಗಳೂ ಆಗಿದ್ದರು. ಇದಲ್ಲದೆ ೪೦೦೦ ಮಂದಿ ದ್ವಾರಪಾಲಕರಾಗಿದ್ದರು. ೪೦೦೦ ಮಂದಿ ಯೆಹೋವನನ್ನು ಸ್ತುತಿಸುವ ವಾದ್ಯಗಾರರಾಗಿದ್ದರು. ಇವರನ್ನು ೨೪ ಸಾಲಾಗಿ ನಿಶ್ಚೈಸಿದನು. ಇವರಲ್ಲಿ ಉತ್ತಮವಾದ ಕೀರ್ತನೆಗಳನ್ನು ಮಾಡಿದ ಆಸಾಫನೂ ಯೆದುತೂನನೂ ಹೆಮಾನನೂ ಮುಖ್ಯಸ್ಥರಾಗಿದ್ದರು. ಆರೋನನ ಮಕ್ಕಳನ್ನು ಸಹ ಸಾಲಿಗೆ ಸಾವಿರ ಮಂದಿಯ ಪ್ರಕಾರ ೨೪ ಸಾಲಾಗಿ ವಿಭಾಗಿಸಿ, ಒಂದೊಂದು ಸಾಲನ್ನು ಒಂದೊಂದು ವಾರ ಪರಿಶುದ್ಧ ಸ್ಥಳದ ಸೇವೆಗೆ ನೇಮಿಸಿದನು. ದಾವೀದನು ಮುದುಕನಾಗಿದ್ದಾಗ, ಯಾಜಕನಾದ ಚದೋಕನನ್ನೂ

ಪ್ರವಾದಿಯಾದ ನತಾನನನ್ನೂ ಕರಿಸಿ, ಅವರಿಗೆ: ನೀವು ನನ್ನ ಮಗನಾದ ಸೊಲೊಮೋನನನ್ನು ಅಭಿಷೇಕಿಸಿರಿ; ಯಾಕಂದರೆ ಅವನು ನನ್ನ ತರುವಾಯ ಇಸ್ರಯೇಲಿನ ಮೇಲೆ ಅರಸನಾಗಿರ ಬೇಕು ಎಂದು ಆಜ್ಞಾಪಿಸಿದನು. ಅವರು ಹೀಗೆ ಮಾಡಿ, ಸೊಲೊಮೋನನನ್ನು ಅರಸನಾಗ ಅಭಿಷೇಕಿಸಿದರು.

III. 1. II. 41.

---

## ೪೨. ಸೊಲೊಮೋನನು.

(೧ ಅರಸು. ೨—೧೧.)

(ಕ್ರಿಸ್ತನ ಜನ್ಮದ ಮುಂಚೆ ೧೦೧೫—೯೭೫.)

೧) ದಾವೀದನು ಸಾಯುವ ಕಾಲ ಸಮೀಪಿಸಿದ್ದರಿಂದ, ಅವನು ತನ್ನ ಮಗನಾದ ಸೊಲೊಮೋನನಿಗೆ ಆಜ್ಞಾಪಿಸಿದ್ದೇನಂದರೆ:—ನಾನು ಭೂಮಿಯವರೆಲ್ಲರು ಹೋಗುವ ಮಾರ್ಗವಾಗಿ ಹೋಗುತ್ತೇನೆ; ನೀನು ಬಲಗೊಂಡು, ಪುರುಷನಾಗಿರು. ಮತ್ತು ನೀನು ಮೋಶೆಯ ನ್ಯಾಯಪ್ರಮಾಣದಲ್ಲಿ ಬರೆದಿರುವ ಪ್ರಕಾರ ನಿನ್ನ ದೇವರಾದ ಯೆಹೋವನ ನೇಮಗಳನ್ನೂ ಸಾಕ್ಷಿಗಳನ್ನೂ ಕೈಕೊಂಡು ಅವನ ಮಾರ್ಗದಲ್ಲಿ ನಡಿಯುವ ಹಾಗೆ, ಅವನ ಕಾಯಿದೆಯನ್ನು ಕೈಕೋ. ಇದಲ್ಲದೆ ನಿನ್ನ ದೇವರಾದ ಯೆಹೋವನ ನಾಮಕ್ಕೆ ಒಂದು ಮನೆಯನ್ನು ಕಟ್ಟಿಸ ಬೇಕೆಂದು, ನನ್ನ ಹೃದಯದಲ್ಲಿ ಇತ್ತು. ಆದರೆ ಯೆಹೋವನು ನನಗೆ: ನೀನು ನನ್ನ ಹೆಸರಿಗೆ ಮನೆಯನ್ನು ಕಟ್ಟಿಸ ಬೇಡ; ನಿನಗೆ ಹುಟ್ಟುವ ನಿನ್ನ ಮಗನು ನನ್ನ ನಾಮಕ್ಕೆ ಒಂದು ಮನೆಯನ್ನು ಕಟ್ಟಿಸುವನು ಎಂದು ಹೇಳಿದನು. ಈಗ, ನನ್ನ ಮಗನೇ, ಇಗೋ, ನ

ನ್ನ ದೀನ ಸ್ಥಿತಿಯಲ್ಲಿ ನಾನು ಯೆಹೋವನ ಮನೆಗೋಸ್ಕರ ಭಂಗಾರ, ತಾಂಬ್ರ, ಕಬ್ಬಿಣ, ಮರ, ಕಲ್ಲು ಮುಂತಾದವುಗಳನ್ನು ಸಿದ್ಧ ಮಾಡಿದ್ದೇನೆ; ಅದು ಬಹಳವಾಯಿತು. ಅದು ಕಾರಣ ನೀನು ಎದ್ದು, ಈ ಕೆಲಸ ಮಾಡು; ಯೆಹೋವನು ನಿನ್ನ ಸಂಗಡ ಇರಲಿ, ಅಂದನು. ಆಗ ದಾವೀದನು ಸೊಲೊಮೋನನಿಗೆ ದೇವಾಲಯವನ್ನು ಕಟ್ಟಿಸಲಿಕ್ಕೆ ಬೇರೆ ಬೇರೆ ಮಾದರಿಗಳನ್ನೂ ನಕ್ಷಗಳನ್ನೂ ತಾನು ಸಿದ್ಧ ಮಾಡಿದ ಎಲ್ಲಾ ಸಾಮಾನುಗಳನ್ನೂ ಒಪ್ಪಿಸಿ ಕೊಟ್ಟನು. ಇದಲ್ಲದೆ ಇಸ್ರಯೇಲಿನ ಪಿತೃಗಳ ಪ್ರಧಾನರೂ ಕುಲಗಳ ಪ್ರಧಾನರೂ ಸೈನ್ಯಾಧಿಪತಿಗಳೂ ಕಾಣಿಕೆಗಳನ್ನು ತಂದು, ಯೆಹೋವನ ಮನೆಯ ಸೇವೆಗೋಸ್ಕರ ಬಹಳವಾಗಿ ಕೊಟ್ಟರು. ಆಗ ಜನರು ಉಚಿತಾರ್ಥವಾಗಿ ಕಾಣಿಕೆಗಳನ್ನು ಅರ್ಪಿಸಿದ್ದರಿಂದ, ಅವರೂ ಮತ್ತು ಅರಸನಾದ ದಾವೀದನೂ ಮಹಾ ಸಂತೋಷ ಪಟ್ಟರು; ಯಾಕಂದರೆ ಅವರು ಪೂರ್ಣ ಮನಸ್ಸಿನಿಂದ ಅದನ್ನು ಯೆಹೋವನಿಗೆ ಅರ್ಪಿಸಿದರು.

೨) ಆ ಮೇಲೆ ಅರಸನಾದ ದಾವೀದನು ಒಳ್ಳೇ ಪ್ರಾಯದಲ್ಲಿ ದಿವಸಗಳಿಂದಲೂ ಐಶ್ವರ್ಯದಿಂದಲೂ ಘನದಿಂದಲೂ ತುಂಬಿದವನಾಗಿ ಸತ್ತು ಹೋದನು. ಅವನು ಇಸ್ರಯೇಲಿನ ಮೇಲೆ ಆಳಿದ ದಿವಸಗಳು ನಾಲ್ವತ್ತು ವರುಷ. ಆಗ ಸೊಲೊಮೋನನು ತನ್ನ ತಂದೆಯಾದ ದಾವೀದನಿಗೆ ಬದಲಾಗಿ ಅರಸನಾಗಿದ್ದು, ಯೆಹೋವನ ಸಿಂಹಾಸನದ ಮೇಲೆ ಕುಳಿತು ಕೊಂಡು, ಸಫಲ ಹೊಂದಿದನು. ಅವನ ರಾಜ್ಯವು ಬಹಳ ಸ್ಥಿರವಾಗಿತ್ತು. ಅವನು ದೇವರಾದ ಯೆಹೋವನ ಸಂಗಡ ನಡದು, ದೊಡ್ಡವನಾದನು.

ಮತ್ತು ಸೊಲೊಮೋನನು ಗಿಬ್ಯೋನಿಗೆ ಹೋಗಿ, ಹೋಮಗಳನ್ನು ಅರ್ಪಿಸಿದನು. ಅದೇ ರಾತ್ರಿಯಲ್ಲಿ ದೇವರು ಅವನಿಗೆ ಕಾಣಿಸಿ ಕೊಂಡು, ಅವನಿಗೆ: ನಾನು ನಿನಗೆ ಕೊಡ ಬೇಕಾದದ್ದನ್ನು ಕೇಳಿಕೋ, ಅಂದನು. ಆಗ ಸೊಲೊಮೋನನು ದೇವರಿಗೆ: ನೀ

ನು ನನ್ನ ತಂದೆಯಾದ ದಾವೀದನಿಗೆ ಬಹು ಕೃಪೆಯನ್ನು ತೋರಿಸಿ, ಅವನಿಗೆ ಬದಲಾಗಿ ನನ್ನನ್ನು ಅರಸನಾಗ ಮಾಡಿದಿ. ಈಗ, ನನ್ನ ತಂದೆಯಾದ ದಾವೀದನಿಗೆ ನೀನು ಹೇಳಿದ ವಾಕ್ಯವು ನಿಶ್ಚಯವಾಗಲಿ; ಯಾಕಂದರೆ ಲೆಖ್ಖದಲ್ಲಿ ಧೂಳಿಯ ಹಾಗೆ ಹೆಚ್ಚಾಗಿರುವ ಜನರ ಮೇಲೆ ನನ್ನನ್ನು ಅರಸನಾಗ ಮಾಡಿದಿ. ನಾನು ಅವರ ಮುಂದೆ ಹೊರಡುವ ಹಾಗೆಯೂ ಬರುವ ಹಾಗೆಯೂ ನನಗೆ ಜ್ಞಾನವನ್ನೂ ತಿಳುವಿಕೆಯನ್ನೂ ಕೊಡು; ಯಾಕಂದರೆ ಈ ನಿನ್ನ ಮಹಾ ಜನಕ್ಕೆ ನ್ಯಾಯ ತೀರಿಸ ತಕ್ಕವನು ಯಾರು? ನಾನು ಚಿಕ್ಕ ಬಾಲಕನಾಗಿದ್ಧೇನೆ, ಅಂದನು. ಇದು ಯೆಹೋವನ ದೃಷ್ಟಿಗೆ ಒಳ್ಳೇದಾಗಿದ್ದದರಿಂದ, ದೇವರು ಅವನಿಗೆ: ನೀನು ನಿನಗೋಸ್ಕರ ದೀರ್ಘಾಯುಷ್ಯವನ್ನೂ ಐಶ್ವರ್ಯವನ್ನೂ ಕೇಳದೆ, ಇದನ್ನು ಕೇಳಿದ್ದರಿಂದ, ನಾನು ನಿನ್ನ ಮಾತುಗಳ ಪ್ರಕಾರವೇ ಮಾಡಿದೆನು; ನಿನಗಿಂತ ಮುಂಚೆ ನಿನಗೆ ಸಮಾನವಾದವನು ಇಲ್ಲದ ಹಾಗೆ, ಜ್ಞಾನವೂ ಗ್ರಹಿಕೆಯೂ ಉಳ್ಳ ಹೃದಯವನ್ನು ನಿನಗೆ ಕೊಟ್ಟಿದ್ಧೇನೆ; ಮತ್ತು ನೀನು ಕೇಳದ ಐಶ್ವರ್ಯವನ್ನೂ ಘನವನ್ನೂ ಸಹ ನಿನಗೆ ಕೊಟ್ಟಿದ್ಧೇನೆ; ನೀನು ನನ್ನ ಆಜ್ಞೆಗಳನ್ನು ಕೈಕೊಂಡರೆ, ನಿನ್ನ ಆಯುಷ್ಯವನ್ನು ಹೆಚ್ಚಿಸುವೆನು, ಅಂದನು.

೩) ಈ ಪ್ರಕಾರ ಸೊಲೊಮೋನನು ಫ್ರಾತು ನದಿ ಮೊದಲ್ಗೊಂಡು ಫಿಲಿಷ್ಟಿಯರ ದೇಶದ ವರೆಗೂ ಐಗುಪ್ತ ದೇಶದ ಮೇರೆಯ ಮಟ್ಟಿಗೂ ಇರುವ ರಾಜ್ಯಗಳೆಲ್ಲಾದರ ಮೇಲೆ ಆಳಿದನು. ಆ ರಾಜ್ಯದವರು ಅವನಿಗೆ ಕಾಣಿಕೆಗಳನ್ನು ತಕ್ಕೊಂಡು ಬಂದು, ಅವನು ಬದುಕುವಷ್ಟು ದಿವಸಗಳಲ್ಲಿ ಸೇವೆ ಮಾಡಿದರು. ಸುತ್ತಲಿರುವ ಎಲ್ಲಾ ದಿಕ್ಕುಗಳಲ್ಲಿ ಸಮಾಧಾನವು ಇತ್ತು. ಹೀಗೆಯೇ ಯೆಹೂದದಲ್ಲಿಯೂ ಇಸ್ರಯೇಲಲ್ಲಿಯೂ ಪ್ರತಿ ಮನುಷ್ಯನು ತನ್ನ ದ್ರಾಕ್ಷೇ ಗಿಡದ ಕೆಳಗೂ ತನ್ನ ಅಂಜೂರ ಗಿಡದ ಕೆಳಗೂ ಭರವಸವಾಗಿ ವಾಸವಾಗಿದ್ದನು. ಮತ್ತು ದೇವರು ಸೊಲೊಮೋನನಿಗೆ ಅತ್ಯಧಿಕ

ವಾದ ಜ್ಞಾನವನ್ನೂ ಗ್ರಹಿಕೆಯನ್ನೂ ಕೊಟ್ಟನು. ಸುತ್ತಲಿರುವ ಸಕಲ ಜನಾಂಗಗಳಲ್ಲಿ ಅವನ ಹೆಸರು ಇತ್ತು. ಅವನು ಮೂರು ಸಾವಿರ ಸಾಮತಿಗಳನ್ನು ಹೇಳಿದನು; ಅವನ ಹಾಡುಗಳು ಸಾವಿರದ ಐದು. ಅವನ ಜ್ಞಾನವನ್ನು ಕೇಳುವದಕ್ಕೆ ಎಲ್ಲಾ ಕಡೆಯಿಂದ ಜನರು ಬಂದರು. ಶೇಬದ ರಾಣಿಯು ಸೊಲೊಮೋನನ ಕೀರ್ತಿಯನ್ನು ಕೇಳಿದಾಗ, ದಕ್ಷಿಣ ಕಡೆಯಿಂದ ಬಂದು, ಅವನನ್ನು ಒಗಟಿಗಳಿಂದ ಶೋಧಿಸಿ, ಅವನ ಜ್ಞಾನದ ನಿಮಿತ್ತವೂ ಘನದ ನಿಮಿತ್ತವೂ ಬಹು ಆಶ್ಚರ್ಯ ಪಟ್ಟಳು. ಸೊಲೊಮೋನನು ಭೂಮಿಯ ಅರಸುಗಳೆಲ್ಲರಿಗಿಂತ ಐಶ್ವರ್ಯದಿಂದಲೂ ಬುದ್ಧಿಯಿಂದಲೂ ದೊಡ್ಡವನಾಗಿದ್ದನು. ದಾವೀದನು ತನಗೆ ಆಜ್ಞಾಪಿಸಿದ ಪ್ರಕಾರ ಸೊಲೊಮೋನನು ಯೆಹೋವನಿಗೆ ಮನೆಯನ್ನು ಕಟ್ಟಿಸಿದನು. ಅದರ ಉದ್ದ ಅರವತ್ತು ಮೊಳ, ಅದರ ಅಗಲ ಇಪ್ಪತ್ತು ಮೊಳ, ಅದರ ಉನ್ನತ ಮೂವತ್ತು ಮೊಳ. ಸಾಕ್ಷಿ ಗುಡಾರದಲ್ಲಿ ಇದ್ದ ಹಾಗೆ ಇದರಲ್ಲಿ ಸಹ ಅತಿಪರಿಶುದ್ಧ ಸ್ಥಳವೂ ಪರಿಶುದ್ಧ ಸ್ಥಳವೂ ಇತ್ತು. ಅತಿಪರಿಶುದ್ಧ ಸ್ಥಳವು ಇಪ್ಪತ್ತು ಮೊಳ ಉದ್ದವೂ ಇಪ್ಪತ್ತು ಮೊಳ ಅಗಲವೂ ಇಪ್ಪತ್ತು ಮೊಳ ಎತ್ತರವೂ ಆಗಿತ್ತು. ಅದರಲ್ಲಿ ಭಂಗಾರದಿಂದ ಹೊದಗಿಸಿದ ಎರಡು ಕೆರೂಬಿಗಳನ್ನು ಮಾಡಿಸಿದನು. ಪರಿಶುದ್ಧ ಸ್ಥಳದಲ್ಲಿ ಧೂಪಪೀಠವೂ ಹತ್ತು ಭಂಗಾರದ ದೀಪಸ್ತಂಭಗಳೂ ಸಮುಖದ ರೊಟ್ಟಿಗಳ ಮೇಜೂ ಇದ್ದವು. ಇದಲ್ಲದೆ ಮನೆಯ ಗೋಡೆಗಳನ್ನು ಖರ್ಜೂರದ ಗಿಡಗಳೂ ಸರಪಣಿಗಳೂ ಕೆರೂಬಿಗಳೂ ಕೆತ್ತಿದ ಹಲಿಗೆಗಳಿಂದ ಮುಚ್ಚಿ, ಭಂಗಾರದಿಂದ ಹೊದಗಿಸಿದನು. ಮನೆಯಲ್ಲಿ ಪ್ರಯೋಗಿಸ ತಕ್ಕ ಕತ್ತಿ, ಬಟ್ಲು, ಸೌಟು, ಅಗ್ನಿಪಾತ್ರೆಗಳು ಎಲ್ಲಾ ಶುದ್ಧ ಭಂಗಾರವಾಗಿದ್ದವು. ಮನೆಯ ಮುಂದೆ ತಾಂಬ್ರದ ದೊಡ್ಡ ಬಲಿಪೀಠವೂ ಎರಕದ ಸಮುದ್ರವೆಂಬ (ಹತ್ತು ಮೊಳ ದೊಡ್ಡದಾದ) ನೀರಿನ ಪಾತ್ರೆಯೂ ತಾಂಬ್ರದ ಹತ್ತು ತೊಟ್ಟಿಗಳೂ ಇದ್ದವು.

## ಸೊಲೊಮೋನನು ಕಟ್ಟಿಸಿದ ಮಂದಿರದ ನಮೂನೆ.




[ಮೇಲಿನ ನಮೂನೆಯಲ್ಲಿ ಅರ್ಧಗೋಳಾಕಾರವಾಗಿರುವ ಮೇರೆಯೊಳಗಿನ ಚೌಕವು ಮಂದಿರವಾಗಿರುತ್ತದೆ. ಸುತ್ತಲಿರುವ ದಪ್ಪ ಗೆರೆಗಳು ಅದರ ಗೋಡೆಗಳು. ಇದರ ಸುತ್ತಲೂ "ಯಾಜಕರ ಅಂಗಳ" ಇರುತ್ತದೆ. ಈ ಮಂದಿರದ ಮುಂದಿರುವ ದೊಡ್ಡ ಚಚ್ಚೌಕವು "ಬಲಿಪೀಠ"ವನ್ನು, ಇದರ ಇಕ್ಕೆಡೆಗಳಲ್ಲಿರುವ ಐದೈದು ಚಿಕ್ಕ ಸೊನ್ನೆಗಳು ತೊಟ್ಟಿಗಳನ್ನು, ಅವರ ದಕ್ಷಿಣಕ್ಕಿರುವ ಒಂದು ಸ್ವಲ್ಪ ದೊಡ್ಡ ಸೊನ್ನೆಯು "ತಾಂಬ್ರದ ಸಮುದ್ರ"ವನ್ನು ಕಾಣಿಸುತ್ತವೆ. ಮಂದಿರದ ಮೇರೆಯಾಗಿರುವ ಹೊರಗಿನ ಮತ್ತು ಒಳಗಿನ ದಪ್ಪ ಗೋಡೆಗಳ ಮಧ್ಯ ಸುತ್ತಲೂ ಇರುವ ಚಿಕ್ಕ ಚಿಕ್ಕ ಅಂಕಣಗಳು ಬೊಕ್ಕಸದ ಕೊಠಡಿಗಳಾಗಿರುತ್ತವೆ. ಮಂದಿರದ ಬಾಗಲಿಗೆ ಒತ್ತಿರುವ ದಪ್ಪ ಗೋಡೆಗಳ ಕೋಣೆಯು "ಮಂಟಪ"ವೆನ್ನಿಸುತ್ತದೆ. ಇದರ ದ್ವಾರದ ಎಡಗಡೆಯಲ್ಲಿ "ಬೋವಜ್" ಮತ್ತು ಬಲಗಡೆಯಲ್ಲಿ "ಯತೀನ್" ಎಂಬ

ಸ್ತಂಭಗಳನ್ನು ೨ ಬೊಟ್ಟುಗಳಿಂದ ಕಾಣಿಸಿರುತ್ತವೆ. ಈ ಇಡೀ ಅಂಕಣದ ಮಧ್ಯದಲ್ಲಿರುವ ಕೋಣೆಯು ೨ ಭಾಗಗಳಾಗಿ ವಿಭಾಗಿಸಿರುತ್ತವೆ; ಪೂರ್ವ ಭಾಗದಲ್ಲಿ ಇಕ್ಕಡೆಗಳಲ್ಲಿರುವ ಐದೈದು ಸೊನ್ನೆಗಳು ದೀಪಗಳಾಗಿರುತ್ತವೆ. ಇವುಗಳ ನಡುವಿನಲ್ಲಿ ೧ ಮೇಜೂ ಇದರ ಪಶ್ಚಿಮದಲ್ಲಿ ಕಪ್ಪ ಗುರುತಾಗಿರುವ "ಬಲಿಪೀಠವೂ" ಇರುತ್ತದೆ. ಮತ್ತು ಪಶ್ಚಿಮ ಭಾಗವು "ಅತಿಪರಿಶುದ್ಧ ಸ್ಥಳ"ವೆನ್ನಿಸುತ್ತದೆ. ಇದರ ಮಧ್ಯದಲ್ಲಿ "ಸಾಕ್ಷಿಪೆಟ್ಟಿಗೆ" ಉಂಟು. ಈ ೨ ಭಾಗಗಳನ್ನು ಒಂದು ತೆರೆಯು ಪ್ರತ್ಯೇಕಿಸುತ್ತದೆ.]

ಮತ್ತು ಚಿಯೋನಿನಿಂದ ಯೆಹೋವನ ಒಡಂಬಡಿಕೆಯ ಪೆಟ್ಟಿಗೆಯನ್ನು ತರುವ ನಿಮಿತ್ತ ಇಸ್ರಯೇಲಿನ ಪ್ರಭುಗಳಾದ ಹಿರಿಯರನ್ನೂ ಕುಲಗಳನ್ನೂ ಯೆರೂಸಲೇಮಿಗೆ ಕೂಡಿ ಬರ ಮಾಡಿದನು. ಇದಲ್ಲದೆ ಇಸ್ರಯೇಲಿನ ಮನುಷ್ಯರೆಲ್ಲರು ಅರಸನ ಬಳಿಗೆ ಕೂಡಿ ಕೊಂಡರು. ಆಗ ಲೇವಿಯರು ಪೆಟ್ಟಿಗೆಯನ್ನು ಎತ್ತಿ ಕೊಂಡು, ಅತಿಪರಿಶುದ್ಧ ಸ್ಥಳಕ್ಕೆ ತಕ್ಕೊಂಡು ಬಂದು, ಕೆರೂಬಿಗಳ ರೆಕ್ಕೆಗಳ ಕೆಳಗಾದ ಅದರ ಸ್ಥಳದಲ್ಲಿ ಇಟ್ಟರು. ಆಗ ಯೆಹೋವನ ಘನವು ದೇವರ ಮನೆಯನ್ನು ತುಂಬಿತು. ಮತ್ತು ಅರಸನು ಇಸ್ರಯೇಲ್ ಸಭೆ ಎಲ್ಲವನ್ನು ಆಶೀರ್ವದಿಸಿ, ಯೆಹೋವನನ್ನು ಸ್ತುತಿಸಿ, ಪ್ರಾರ್ಥನೆ ಮಾಡಿದ್ದೇನಂದರೆ:—ಇಸ್ರಯೇಲಿನ ದೇವರಾದ ಯೆಹೋವನೇ, ಆಕಾಶಗಳೂ ಆಕಾಶಾಕಾಶಗಳೂ ನಿನ್ನನ್ನು ಹಿಡಿಯಲಾರವು; ಹಾಗಾದರೆ ನಾನು ಕಟ್ಟಿಸಿದ ಈ ಮನೆಯು ನಿನ್ನನ್ನು ಹಿಡಿಯುವದು ಹ್ಯಾಗೆ? ಆದರೆ ನಿನ್ನ ಸೇವಕನು ನಿನ್ನ ಮುಂದೆ ಪ್ರಾರ್ಥಿಸಿದ ಪ್ರಾರ್ಥನೆಯನ್ನೂ ವಿಜ್ಞಾಪನೆಯನ್ನೂ ಕಟಾಕ್ಷಿಸು. ರಾತ್ರಿ ಹಗಲು ನಿನ್ನ ಕಣ್ಣುಗಳು ಈ ಮನೆಯ ಮೇಲೆ ತೆರೆದಿರಲಿ; ನಿನ್ನ ಜನರಾದ ಇಸ್ರಯೇಲ್ಯರು ನಿನಗೆ ವಿರೋಧವಾಗಿ ಪಾಪ ಮಾಡಿದ್ದರಿಂದ, ಶತ್ರುವಿನ ಮುಂದೆ ಮುರಿದು ಹೋದಾಗಲೂ ಭಂಗಗಳಲ್ಲಿ ಇರುವಾಗಲೂ ನಿನ್ನ ಕಡೆಗೆ ತಿರುಗಿ, ನಿನ್ನ ಹೆಸರನ್ನು ಕೊಂಡಾಡಿ, ಈ ಸ್ಥಳದಲ್ಲಿ ಪ್ರಾರ್ಥನೆ ಮಾಡಿದರೆ, ನೀನು ಆಕಾಶದಿಂದ ಅವರ ಪ್ರಾರ್ಥನೆಯನ್ನು ಕೇಳಿ, ನಿನ್ನ ಪ್ರಜೆ ಮಾಡಿದ ಪಾಪವನ್ನು ಮನ್ನಿಸಿ, ಅವರಿಗೆ ಅಂತಃಕರಣವನ್ನು ತೋರಿಸು. ಮತ್ತು ದೂರ ದೇಶದಿಂದ ಬಂದ ಪರ

ದೇಶಸ್ಥನು ಈ ಮನೆಯಲ್ಲಿ ಪ್ರಾರ್ಥನೆ ಮಾಡಿದರೆ, ನೀನು ವಾಸ ಮಾಡುವ ಸ್ಥಳದಿಂದ ಕೇಳಿ, ಪರದೇಶಸ್ಥನು ನಿನಗೆ ಕೂಗಿದ ಎಲ್ಲಾ ದರ ಹಾಗೆ ಮಾಡು. ದೇವರಾದ ಯೆಹೋವನೇ, ನಿನ್ನ ಅಭಿಷಿಕ್ತ ನ ಮುಖವನ್ನು ತಿರುಗಿಸಿ ಬಿಡ ಬೇಡ; ನಿನ್ನ ಸೇವಕನಾದ ದಾವೀ ದನ ಕೃಪೆಗಳನ್ನು ಜ್ಞಾಪಕ ಮಾಡು.

ಮತ್ತು ಸೊಲೊಮೋನನು ಇಸ್ರಯೇಲ್ಯರೆಲ್ಲರ ಸಂಗಡ ಯೆ ಹೋವನಿಗೆ ಬಲಿಗಳನ್ನು ಅರ್ಪಿಸಿ, ಯೆಹೋವನ ಮನೆಯನ್ನು ಪ್ರ ತಿಷ್ಟೆ ಮಾಡಿದನು. ಸೊಲೊಮೋನನು ಪ್ರಾರ್ಥಿಸಿ ತೀರಿಸಿದಾಗ, ಬೆಂಕಿಯು ಆಕಾಶದಿಂದ ಇಳಿದು, ಬಲಿಗಳನ್ನು ತಿಂದು ಬಿಟ್ಟಿತು. ಯೆಹೋವನ ಘನವು ಮನೆಯನ್ನು ತುಂಬಿತು.

೪) ಆದರೆ ಅರಸನಾದ ಸೊಲೊಮೋನನು ಅನೇಕ ಅನ್ಯ ದೇ ಶಗಳ ಸ್ತ್ರೀಯರನ್ನು ಪ್ರೀತಿ ಮಾಡಿದನು. ಈ ಜನಾಂಗಗಳನ್ನು ಕು ರಿತು ಯೆಹೋವನು ಇಸ್ರಯೇಲ್ ಮಕ್ಕಳಿಗೆ ಹೇಳಿದ್ದೇನಂದರೆ: ನೀವು ಅವರ ಬಳಿಗೆ ಪ್ರವೇಶಿಸ ಬಾರದು, ಅವರು ನಿಮ್ಮ ಬಳಿಗೆ ಪ್ರವೇಶಿಸ ಬಾರದು; ನಿಶ್ಚಯವಾಗಿ ಅವರು ನಿಮ್ಮ ಹೃದಯವನ್ನು ತಮ್ಮ ದೇವರುಗಳ ಕಡೆಗೆ ತಿರುಗಿಸುವರು. ಹೀಗೆ ಸೊಲೊಮೋನ ನ ಹೆಂಡರು ಅವನು ಮುದುಕನಾದ ಕಾಲದಲ್ಲಿ ಅವನ ಹೃದಯವ ನ್ನು ಅನ್ಯ ದೇವರುಗಳ ಕಡೆಗೆ ತೊಲಗಿಸಿದರು. ಹೀಗೆ ಸೊಲೊ ಮೋನನು ಯೆಹೋವನ ಸಮುಖದಲ್ಲಿ ಕೆಟ್ಟದ್ದನ್ನು ಮಾಡಿದನು. ಆದ ಕಾರಣ ಯೆಹೋವನು ಅವನ ಮೇಲೆ ಕೋಪಿಸಿ ಕೊಂಡು, ಅ ವನಿಗೆ: ನೀನು ನನ್ನ ಒಡಂಬಡಿಕೆಯನ್ನು ಕೈಕೊಳ್ಳದೆ ಹೋದದರಿಂ ದ, ನಾನು ರಾಜ್ಯವನ್ನು ನಿನ್ನಿಂದ ಕಸುಕೊಂಡು, ನಿನ್ನ ಸೇವಕನಿಗೆ ಕೊಡುವೆನು. ಆದರೆ ನಿನ್ನ ತಂದೆಯಾದ ದಾವೀದನಿಗೋಸ್ಕರ ನಿನ್ನ ಕಾಲದಲ್ಲಿ ನಾನು ಇದನ್ನು ಮಾಡದೆ, ನಿನ್ನ ಮಗನ ಕೈಯೊಳಗಿಂ ದ ಅದನ್ನು ಕಸುಕೊಳ್ಳುವೆನು, ಅಂದನು. ಸೊಲೊಮೋನನು ಯೆ ರೂಸಲೇಮಿನಲ್ಲಿ ಸಮಸ್ತ ಇಸ್ರಯೇಲಿನ ಮೇಲೆ ಆಳಿದ ದಿವಸಗಳು

ನಾಲ್ವತ್ತು ವರುಷಗಳಾಗಿದ್ದವು. ಮತ್ತು ಅವನು ತನ್ನ ಪಿತೃಗಳ ಸಂಗಡ ಮಲಗಿದನು. ಅವನ ತರುವಾಯ ಅವನ ಮಗನಾದ ರೆಹಬಾಮನು ಅರಸನಾದನು.

II. 36. ಬಾ. 98. II. 73. 47.

---

## ೪೩. ರಾಜ್ಯದ ವಿಭಾಗ.

(೧ ಅರಸು. ೧೨.)

(ಕ್ರಿಸ್ತನ ಜನ್ಮದ ಮುಂಚೆ ೯೭೫.)

೧) ರೆಹಬಾಮನು ಶೇಕೆಮಿಗೆ ಹೋದನು; ಯಾಕಂದರೆ ಅವನನ್ನು ಅರಸನಾಗ ಮಾಡುವದಕ್ಕೆ ಸಮಸ್ತ ಇಸ್ರಯೇಲ್ಯರು ಶೇಕೆಮಿಗೆ ಬಂದರು. ಮತ್ತು ಅವರು ರೆಹಬಾಮನಿಗೆ: ನಿನ್ನ ತಂದೆಯು ನಮ್ಮ ನೊಗವನ್ನು ಕಠಿಣವಾಗ ಮಾಡಿದನು; ಈಗ ನೀನು ನಿನ್ನ ತಂದೆಯ ಸೇವೆಯನ್ನೂ ಅವನ ಭಾರವಾದ ನೊಗವನ್ನೂ ಹೌರ ಮಾಡಿದರೆ, ನಾವು ನಿನ್ನನ್ನು ಸೇವಿಸುವೆವು, ಅಂದರು. ಆದರೆ ರೆಹಬಾಮನು ತನ್ನ ತಂದೆಯ ಮುಂದೆ ನಿಲ್ಲುವ ಹಿರಿಯರ ಆಲೋಚನೆ ಕೇಳದೆ, ತನ್ನ ಸಂಗಡ ಬೆಳೆದ ಪ್ರಾಯಸ್ಥರ ಆಲೋಚನೆ ಕೇಳಿ, ಇಸ್ರಯೇಲ್ಯರಿಗೆ ಪ್ರತ್ಯುತ್ತರವಾಗಿ ಹೇಳಿದ್ದೇನಂದರೆ:—ನನ್ನ ಕಿರುಬೆರಳು ನನ್ನ ತಂದೆಯ ನಡುವಿಗಿಂತ ದಪ್ಪವಾಗಿರುವದು; ನನ್ನ ತಂದೆಯು ನಿಮ್ಮನ್ನು ಚಬುಕುಗಳಿಂದ ಶಿಕ್ಷಿಸಿದನು, ಆದರೆ ನಾನು ನಿಮ್ಮನ್ನು ಚೇಳುಗಳಿಂದ ಶಿಕ್ಷಿಸುವೆನು. ಆಗ ಸಮಸ್ತ ಇಸ್ರಯೇಲ್ಯರು: ದಾವೀದನಲ್ಲಿ ನಮಗೆ ಭಾಗವೇನು? ಇಸ್ರಯೇಲ್ಯರೇ, ನಿಮ್ಮ ಗುಡಾರಗಳಿಗೆ ಹೋಗಿರಿ, ಅಂದರು. ಹೀಗೆ ಇಸ್ರಯೇಲ್ಯರು ದಾವೀದನ ಮನೆಯನ್ನು ಬಿಟ್ಟು, ಎಫ್ರಾಯಿಮ್ ಗೋತ್ರದವನಾದ ಯರೊಬಾಮನನ್ನು ತಮ್ಮ ಮೇಲೆ ಅರಸನಾಗ ಮಾಡಿ ಕೊಂಡರು. ಯೆಹೂದನ ಕುಲವು ಹೊರ್ತಾಗಿ, ದಾವೀದನ ಮನೆಯನ್ನು ಹಿಂಬಾ

ಲಿಸುವವರು ಯಾರೂ ಇಲ್ಲ. ರೆಹಬಾಮನು ಯೆರೂಸಲೇಮಿಗೆ ಬಂದ ತರುವಾಯ, ರಾಜ್ಯವನ್ನು ತಿರಿಗಿ ಬರ ಮಾಡುವ ಹಾಗೆ, ಇಸ್ರಯೇಲಿನ ಮೇಲೆ ಯುದ್ಧ ಮಾಡಲಿಕ್ಕೆ ಬೆನ್ಯಮೀನ್ ಮತ್ತು ಯೆಹೂದನ ಕುಲಗಳಿಂದ ಲಕ್ಷದ ಎಂಭತ್ತು ಸಾವಿರ ಜನರನ್ನು ಕೂಡಿಸಿದನು. ಆದರೆ ದೇವರ ವಾಕ್ಯವು ಪ್ರವಾದಿಯಾದ ಶೆಮಾಯನಿಗೆ ಉಂಟಾಯಿತು. ಇವನು ರೆಹಬಾಮನಿಗೂ ಮಿಕ್ಕಾದ ಜನರಿಗೂ: ನೀವು ನಿಮ್ಮ ಸಹೋದರರಿಗೆ ವಿರೋಧವಾಗಿ ಯುದ್ಧ ಮಾಡ ಹೋಗದೆ, ನಿಮ್ಮ ಮನೆಗೆ ತಿರುಗಿರಿ; ಯಾಕಂದರೆ ಈ ಕಾರ್ಯವು ನನ್ನಿಂದ ಉಂಟಾಯಿತೆಂದು, ಯೆಹೋವನು ಹೇಳುತ್ತಾನೆ, ಅಂದನು. ಅವರು ಯೆಹೋವನ ಮಾತನ್ನು ಕೇಳಿ, ತಿರಿಗಿ ಹೋದರು.

೨) ಮತ್ತು ಯರೊಬಾಮನು ತನ್ನ ಹೃದಯದಲ್ಲಿ ಅಂದು ಕೊಂಡದ್ದೇನಂದರೆ:—ಈ ಜನರು ಯೆರೂಸಲೇಮಿಗೆ ಬಲಿಯರ್ಪಿಸ ಹೋದರೆ, ಅವರ ಹೃದಯ ರೆಹಬಾಮನ ಕಡೆಗೆ ತಿರುಗುವದು. ಆದದರಿಂದ ಅರಸನು ಎರಡು ಭಂಗಾರದ ಹೋರಿಗಳನ್ನು ಮಾಡಿಸಿ, ಜನರಿಗೆ: ಯೆರೂಸಲೇಮಿನ ವರೆಗೂ ಏರಿ ಹೋಗುವದು ನಿಮಗೆ ಹೆಚ್ಚಾಗಿದೆ; ಇಸ್ರಯೇಲೇ, ಐಗುಪ್ತದಿಂದ ನಿನ್ನನ್ನು ಬರ ಮಾಡಿದ ನಿನ್ನ ದೇವರುಗಳು, ಇಗೋ, ಅಂದನು. ಮತ್ತು ಅವನು ಒಂದನ್ನು ಬೆತೇಲಿನಲ್ಲಿಯೂ ಮತ್ತೊಂದನ್ನು ಡಾನಿನಲ್ಲಿಯೂ ಇಟ್ಟನು. ಇದಲ್ಲದೆ ಅವನು ಅಲ್ಲಿ ಹಬ್ಬವನ್ನು ನೇಮಿಸಿ, ಪೀಠದ ಮೇಲೆ ಬಲಿಗಳನ್ನು ಅರ್ಪಿಸಿ, ಧೂಪವನ್ನು ಸುಟ್ಟನು.

ಆದರೆ ಇಗೋ, ಅವನು ಬಲಿಪೀಠದ ಬಳಿಯಲ್ಲಿ ನಿಂತಿರುವಾಗ, ಒಬ್ಬ ಪ್ರವಾದಿಯು ಯೆಹೂದದಿಂದ ಬೆತೇಲಿಗೆ ಯೆಹೋವನ ಮಾತಿನಿಂದ ಬಂದನು. ಅವನು ಆ ಪೀಠಕ್ಕೆ ವಿರೋಧವಾಗಿ ಯೆಹೋವನ ಮಾತಿನಿಂದ ಕೂಗಿ ಹೇಳಿದ್ದೇನಂದರೆ:—ಪೀಠವೇ, ಪೀಠವೇ, ಇಗೋ, ದಾವೀದನ ಮನೆಗೆ ಯೊಷೀಯನೆಂಬ ಹೆಸರುಳ್ಳ ಒಬ್ಬ ಕುಮಾರನು ಹುಟ್ಟುವನು; ಅವನು ನಿನ್ನ ಮೇಲೆ ಧೂಪ ಅ

ರ್ಪಿಸುವ ಮೇಡುಗಳ ಯಾಜಕರನ್ನು ಬಲಿಯಾಗಿ ಅರ್ಪಿಸುವನು; ಮತ್ತು ಮನುಷ್ಯರ ಎಲುವುಗಳನ್ನು ನಿನ್ನ ಮೇಲೆ ಸುಡುವನೆಂದು, ಯೆಹೋವನು ಹೇಳುತ್ತಾನೆ, ಅಂದನು. ಆಗ ಅರಸನಾದ ಯರೊಬಾಮನು ಈ ಮಾತುಗಳನ್ನು ಕೇಳಿದಾಗ, ತನ್ನ ಕೈಚಾಚಿ: ಅವನನ್ನು ಹಿಡಿ, ಅಂದನು. ಆಗಲೇ ಅವನ ಕೈ ಹಿಂದಕ್ಕೆ ಎಳ ಕೊಳ್ಳ ಕೂಡದ ಹಾಗೆ ಒಣಗಿ ಹೋಯಿತು. ಮತ್ತು ಪೀಠವು ಶೀಳಿ ಹೋಗಿ, ಬೂದಿಯು ಪೀಠದಿಂದ ಚೆಲ್ಲಿ ಹೋಯಿತು. ಹೀಗಿರಲಾಗಿ ಅರಸನು ಪ್ರವಾದಿಗೆ: ನನ್ನ ಕೈ ಗುಣವಾಗುವ ಹಾಗೆ ನೀನು ನಿನ್ನ ದೇವರಾದ ಯೆಹೋವನನ್ನು ಬೇಡಿಕೋ, ಅಂದನು. ಪ್ರವಾದಿಯು ಬೇಡಿ ಕೊಂಡದರಿಂದ ಅವನ ಕೈ ಗುಣವಾಗಿ, ಮುಂಚಿನ ಹಾಗೆ ಆಯಿತು. ಮತ್ತು ಅರಸನು ಪ್ರವಾದಿಗೆ: ನೀನು ನನ್ನ ಮನೆಗೆ ಬಂದು, ವಿಶ್ರಮಿಸಿಕೋ, ಅಂದಾಗ, ಅವನು: ನೀನು ನನಗೆ ನಿನ್ನ ಅರ್ಧ ಮನೆಯನ್ನು ಕೊಟ್ಟರೂ, ನಾನು ನಿನ್ನ ಸಂಗಡ ಬರುವದಿಲ್ಲ; ಯಾಕಂದರೆ ನೀನು ರೊಟ್ಟಿ ತಿನ್ನ ಬೇಡ; ನೀರನ್ನು ಕುಡಿಯ ಬೇಡ; ನೀನು ಬಂದ ಮಾರ್ಗದಿಂದ ತಿರಿಗಿ ಹೋಗ ಬೇಡ ಎಂದು ಯೆಹೋವನು ನನಗೆ ಆಜ್ಞಾಪಿಸಿದನು ಎಂದು ಹೇಳಿ, ಮತ್ತೊಂದು ಮಾರ್ಗವಾಗಿ ಹೋದನು.

೩) ಆದರೆ ಬೆತೇಲಿನಲ್ಲಿ ಒಬ್ಬ ವೃದ್ಧನಾದ ಪ್ರವಾದಿಯು ವಾಸವಾಗಿದ್ದನು; ಅವನು ಈ ವರ್ತಮಾನವನ್ನು ಕೇಳಿ, ಆ ಬೇರೊಬ್ಬ ಪ್ರವಾದಿಯ ಹಿಂದೆ ಹೋಗಿ, ಅವನಿಗೆ: ನೀನು ಯೆಹೂದದಿಂದ ಬಂದ ಪ್ರವಾದಿಯೋ? ನೀನು ನನ್ನ ಮನೆಗೆ ಬಂದು, ರೊಟ್ಟಿ ತಿನ್ನು, ಅಂದನು. ಅದಕ್ಕವನು: ನಾನು ನಿನ್ನ ಸಂಗಡ ಬರ ಕೂಡದು, ಅಂದನು. ಇವನು ಅವನಿಗೆ: ನಾನು ನಿನ್ನ ಹಾಗೆಯೇ ಪ್ರವಾದಿಯಾಗಿದ್ದೇನೆ; ಒಬ್ಬ ದೂತನು ಬಂದು, ನನಗೆ ಹೇಳಿದ್ದೇನಂದರೆ—ಅವನು ರೊಟ್ಟಿ ತಿಂದು ನೀರು ಕುಡಿಯುವ ಹಾಗೆ, ಅವನನ್ನು ಹಿಂದಕ್ಕೆ ಕರಕೊಂಡು ಬಾ ಎಂದು ಸುಳ್ಳು ಹೇಳಿ, ಅವನನ್ನು ತನ್ನ ಮನೆಗೆ ಕರಕೊಂಡು ಬಂದನು. ಅವನು ಅಲ್ಲಿ ರೊಟ್ಟಿ ತಿಂದು, ನೀರು ಕು

ಡಿದನು. ಅವರು ಮೇಜಿಗೆ ಕುಳಿತಿರುವಾಗ, ಅವನನ್ನು ಹಿಂದಕ್ಕೆ ಕರ ತಂದ ಪ್ರವಾದಿಗೆ ಯೆಹೋವನ ವಾಕ್ಯ ಉಂಟಾಗಿ, ಅವನು ಯೆಹೂದದಿಂದ ಬಂದ ಪ್ರವಾದಿಗೆ ಕೂಗಿ ಹೇಳಿದ್ದೇನಂದರೆ:—ನೀನು ಯೆಹೋವನ ಆಜ್ಞೆಯನ್ನು ಮಿರಿದ್ದರಿಂದ, ನಿನ್ನ ಹೆಣ ನಿನ್ನ ಪಿತೃಗಳ ಸಮಾಧಿಗೆ ಬರುವದಿಲ್ಲವೆಂದು ಯೆಹೋವನು ಹೇಳುತ್ತಾನೆ, ಅಂದನು. ಅವನು ಹೋದಾಗ, ಆದದ್ದೇನಂದರೆ:—ಸಿಂಹವು ಅವನನ್ನು ಹಿಡಿದು, ಕೊಂದು ಹಾಕಿತು; ಅವನ ಹೆಣ ಹಾದಿಯಲ್ಲಿ ಹಾಕಿ,



ಅದರ ಬಳಿಯಲ್ಲಿ ನಿಂತಿತು; ಅವನ ಕತ್ತೆಯು ಸಹ ಅಲ್ಲಿಯೇ ನಿಂತುಕೊಂಡಿತು. ಆ ವರ್ತಮಾನವನ್ನು ಆ ಮುದುಕನಾದ ಪ್ರವಾದಿಯು ಕೇಳಿದಾಗ, ಅವನು ಹೋಗಿ, ಹೆಣವನ್ನು ಎತ್ತಿ, ಹಿಂದಕ್ಕೆ ತಂದನು; ಮತ್ತು ಗೋಳಾಡಿ, ಅವನನ್ನು ಹೂಣಿಟ್ಟನು.

ಈ ಕಾರ್ಯದ ತರುವಾಯ ಯರೊಬಾಮನು ತನ್ನ ಕೆಟ್ಟ ಮಾರ್ಗವನ್ನು ಬಿಟ್ಟು ತಿರುಗಲಿಲ್ಲ.

ಅವನ ತರುವಾಯ ಅವನ ಮಗನಾದ ನಾದಬನು ಇಸ್ರಯೇಲಿನ ಮೇಲೆ ಅರಸನಾದನು. ಎರಡು ವರುಷಗಳ ಮೇಲೆ ಬಾಷನು ಅವನನ್ನು ಕೊಂದು ಹಾಕಿ, ಅವನಿಗೆ ಬದಲಾಗಿ ಅರಸನಾಗಿ ಆಳಿದನು. ಆದರೆ ಬಾಷನು ಸಹ ಯೆಹೋವನ ಮುಂದೆ ಕೆಟ್ಟದ್ದನ್ನು ಮಾಡಿದ್ದರಿಂದ, ಅವನ ಮನೆಯು ನಿರ್ಮೂಲವಾಯಿತು. ಅವನ ತರುವಾಯ ಒಮ್ರಿಯು ಅರಸನಾಗಿ, ಸಮಾರ್ಯವೆಂಬ ಪಟ್ಟಣವನ್ನು

ಕಟ್ಟಿಸಿ, ತನ್ನ ಮುಂಚೆ ಇದ್ದವರೆಲ್ಲರಿಗಿಂತ ಕೆಟ್ಟವನಾಗಿದ್ದನು. ಆ ಮೇಲೆ ಅವನ ಮಗನಾದ ಅಹಾಬನು ಅರಸನಾದನು. ಇವನು ಯರೊಬಾಮನ ಪಾಪಗಳಲ್ಲಿ ನಡೆದು, ಚಿದೋನ್ಯರ ಅರಸನ ಮಗಳಾದ ಇಜೆಬೇಲಳನ್ನು ಮದುವೆ ಮಾಡಿ ಕೊಂಡು, ಬಾಳನನ್ನು ಸೇವಿಸಿ, ಅವನಿಗೆ ಸಮಾರ್ಯದಲ್ಲಿ ಒಂದು ಮನೆಯನ್ನೂ ಬಲಿಪೀಠವನ್ನೂ ಕಟ್ಟಿಸಿದನು. II. 57. ಬಾ. 93.

## ಯೆಹೂದ ಇಸ್ರಯೇಲರ ಅರಸುಗಳು.

(ಅವರನ್ನು ಕೈಗಳ ಸಹಾಯದಿಂದ ನೆನಪು ಮಾಡುವದಕ್ಕೆ ಒಂದು ಉಪಾಯ.)

### ಇಸ್ರಯೇಲಿನ ಅರಸುಗಳು

| | | | | |
|---|---|---|---|---|
| ಮೆನಹೇಮ | ಯೊವಾಷ ೩) | ಅಹಜ್ಯ ೨) ೩) | ಏಲ | ಯರೊಬಾಮ ೧) |
| ಪೆಕಹ್ಯ | ೨ನೇ ಯರೊಬಾಮ ೪) | ಯೆಹೋರಾಮ ೩) | ಜಿಮ್ರಿ | ನಾದಬ |
| ಪೆಕಹ | ಜೆಕರ್ಯ | ಯೇಹೂ ೩) | ಒಮ್ರಿ | ಬಾಷ |
| ಹೋಶೇಯ | ಶಲ್ಲೂಮ | ಯೆಹೋವಾಹಾಜ ೩) | ಅಹಾಬ ೨) | |

ಪ್ರವಾದಿಗಳು:

೪) ಯೋನ, ಆಮೋಸ, ಹೋಶೇಯ

೧) ಅಹೀಯ

೨) ಎಲೀಯ

೩) ಎಲೀಷ

(ಎಡ ಕೈ)

### ಯೆಹೂದದ ಅರಸುಗಳು

| | | | | |
|---|---|---|---|---|
| ರೆಹಬಾಮ | ಯೆಹೋಷಾಫಾಟ | ಯೊವಾಷ | ಅಹಾಜ ೨) | ಯೊಷೀಯ ೩) ೪) |
| ಅಬಿಯಾಮ | ಯೆಹೋರಾಮ | ಅಮಚ್ಯ | ಹಿಜ್ಕೀಯ ೨) | ಯೆಹೋವಾಹಾಜ |
| ಆಸ | ಅಹಜ್ಯ | ಅಜರ್ಯ (ಉಜ್ಜೀಯ) ೧) | ಮನಾಸೆ | ಯೆಹೋಯಕೀಮ |
| | ಅಟಲ್ಯ | ಯೊತಾಮ ೨) | ಅಮೋನ | ಯೆಹೋಯಕೀನ ೪) ೫) |
| | | | | ಚಿದ್ಕೀಯ ೪) ೫) |

ಪ್ರವಾದಿಗಳು:

೧) ಯೋವೇಲ

೨) ಯೆಶಾಯ, ಮೀಕ, ನಹೂಮ

೩) ಒಬದೀಯ, ಹಬಕೂಕ, ಜೆಫನೀಯ

೪) ಯೆರೆಮೀಯ

೫) ಎಜೇಕಿಯೇಲ, ದಾನಿಯೇಲ

(ಬಲ ಕೈ)

## ೪೪. ಪ್ರವಾದಿಯಾದ ಎಲೀಯನು.

(೧ ಅರಸು. ೧೭—೧೯. ೨ ಅರಸು. ೧.)

೧) ತಿಷ್ಬಿಯನಾದ ಎಲೀಯನು ಯೆಹೋವನ ಪ್ರವಾದಿಯಾಗಿದ್ದು, ಅಹಾಬನಿಗೆ: ನಾನು ಯಾವನ ಸಮುಖದಲ್ಲಿ ನಿಲ್ಲುತ್ತೇನೋ, ಆ ಇಸ್ರಯೇಲಿನ ದೇವರಾದ ಯೆಹೋವನ ಜೀವದಾಣೆ, ನನ್ನ ಮಾತಿನ ಪ್ರಕಾರವಲ್ಲದೆ, ಈ ವರುಷಗಳಲ್ಲಿ ಮಂಜೂ ಮಳೆಯೂ ಆಗದು, ಅಂದನು. ಮತ್ತು ಯೆಹೋವನ ಮಾತು ಅವನಿಗೆ ಉಂಟಾಗಿ, ಹೇಳಿದ್ದೇನಂದರೆ:—ನೀನು ಈ ಸ್ಥಳವನ್ನು ಬಿಟ್ಟು, ಕೆರೀತು ಹಳ್ಳದ ಬಳಿಯಲ್ಲಿ ಅಡಗಿ ಕೊಂಡಿರು; ನಿನಗೆ ಆಹಾರವನ್ನು ಕೊಡ ನಾನು ಕಾಗೆಗಳಿಗೆ ಆಜ್ಞಾಪಿಸಿದ್ಧೇನೆ. ಅವನು ಹೋಗಿ, ಯೆಹೋವನ ಮಾತಿನ ಪ್ರಕಾರ ಮಾಡಿದನು. ಕಾಗೆಗಳು ಅವನಿಗೆ ಉದಯ ಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ರೊಟ್ಟಿಯನ್ನೂ ಮಾಂಸವನ್ನೂ ತಕ್ಕೊಂಡು ಬಂದವು. ಆ ಹಳ್ಳದ ನೀರನ್ನು ಕುಡಿಯುತ್ತಿದ್ದನು. ಆ ಹಳ್ಳವು ಬ



ತ್ತಿ ಹೋದಾಗ, ಯೆಹೋವನು ಅವನಿಗೆ: ನೀನೆದ್ದು, ಚಿದೋನಿಗೆ ವಶವಾಗಿರುವ ಚರೆಪ್ತಕ್ಕೆ ಹೋಗಿ, ಅಲ್ಲಿ ವಾಸವಾಗಿರು; ಇಗೋ, ಅಲ್ಲಿರುವ ಒಬ್ಬ ವಿಧವೆ ಸ್ತ್ರೀಗೆ ನಿನ್ನನ್ನು ಸಂರಕ್ಷಣೆ ಮಾಡ ಆಜ್ಞಾಪಿಸಿದೆನು, ಅಂದನು. ಎಲೀಯನು ಆ ಪಟ್ಣದ ಬಾಗಲ ಬಳಿಗೆ ಬಂದಾಗ, ಇಗೋ, ಅಲ್ಲಿ ಒಬ್ಬ ವಿಧವೆ ಸ್ತ್ರೀಯು ಕಟ್ಟಿಗೆಗಳನ್ನು ಆರಿಸಿಕೊಳ್ಳುತ್ತಾ ಇದ್ದಳು. ಅವನು ಅವಳಿಗೆ: ನೀನು ದಯ ಮಾಡಿ, ನನಗೆ ಸ್ವಲ್ಪ ನೀರನ್ನೂ ರೊಟ್ಟಿಯನ್ನೂ ತಕ್ಕೊಂಡು ಬಾ, ಅಂದನು. ಅದಕ್ಕವಳು: ಯೆಹೋವನ ಜೀವದಾಣೆ, ಕೊಡದಲ್ಲಿ ಒಂದು ಹಿಡಿ ಹಿಟ್ಟೂ ತಂಬಿಗೆಯಲ್ಲಿ ಸ್ವಲ್ಪ ಎಣ್ಣೆಯೂ ಹೊರ್ತಾಗಿ, ನನಗೆ ಒಂದು ದೋಶೆಯೂ ಇಲ್ಲ; ಇಗೋ, ನಾನೂ ನನ್ನ ಕುಮಾರನೂ ಅದನ್ನು ತಿಂದು ಸತ್ತು ಹೋಗುವ ಹಾಗೆ, ಅದನ್ನು ನನಗೂ ಅವನಿಗೂ ಸಿದ್ಧ ಮಾಡ ಎರಡು ಕಟ್ಟಿಗೆಗಳನ್ನು ಆರಿಸಿ ಕೊಂಡಿದ್ದೇನೆ, ಅಂದಳು. ಆಗ ಎಲೀಯನು ಅವಳಿಗೆ: ಭಯ ಪಡ ಬೇಡ; ನೀನು ಹೋಗಿ, ನಿನ್ನ ಮಾತಿನ ಪ್ರಕಾರ ಮಾಡು; ಆದರೆ ಮೊದಲು ನನಗೆ ಒಂದು ಚಿಕ್ಕ ರೊಟ್ಟಿ ಮಾಡಿ, ತಕ್ಕೊಂಡು ಬಾ; ತರುವಾಯ ನಿನಗೂ ನಿನ್ನ ಮಗನಿಗೂ ಸಿದ್ಧ ಮಾಡಿಕೋ; ಯಾಕಂದರೆ ಯೆಹೋವನು ಭೂಮಿಯ ಮೇಲೆ ಮಳೆಯನ್ನು ಕೊಡುವ ಪರಿಯಂತರಕ್ಕೂ ಕೊಡದಲ್ಲಿರುವ ಹಿಟ್ಟು ತೀರುವದಿಲ್ಲ; ತಂಬಿಗೆಯಲ್ಲಿರುವ ಎಣ್ಣೆಯು ಮುಗಿಯುವದಿಲ್ಲ ಎಂದು, ಯೆಹೋವನು ಹೇಳುತ್ತಾನೆ, ಅಂದನು. ಆಗಲವಳು ಹೋಗಿ, ಎಲೀಯನ ಮಾತಿನ ಹಾಗೆಯೇ ಮಾಡಿದಳು. ಹೀಗೆ ಅವಳೂ ಇವನೂ ಅವಳ ಮನೆಯವರೂ ಅನೇಕ ದಿವಸ ಉಂಡರು. ಯೆಹೋವನ ಮಾತಿನ ಪ್ರಕಾರ ಕೊಡದಲ್ಲಿರುವ ಹಿಟ್ಟು ತೀರದೆ, ತಂಬಿಗೆಯಲ್ಲಿರುವ ಎಣ್ಣೆಯು ಮುಗಿಯದೆ ಇತ್ತು.

ಇವುಗಳ ತರುವಾಯ ಆ ಸ್ತ್ರೀಯ ಮಗನು ರೋಗದಲ್ಲಿ ಬಿದ್ದು, ಸತ್ತನು. ಆಗ ಅವಳು ಎಲೀಯನಿಗೆ: ದೇವರ ಮನುಷ್ಯನೇ, ನನ್ನ ಅಕ್ರಮವನ್ನು ಜ್ಞಾಪಕ ಪಡಿಸಿ, ನನ್ನ ಮಗನನ್ನು ಸಾಯ ಮಾಡ

ನನ್ನ ಬಳಿಗೆ ಬಂದಿಯೋ? ಅಂದಳು. ಅವನು ಅವಳ ಮಗನನ್ನು ತಾನು ವಾಸವಾಗಿರುವ ಉಪ್ಪರಿಗೆಗೆ ತಕ್ಕೊಂಡು ಹೋಗಿ, ತನ್ನ ಮಂಚದ ಮೇಲೆ ಮಲಗಿಸಿ, ಪ್ರಾರ್ಥನೆ ಮಾಡಿ, ಚಿಕ್ಕವನ ಮೇಲೆ ಮೂರು ಸಾರಿ ಬೋರ್ಲ ಬಿದ್ದು, ಅವನ ಪ್ರಾಣವು ಅವನಲ್ಲಿ ತಿರಿಗಿ ಬರಲಿ ಎಂದು, ಯೆಹೋವನಿಗೆ ಕೂಗಿದನು. ಯೆಹೋವನು ಅವನ ಶಬ್ದವನ್ನು ಕೇಳಿದ್ದರಿಂದ, ಚಿಕ್ಕವನ ಪ್ರಾಣವು ತಿರಿಗಿ ಅವನೊಳಗೆ ಬಂತು. ಎಲೀಯನು ಅವನನ್ನು ಅವನ ತಾಯಿಗೆ ಕೊಟ್ಟನು.

೨) ಮೂರನೇ ವರುಷದಲ್ಲಿ ಯೆಹೋವನ ವಾಕ್ಯವು ಎಲೀಯನಿಗೆ ಉಂಟಾಗಿ, ಹೇಳಿದ್ದೇನಂದರೆ:—ನೀನು ಹೋಗಿ, ಅಹಾಬನಿಗೆ ನಿನ್ನನ್ನು ತೋರಿಸು; ಆಗ ನಾನು ಭೂಮಿಯ ಮೇಲೆ ಮಳೆಯನ್ನು ಕೊಡುವೆನು. ಅಹಾಬನು ಎಲೀಯನನ್ನು ನೋಡಿದಾಗ, ಅವನಿಗೆ: ಇಸ್ರಯೇಲನ್ನು ತೊಂದರೆಗೊಳ್ಳಿಸುವವನು ನೀನಲ್ಲವೋ? ಅಂದನು. ಅದಕ್ಕವನು: ನಾನು ಇಸ್ರಯೇಲನ್ನು ತೊಂದರೆ ಗೊಳ್ಳಿಸುವದಿಲ್ಲ; ಆದರೆ ನೀನೂ ನಿನ್ನ ತಂದೆಯ ಮನೆಯವರೂ ಯೆಹೋವನ ಆಜ್ಞೆಗಳನ್ನು ಬಿಡುವದರಿಂದಲೇ, ಮತ್ತು ಬಾಳೀಮುಗಳನ್ನು ಹಿಂಬಾಲಿಸಿದರಿಂದಲೇ ಇಸ್ರಯೇಲನ್ನು ತೊಂದರೆ ಗೊಳ್ಳಿಸಿದ್ಧೀರಿ. ಆದದರಿಂದ ನೀನು ಕಳುಹಿಸಿ, ಕರ್ಮೇಲು ಬೆಟ್ಟದ ಬಳಿಯಲ್ಲಿ ಸಮಸ್ತ ಇಸ್ರಯೇಲನ್ನೂ ಬಾಳನ ನಾನೂರ ಐವತ್ತು ಮಂದಿ ಪ್ರವಾದಿಗಳನ್ನೂ ಇಜೆಬೇಲಳ ಮೇಜಿನಲ್ಲಿ ಭೋಜಿಸುವ ತೋಪುಗಳ ನಾನೂರು ಮಂದಿ ಪ್ರವಾದಿಗಳನ್ನೂ ನನ್ನ ಬಳಿಗೆ ಕೂಡಿಸು, ಅಂದನು. ಅಹಾಬನು ಹಾಗೆಯೇ ಮಾಡಿದನು. ಆಗ ಎಲೀಯನು ಸಕಲ ಜನರಿಗೆ: ನೀವು ಎರಡು ಯೋಚನೆಗಳಿಂದ ಎಷ್ಟು ವರೆಗೂ ಕುಂಟುತ್ತಾ ಇರುವಿರಿ? ಯೆಹೋವನು ದೇವರಾಗಿದ್ದರೆ, ಅವನನ್ನು ಹಿಂಬಾಲಿಸಿರಿ; ಬಾಳನು ದೇವರಾಗಿದ್ದರೆ, ಅದನ್ನು ಹಿಂಬಾಲಿಸಿರಿ! ಅಂದನು. ಜನರು ಅವನಿಗೆ ಪ್ರತ್ಯುತ್ತರವಾಗಿ ಮಾತಾಡಲಿಲ್ಲ. ಮತ್ತು ಎಲೀಯನು ಜನರಿಗೆ ಹೇಳಿದ್ದೇನಂದರೆ:—ಯೆಹೋವನ ಪ್ರವಾದಿಗಳಲ್ಲಿ ನಾ

ನೊಬ್ಬನೇ ಉಳಿದಿದ್ದೇನೆ; ಆದರೆ ಬಾಳನ ಪ್ರವಾದಿಗಳು ನಾನೂರ ಐವತ್ತು ಮಂದಿಯಾಗಿದ್ದಾರೆ. ಈಗ ಎರಡು ಹೋರಿಗಳನ್ನು ನಮಗೆ ಕೊಡಲಿ; ಒಂದು ಹೋರಿಯನ್ನು ಅವರು ಆದು ಕೊಂಡು, ತುಂಡು ತುಂಡಾಗಿ ಕಡಿದು, ಬೆಂಕಿ ಹಾಕದೆ, ಕಟ್ಟಿಗೆಯ ಮೇಲೆ ಇಡಲಿ; ನಾನು ಇನ್ನೊಂದು ಹೋರಿಯನ್ನು ಹಾಗೆಯೇ ಮಾಡಿ, ಬೆಂಕಿ ಹಾಕದೆ, ಕಟ್ಟಿಗೆಯ ಮೇಲೆ ಇಡುವೆನು. ಆಗ ನೀವು ನಿಮ್ಮ ದೇವರ ಹೆಸರನ್ನು ಕರೆಯಿರಿ; ನಾನು ಯೆಹೋವನ ಹೆಸರನ್ನು ಕರೆಯುವೆನು. ಮತ್ತು ಬೆಂಕಿಯಿಂದ ಪ್ರತ್ಯುತ್ತರ ಕೊಡುವ ದೇವರು ತಾನೇ ದೇವರಾಗಿರಲಿ, ಅಂದನು. ಅದಕ್ಕೆ ಜನರೆಲ್ಲರು: ಈ ಮಾತು ಒಳ್ಳೇದು, ಅಂದರು. ಆ ಮೇಲೆ ಬಾಳನ ಪ್ರವಾದಿಗಳು ಒಂದು ಹೋರಿಯನ್ನು ತೆಗೆದು ಕೊಂಡು, ಅರ್ಪಣೆ ಮಾಡಿ, ಬಾಳನೇ, ನಮಗೆ ಪ್ರತ್ಯುತ್ತರ ಕೊಡು ಎಂದು ಕೂಗಿದರು; ಆದರೆ ಒಂದು ಶಬ್ದವೂ ಇಲ್ಲ, ಪ್ರತ್ಯುತ್ತರ ಕೊಡುವವನೂ ಇಲ್ಲ. ಅವರು ಮಾಡಿದ ಬಲಿಪೀಠದ ಸುತ್ತಲು ಹಾರ್‍ಯಾಡಿದರು. ಮಧ್ಯಾಹ್ನದಲ್ಲಿ ಎಲೀಯನು ಅವರನ್ನು ಗೇಲಿ ಮಾಡಿ, ಅವರಿಗೆ: ದೊಡ್ಡ ಶಬ್ದದಿಂದ ಕರೆಯಿರಿ, ಯಾಕಂದರೆ ಅವನು ದೇವರೇ! ಒಂದು ವೇಳೆ ಧ್ಯಾನದಲ್ಲಿದ್ದಾನೆ, ಇಲ್ಲವೆ ಕೆಲಸದಲ್ಲಿದ್ದಾನೆ, ಇಲ್ಲವೆ ಪ್ರಯಾಣದಲ್ಲಿದ್ದಾನೆ; ಇಲ್ಲವೆ ಅವನು ನಿದ್ದೆ ಮಾಡುತ್ತಾನೆ, ಅವನನ್ನು ಎಚ್ಚರಿಸ ಬೇಕು! ಅಂದನು. ಅವರು ದೊಡ್ಡ ಶಬ್ದದಿಂದ ಕೂಗಿ, ತಮ್ಮ ಮರ್ಯಾದೆಯ ಪ್ರಕಾರ, ರಕ್ತವು ತಮ್ಮ ಮೇಲೆ ಸೋರುವ ಮಟ್ಟಿಗೂ ಕತ್ತಿಯಿಂದ ತಮ್ಮನ್ನು ಕೊಯಿದು ಕೊಂಡರು. ಆದರೆ ಪ್ರತ್ಯುತ್ತರ ಆಗಲಿಲ್ಲ. ಆಗ ಸಾಯಂಕಾಲದ ಬಲಿಯನ್ನು ಅರ್ಪಿಸುವ ವೇಳೆಯಲ್ಲಿ ಎಲೀಯನು ಇಸ್ರಯೇಲ್ ಕುಲಗಳ ಪ್ರಕಾರ ಹನ್ನೆರಡು ಕಲ್ಲುಗಳನ್ನು ತಂದು, ಯೆಹೋವನಿಗೆ ಒಂದು ಬಲಿಪೀಠವನ್ನು ಕಟ್ಟಿ, ಅದರ ಸುತ್ತಲು ಒಂದು ಕಾಲಿವೆಯನ್ನು ಮಾಡಿ, ಬಲಿಯನ್ನು ತುಂಡಾಗಿ ಕಡಿದು, ಕಟ್ಟಿಗೆಯ ಮೇಲೆ ಇಟ್ಟನು. ಮತ್ತು ಆ ಕಾಲಿವೆಯನ್ನು ನೀ

ರಿನಿಂದ ತುಂಬಿಸಿ, ಕಟ್ಟೆಗೆಯ ಮೇಲೆಯೂ ನೀರನ್ನು ಹೊಯಿಸಿದನು. ಆಗಲವನು ಸಮಿಾಪಕ್ಕೆ ಬಂದು, ಹೇಳಿದ್ದೇನಂದರೆ:—ಅಬ್ರಹಾಮನಿಗೂ ಇಸಾಕನಿಗೂ ಇಸ್ರಯೇಲಿಗೂ ದೇವರಾದ ಯೆಹೋವನೇ, ಇಸ್ರಯೇಲಿನಲ್ಲಿ ನೀನು ದೇವರೆಂದೂ ನಾನು ನಿನ್ನ ಸೇವಕನೆಂದೂ ನಾನು ಈ ಕಾರ್ಯಗಳನ್ನೆಲ್ಲಾ ನಿನ್ನ ಮಾತಿನ ಹಾಗೆ ಮಾಡಿದೆನೆಂದೂ ಈ ಜನವು ತಿಳಿಯುವ ಹಾಗೆ, ನನಗೆ ಪ್ರತ್ಯುತ್ತರ ಕೊಡು. ಆಗ ಯೆಹೋವನ ಬೆಂಕಿಯು ಇಳಿದು ಬಂದು, ಹೋಮವನ್ನೂ ಕಟ್ಟೆಗೆಯನ್ನೂ ಕಲ್ಲುಗಳನ್ನೂ ಮಣ್ಣನ್ನೂ ತಿಂದು ಬಿಟ್ಟು, ಕಾಲಿವೆಯಲ್ಲಿದ್ದ ನೀರನ್ನು ನೆಕ್ಕಿ ಬಿಟ್ಟಿತು. ಜನರೆಲ್ಲರು ಇದನ್ನು ನೋಡಿದಾಗ, ಬೋರ್ಲ ಬಿದ್ದು: ಯೆಹೋವನು ತಾನೇ ದೇವರು, ಯೆಹೋವನು ತಾನೇ ದೇವರು, ಅಂದರು. ಆಗ ಎಲೀಯನು ಅವರಿಗೆ: ಬಾಳನ ಪ್ರವಾದಿಗಳನ್ನು ಹಿಡಿಯಿರಿ, ಅವರಲ್ಲಿ ಒಬ್ಬನೂ ತಪ್ಪಿಸಿಕೊಳ್ಳದೆ ಇರಲಿ, ಅಂದನು. ಇವರು ಅವರನ್ನು ಹಿಡಿದರು; ಮತ್ತು ಎಲೀಯನು ಅವರನ್ನು ಕಿಷೋನು ಹಳ್ಳದ ಬಳಿಗೆ ತಕ್ಕೊಂಡು ಹೋಗಿ, ಅಲ್ಲಿ ಅವರನ್ನು ಕೊಂದು ಹಾಕಿದನು. ಇದರ ಮೇಲೆ ಎಲೀಯನು ಕರ್ಮೆಲು ಶಿಖರದಲ್ಲಿ ಏರಿ, ನೆಲದ ಮೇಲೆ ಬಿದ್ದು, ಪ್ರಾರ್ಥನೆ ಮಾಡಿ, ತನ್ನ ಸೇವಕನಿಗೆ: ನೀನು ಏರಿ ಹೋಗಿ, ಸಮುದ್ರದ ಕಡೆ ನೋಡು, ಅಂದನು. ಅವನು ಹೋಗಿ, ನೋಡಿ, ಏನೂ ಇಲ್ಲ, ಅಂದನು. ಏಳು ಸಾರಿ ತಿರಿಗಿ ಹೋಗಿ, ನೋಡು, ಅಂದನು. ಏಳನೇ ಸಾರಿ ಏನಾಯಿತಂದರೆ—ಇವನು: ಇಗೋ, ಸಮುದ್ರದಲ್ಲಿಂದ ಒಬ್ಬ ಮನುಷ್ಯನ ಅಂಗೈಯಷ್ಟು ಚಿಕ್ಕ ಮೇಘವು ಏಳುತ್ತದೆ, ಅಂದನು. ಆಗ ಇದ್ದಕ್ಕಿದ್ದ ಹಾಗೆ ಆಕಾಶವು ಮೇಘಗಳಿಂದಲೂ ಘಾಳಿಯಿಂದಲೂ ಕಪ್ಪಾಗಿ, ದೊಡ್ಡ ಮಳೆ ಉಂಟಾಯಿತು. ಮತ್ತು ಅಹಾಬನು ರಥದಲ್ಲಿ ಏರಿ, ಇಜ್ರೇಲಿಗೆ ಹೋದನು.

೩) ಎಲೀಯನು ಮಾಡಿದ್ದೆಲ್ಲವನ್ನು ಅಹಾಬನು ತನ್ನ ಹೆಂಡತಿಯಾದ ಇಜೆಬೇಲಳಿಗೆ ತಿಳಿಸಿದಾಗ, ಅವಳು ಜನ ಕಳುಹಿಸಿ, ಅ

ವನಿಗೆ: ನಾನು ನಾಳೆ ಇಷ್ಟು ಹೊತ್ತಿಗೆ ಅವರಲ್ಲಿರುವ ಒಬ್ಬೊಬ್ಬನ
ಪ್ರಾಣದ ಹಾಗೆ ನಿನ್ನ ಪ್ರಾಣ ಮಾಡದೆ ಹೋದರೆ, ದೇವರುಗಳು
ನನಗೆ ಹೀಗೆಯೂ ಹಾಗೆಯೂ ಮಾಡಲಿ, ಎಂದು ಹೇಳಿದಳು.
ಆದರೆ ಎಲೀಯನು ತಪ್ಪಿಸಿ ಕೊಂಡು, ಅರಣ್ಯಕ್ಕೆ ಹೋದನು. ಅ
ಲ್ಲಿ ಒಂದು ಜಾಲಿ ಮರದ ಕೆಳಗೆ ಕುಳಿತು, ತಾನು ಸಾಯ ಬೇಕೆಂ
ದು ಬೇಡಿ ಕೊಂಡು: ಯೆಹೋವನೇ, ಈಗ ಸಾಕು; ನನ್ನ ಪ್ರಾಣ
ವನ್ನು ತೆಗೆದುಕೋ! ಅಂದನು. ಮತ್ತು, ಇಗೋ, ಅವನು ನಿದ್ದೆ
ಮಾಡುತ್ತಿರುವಾಗ, ಒಬ್ಬ ದೂತನು ಅವನನ್ನು ತಟ್ಟಿ, ಅವನಿಗೆ: ಎ
ದ್ದು, ಉಣ್ಣು, ಅಂದನು. ಅವನು ನೋಡಿದಾಗ, ಇಗೋ, ಕೆಂಡದ
ಲ್ಲಿ ಸುಟ್ಟ ರೊಟ್ಟಿಯೂ ಒಂದು ತಂಬಿಗೆ ನೀರೂ ಅವನ ತಲೆಗಿಂಬಿ
ನ ಬಳಿಯಲ್ಲಿ ಇತ್ತು. ಆಗಲವನು ಉಂಡು, ಕುಡಿದು, ತಿರಿಗಿ ಮಲ
ಗಿ ಕೊಂಡನು. ತಿರಿಗಿ ದೂತನು ಅವನನ್ನು ತಟ್ಟಿ, ಅವನಿಗೆ: ನೀ
ನೆದ್ದು ಉಣ್ಣು; ಯಾಕಂದರೆ ಪ್ರಯಾಣವು ನಿನಗೆ ಹೆಚ್ಚಾಗಿದೆ, ಅಂ
ದನು. ಆಗಲವನು ಉಂಡು, ಕುಡಿದು, ಆ ಭೋಜನದ ಶಕ್ತಿಯಿಂ
ದ ರಾತ್ರಿ ಹಗಲು ನಾಲ್ವತ್ತು ದಿವಸ ಹೋರೆಬು ಎಂಬ ಬೆಟ್ಟದ ಮ
ಟ್ಟಿಗೂ ನಡೆದನು. ಅವನು ಅಲ್ಲಿರುವ ಒಂದು ಗವಿಗೆ ಬಂದು, ಅಲ್ಲಿ
ರಾತ್ರಿ ವಾಸಿಸಿದನು. ಆಗ ಇಗೋ, ಯೆಹೋವನ ವಾಕ್ಯ ಉಂಟಾ
ಗಿ, ಅವನಿಗೆ: ಎಲೀಯನೇ, ಇಲ್ಲಿ ನಿನಗೇನು? ಅಂದನು. ಅದಕ್ಕ
ವನು: ಸೈನ್ಯಗಳ ದೇವರಾದ ಯೆಹೋವನಿಗೋಸ್ಕರ ನಾನು ಬ
ಹು ರೋಷವುಳ್ಳವನಾಗಿದ್ದೆನು; ಯಾಕಂದರೆ ಇಸ್ರಯೇಲ್ ಮಕ್ಕ
ಳು ನಿನ್ನ ಒಡಂಬಡಿಕೆಯನ್ನು ಬಿಟ್ಟು, ನಿನ್ನ ಬಲಿಪೀಠಗಳನ್ನು ಕೆಡ
ವಿ, ನಿನ್ನ ಪ್ರವಾದಿಗಳನ್ನು ಕತ್ತಿಯಿಂದ ಕೊಂದು ಹಾಕಿದ್ಧಾರೆ; ನಾ
ನೊಬ್ಬನೇ ಉಳಿದಿದ್ಧೇನೆ; ಆದರೆ ಅವರು ನನ್ನ ಪ್ರಾಣವನ್ನು ತೆಗೆದು
ಕೊಳ್ಳ ಹುಡುಕುತ್ತಾರೆ, ಅಂದನು. ಆಗ ಆತನು: ನೀನು ಹೊರಗೆ
ಬಂದು, ಯೆಹೋವನ ಮುಂದೆ ಬೆಟ್ಟದ ಮೇಲೆ ನಿಲ್ಲು, ಅಂದನು.
ಮತ್ತು ಇಗೋ, ಯೆಹೋವನು ಹಾದು ಹೋದನು; ಯೆಹೋವ

ನ ಮುಂದೆ ಬೆಟ್ಟಗಳನ್ನು ಭೇದಿಸುವಂಥ, ಗುಡ್ಡಗಳನ್ನು ಒಡೆಯುವಂಥ ಮಹಾ ಘಾಳಿ; ಆ ಘಾಳಿಯಲ್ಲಿ ಯೆಹೋವನು ಇಲ್ಲ. ಘಾಳಿಯ ತರುವಾಯ ಭೂಕಂಪವು; ಆ ಭೂಕಂಪದಲ್ಲಿ ಯೆಹೋವನು ಇಲ್ಲ. ಭೂಕಂಪದ ತರುವಾಯ ಬೆಂಕಿಯು; ಆ ಬೆಂಕಿಯಲ್ಲಿ ಯೆಹೋವನು ಇಲ್ಲ. ಬೆಂಕಿಯ ತರುವಾಯ ಮೆಲ್ಲಗೆಯಾದಂಥ ಸೂಕ್ಷ್ಮವಾದಂಥ ಶಬ್ದವು. ಎಲೀಯನು ಅದನ್ನು ಕೇಳಿದಾಗ, ತನ್ನ ವಸ್ತ್ರದಿಂದ ತನ್ನ ಮುಖವನ್ನು ಮುಚ್ಚಿ ಕೊಂಡು, ಹೊರಗೆ ಬಂದು, ಗವಿಯ ಬಾಯಿಯಲ್ಲಿ ನಿಂತನು. ಆಗ ಇಗೋ, ಎಲೀಯನೇ, ಇಲ್ಲಿ ನಿನಗೇನು? ಎಂಬ ಶಬ್ದವು ಉಂಟಾಯಿತು. ಅದಕ್ಕವನು: ಸೈನ್ಯಗಳ ದೇವರಾದ ಯೆಹೋವನಿಗೋಸ್ಕರ ನಾನು ಮಹಾ ರೋಷವುಳ್ಳವನಾಗಿದ್ದೆನು; ಯಾಕಂದರೆ ಇಸ್ರಯೇಲಿನ ಮಕ್ಕಳು ನಿನ್ನ ಒಡಂಬಡಿಕೆಯನ್ನು ಬಿಟ್ಟು, ನಿನ್ನ ಬಲಿಪೀಠಗಳನ್ನು ಕೆಡವಿ, ನಿನ್ನ ಪ್ರವಾದಿಗಳನ್ನು ಕತ್ತಿಯಿಂದ ಕೊಂದು ಹಾಕಿದ್ದಾರೆ; ನಾನೊಬ್ಬನೇ ಉಳಿದಿದ್ದೇನೆ; ನನ್ನ ಪ್ರಾಣವನ್ನೂ ತೆಗೆದು ಕೊಳ್ಳ ಹುಡುಕುತ್ತಾರೆ, ಅಂದನು. ಆಗ ಯೆಹೋವನು ಅವನಿಗೆ ಹೇಳಿದ್ದೇನಂದರೆ:—ನೀನು ಹೋಗಿ, ಹಜಯೇಲನನ್ನು ಆರಾಮಿನ ಮೇಲೆ ಅರಸನಾಗಿರ ಅಭಿಷೇಕಿಸು. ಇದಲ್ಲದೆ ಯೇಹುವನ್ನು ಇಸ್ರಯೇಲಿನ ಮೇಲೆ ಅರಸನಾಗಿರ ಅಭಿಷೇಕಿಸು; ಮತ್ತು ಎಲೀಷನನ್ನು ನಿನಗೆ ಪ್ರತಿಯಾಗಿ ಪ್ರವಾದಿಯಾಗಿರ ಅಭಿಷೇಕಿಸು. ಆದರೆ ಬಾಳನಿಗೆ ಬೊಗ್ಗದೆ ಇರುವ ಸಕಲ ಮೊಣಕಾಲುಗಳೂ ಅದನ್ನು ಮುದ್ದಿಡದ ಸಕಲ ಬಾಯಿಗಳೂ ಆಗಿರುವ ಏಳು ಸಾವಿರ ಮಂದಿಯನ್ನು ಇಸ್ರಯೇಲಿನಲ್ಲಿ ನನಗೋಸ್ಕರ ಉಳಿಸಿ ಕೊಂಡಿದ್ದೇನೆ. ಹಾಗೆ ಎಲೀಯನು ಅಲ್ಲಿಂದ ಹೊರಟು, ಎಲೀಷನನ್ನು ಕಂಡು ಕೊಂಡನು; ಅವನು ತನ್ನ ಮುಂದೆ ಇರುವ ಹನ್ನೆರಡು ಜೋಡು ಎತ್ತುಗಳಿಂದ ಉಳುತ್ತಿದ್ದನು. ಎಲೀಯನು ಅವನ ಮುಂದೆ ಹಾದು ಹೋಗಿ, ತನ್ನ ವಸ್ತ್ರವನ್ನು ಅವನ ಮೇಲೆ

ಹಾಕಿದನು. ಆಗ ಎಲೀಷನು ಎತ್ತುಗಳನ್ನು ಬಿಟ್ಟು, ಎಲೀಯನ ಹಿಂದೆ ಓಡಿ ಬಂದು, ಅವನಿಗೆ ಸೇವೆ ಮಾಡಿದನು.

೪) ಅಹಾಬನು ಸತ್ತ ತರುವಾಯ ಅವನ ಮಗನಾದ ಅಹಜ್ಯನು ಅರಸನಾದನು. ಅವನು ಸಮಾರ್ಯದಲ್ಲಿರುವ ತನ್ನ ಮೇಲ್ಮಾಳಿಗೆಯ ಜಾಲರು ಕಿಟಕಿಯಿಂದ ಬಿದ್ದು, ರೋಗಿಷ್ಠನಾದನು. ಆಗಲವನು ಎಕ್ರೋನಿನ ದೇವರಾದ ಬಾಳ್ಜೆಬೂಬನ ಬಳಿಗೆ ಜನರನ್ನು ಕಳುಹಿಸಿ: ನಾನು ಈ ರೋಗ ಬಿಟ್ಟು ಬದುಕುವೆನೋ? ಎಂದು ವಿಚಾರಿಸಿದನು. ಆದರೆ ಯೆಹೋವನ ದೂತನು ಎಲೀಯನಿಗೆ ಹೇಳಿದ್ದೇನಂದರೆ:—ನೀನೆದ್ದು, ಅರಸನ ಜನರೆದುರಿಗೆ ಹೋಗಿ, ಅವರಿಗೆ: ಇಸ್ರಯೇಲಿನಲ್ಲಿ ದೇವರು ಇಲ್ಲವೋ? ನೀವು ಎಕ್ರೋನಿನ ದೇವರಾದ ಬಾಳ್ಜೆಬೂಬನ್ನು ವಿಚಾರಿಸ ಹೋಗ ಬೇಕೋ? ಇದರ ನಿಮಿತ್ತ: ನೀನು ಏರಿದ ಮಂಚದಿಂದ ಇಳಿಯದೆ, ಸಾಯಲೇ ಸಾಯುವಿ ಎಂದು ಯೆಹೋವನು ಹೇಳುತ್ತಾನೆ ಎಂದು ಹೇಳು. ಎಲೀಯನು ಹಾಗೆ ಮಾಡಿದನು. ಆಗ ಜನರು ಅರಸನ ಬಳಿಗೆ ತಿರಿಗಿ ಬಂದಾಗ, ಅವನು ಅವರಿಗೆ: ನೀವು ಈಗ ತಿರಿಗಿ ಬಂದದ್ದೇನು? ಅಂದನು. ಅವರು ಅವನಿಗೆ: ಒಬ್ಬ ಮನುಷ್ಯನು ನಮಗೆದುರಾಗಿ ಬಂದು, ನಮಗೆ: ನೀವು ನಿಮ್ಮನ್ನು ಕಳುಹಿಸಿದ ಅರಸನ ಬಳಿಗೆ ತಿರಿಗಿ ಹೋಗಿ—ಇಸ್ರಯೇಲಿನಲ್ಲಿ ದೇವರು ಇಲ್ಲದೆ ಇರುವದರಿಂದಲೋ? ನೀನು ಎಕ್ರೋನಿನ ದೇವರಾದ ಬಾಳ್ಜೆಬೂಬನ್ನು ವಿಚಾರಿಸ ಕಳುಹಿಸುತ್ತಿ; ಇದರ ನಿಮಿತ್ತ ನೀನು ಏರಿದ ಮಂಚದಿಂದ ಇಳಿಯದೆ ಸಾಯಲೇ ಸಾಯುವಿ ಎಂದು ಯೆಹೋವನು ಹೇಳುತ್ತಾನೆ ಎಂದು ನಮಗೆ ತಿಳಿಸಿದನು. ಅರಸನು ಅವರ ಹತ್ತರ, ಆ ಮನುಷ್ಯನ ಪದ್ಧತಿ ಯಾವದೆಂದು ಕೇಳಿದನು. ಅದಕ್ಕವರು: ಅವನು ರೋಮವುಳ್ಳ (ಅಂದರೆ ರೋಮದ ತೊಗಲನ್ನು ಉಟ್ಟು ಕೊಂಡ) ಮನುಷ್ಯನು, ಮತ್ತು ಅವನ ನಡುವಿನ ಸುತ್ತಲು ತೊಗಲಿನ ನಡುಕಟ್ಟು ಇತ್ತು, ಅಂದರು. ಆಗಲವನು: ಆ ಮನುಷ್ಯನು ಎಲೀಯನು ಎಂದು ಹೇಳಿ, ಒಬ್ಬ

ಪ್ರಧಾನನನ್ನೂ ಅವನ ಸಂಗಡ ಐವತ್ತು ಜನರನ್ನೂ ಎಲೀಯನ ಬಳಿಗೆ ಕಳುಹಿಸಿದನು. ಆ ಪ್ರಧಾನನು ಎಲೀಯನಿಗೆ: ದೇವರ ಮನುಷ್ಯನೇ, ಇಳಿದು ಬಾ ಎಂದು ಅರಸನು ಹೇಳುತ್ತಾನೆ, ಅಂದನು. ಎಲೀಯನು ಅವನಿಗೆ ಪ್ರತ್ಯುತ್ತರವಾಗಿ: ನಾನು ದೇವರ ಮನುಷ್ಯನಾಗಿದ್ದರೆ, ಬೆಂಕಿಯು ಆಕಾಶದಿಂದ ಇಳಿದು, ನಿನ್ನನ್ನೂ ನಿನ್ನ ಐವತ್ತು ಮಂದಿಯನ್ನೂ ತಿಂದು ಬಿಡಲಿ, ಅಂದನು. ಸಂಗಡಲೇ ಬೆಂಕಿಯು ಆಕಾಶದಿಂದ ಇಳಿದು, ಅವನನ್ನೂ ಅವನ ಐವತ್ತು ಮಂದಿಯನ್ನೂ ತಿಂದು ಬಿಟ್ಟಿತು. ತಿರಿಗಿ ಅರಸನು ಮತ್ತೊಬ್ಬ ಪ್ರಧಾನನನ್ನೂ ಅವನ ಐವತ್ತು ಮಂದಿಯನ್ನೂ ಕಳುಹಿಸಿದನು. ಅವನು ಬಂದು, ಎಲೀಯನಿಗೆ: ದೇವರ ಮನುಷ್ಯನೇ, ಬೇಗ ಇಳಿದು ಬಾ ಎಂದು ಅರಸನು ಹೇಳುತ್ತಾನೆ, ಅಂದನು. ಎಲೀಯನು ಅವನಿಗೆ: ನಾನು ದೇವರ ಮನುಷ್ಯನಾಗಿದ್ದರೆ, ಬೆಂಕಿಯು ಆಕಾಶದಿಂದ ಇಳಿದು, ನಿನ್ನನ್ನೂ ನಿನ್ನ ಐವತ್ತು ಮಂದಿಯನ್ನೂ ತಿಂದು ಬಿಡಲಿ, ಅಂದನು. ಸಂಗಡಲೇ ದೇವರ ಬೆಂಕಿಯು ಆಕಾಶದಿಂದ ಇಳಿದು, ಅವನನ್ನೂ ಅವನ ಐವತ್ತು ಮಂದಿಯನ್ನೂ ತಿಂದು ಬಿಟ್ಟಿತು. ತಿರಿಗಿ ಅರಸನು ಮೂರನೆಯವನನ್ನೂ ಅವನ ಐವತ್ತು ಮಂದಿಯನ್ನೂ ಕಳುಹಿಸಿದನು. ಇವನು ಎಲೀಯನ ಮುಂದೆ ಮೊಣಕಾಲೂರಿ ಕೊಂಡು, ಅವನಿಗೆ: ದೇವರ ಮನುಷ್ಯನೇ, ನೀನು ದಯ ಮಾಡು, ನನ್ನ ಪ್ರಾಣವೂ ನಿನ್ನ ಸೇವಕರಾದ ಈ ಐವತ್ತು ಮಂದಿಯ ಪ್ರಾಣಗಳೂ ನಿನ್ನ ಸಮುಖದಲ್ಲಿ ಅಮೂಲ್ಯವಾಗಿರಲಿ ಎಂದು ಬೇಡಿ ಕೊಂಡನು. ಆಗ ಯೆಹೋವನ ದೂತನು ಎಲೀಯನಿಗೆ: ಅವನ ಸಂಗಡ ಹೋಗು; ಅರಸನಿಗೆ ಭಯ ಪಡ ಬೇಡ, ಅಂದನು. ಆಗ ಎಲೀಯನು ಅವನ ಸಂಗಡ ಅರಸನ ಬಳಿಗೆ ಹೋಗಿ, ಅವನಿಗೆ ಹೇಳಿದ್ದು: ಆತನ ವಾಕ್ಯವನ್ನು ವಿಚಾರಿಸ ಇಸ್ರಯೇಲಿನಲ್ಲಿ ದೇವರು ಇಲ್ಲವೆಂಬುವ ಹಾಗೆ, ನೀನು ಎಕ್ರೋನಿನ ದೇವರಾದ ಬಾಳ್ಜೆಬೂಬನ್ನು ವಿಚಾರಿಸ ಜನರನ್ನು ಕಳುಹಿಸಿದ ಕಾರಣ, ನೀನು ಏರಿದ ಮಂಚದಿಂದ ಇಳಿಯದೆ,

ಸಾಯಲೇ ಸಾಯುವಿ ಎಂದು ಯೆಹೋವನು ಹೇಳುತ್ತಾನೆ, ಅಂದನು. ಹಾಗೆ ಅರಸನು ಎಲೀಯನು ಹೇಳಿದ ವಾಕ್ಯದ ಪ್ರಕಾರ ಸತ್ತು ಹೋದನು.

III. 29. ಬಾ. 94. 77.

---

## ೪೫. ಪ್ರವಾದಿಯಾದ ಎಲೀಷನು.

( ೨ ಅರಸು. ೨—೮.)

೧) ಯೆಹೋವನು ಎಲೀಯನನ್ನು ಬಿರುಘಾಳಿಯಿಂದ ಎತ್ತಿ ಕೊಳ್ಳುವಾಗ, ಎಲೀಯನು ಎಲೀಷನ ಸಂಗಡ ಮಾತಾಡಿ ಹೇಳಿದ್ದೇನಂದರೆ:—ನೀನು ದಯ ಮಾಡಿ, ಇಲ್ಲಿರು; ಯಾಕಂದರೆ ಯೆಹೋವನು ನನ್ನನ್ನು ಬೆತೇಲಿಗೆ ಕಳುಹಿಸಿದ್ದಾನೆ, ಅಂದನು. ಅದಕ್ಕೆ ಎಲೀಷನು: ಯೆಹೋವನ ಜೀವದಾಣೆ, ನಾನು ನಿನ್ನನ್ನು ಬಿಡುವದಿಲ್ಲ, ಅಂದನು. ಹಾಗೆ ಅವರು ಬೆತೇಲಿಗೆ ಹೋದರು. ಆಗ ಬೆತೇಲಿನಲ್ಲಿರುವ ಪ್ರವಾದಿಗಳ ಮಕ್ಕಳು ಎಲೀಷನ ಬಳಿಗೆ ಬಂದು, ಅವನಿಗೆ: ಇಂದು ಯೆಹೋವನು ನಿನ್ನ ಯಜಮಾನನನ್ನು ನಿನ್ನಿಂದ ತಕ್ಕೊಳ್ಳುವನೆಂದು ತಿಳಿದಿದ್ಧಿಯಾ? ಅಂದರು. ಅದಕ್ಕವನು: ನಾನು ಕೂಡ ಬಲ್ಲೆ; ಸುಮ್ಮನಿರ್ರಿ, ಅಂದನು. ಬೆತೇಲಿನಿಂದ ಅವರು ಯರಿಕೋವಿಗೆ ಬಂದರು. ಅಲ್ಲಿಯೂ ಪ್ರವಾದಿಗಳ ಮಕ್ಕಳು ಎಲೀಷನಿಗೆ ಅದೇ ಪ್ರಕಾರ ಹೇಳಿದರು. ಮತ್ತು ಎಲೀಯನು ಎಲೀಷನಿಗೆ: ನೀನು ದಯ ಮಾಡಿ ಇಲ್ಲಿ ಇರು; ಯಾಕಂದರೆ ಯೆಹೋವನು ನನ್ನನ್ನು ಯೊರ್ದನಿಗೆ ಕಳುಹಿಸಿದ್ಧಾನೆ, ಅಂದನು. ಅದಕ್ಕವನು: ನಾನು ನಿನ್ನನ್ನು ಬಿಡುವದಿಲ್ಲ, ಅಂದನು. ಆಗ ಅವರಿಬ್ಬರು ಮುಂದಕ್ಕೆ ನಡದು, ಯೊರ್ದನಿನ ಬಳಿಯಲ್ಲಿ ನಿಂತರು. ಆದರೆ ಎಲೀಯನು ತನ್ನ ಒಲ್ಲಿಯನ್ನು ತೆಗೆದು, ಮಡಿಸಿ ಕೊಂಡು, ನೀರನ್ನು ಹೊಡೆದನು; ಆಗ ಆ ನೀರು ಈ ಕಡೆ ಆ ಕಡೆ ವಿಭೇದವಾದದರಿಂದ, ಅವರಿಬ್ಬರು

ಒಣಭೂಮಿಯ ಮೇಲೆ ದಾಟಿ ಹೋದರು. ಆ ಮೇಲೆ ಎಲೀಯನು ಎಲೀಷನಿಗೆ: ನಾನು ನಿನ್ನ ಬಳಿಯಿಂದ ತಕ್ಕೊಳ್ಳಲ್ಪಡುವದಕ್ಕಿಂತ ಮುಂಚೆ, ನಿನಗೋಸ್ಕರ ನಾನು ಮಾಡ ಬೇಕಾದದ್ದನ್ನು ಕೇಳು, ಅಂದನು. ಅದಕ್ಕೆ ಎಲೀಷನು: ದಯ ಮಾಡು; ನಿನ್ನ ಆತ್ಮವು ನನಗೆ ಎರಡಷ್ಟಾಗಿ ಆಗಲಿ, ಅಂದನು. ಎಲೀಯನು ಅವನಿಗೆ: ನೀನು ಕಠಿಣವಾದದ್ದನ್ನು ಕೇಳಿದಿ; ಆದರೆ ನಿನ್ನ ಬಳಿಯಿಂದ ತಕ್ಕೊಳ್ಳಲ್ಪಟ್ಟ ನನ್ನನ್ನು ನೀನು ಕಂಡರೆ, ನಿನಗೆ ಹಾಗಾಗುವದು; ಇಲ್ಲದಿದ್ದರೆ ಹಾಗಾಗದು, ಅಂದನು. ಅವರು ನಡದು ಬಂದು, ಮಾತಾಡಿ ಕೊಂಡಿರುವಾಗ, ಇಗೋ, ಬೆಂಕಿಯ ರಥವೂ ಬೆಂಕಿಯ ಕುದುರೆಗಳೂ ಅವರಿಬ್ಬರನ್ನು ಭೇದವಾಗ ಮಾಡಿದವು; ಎಲೀಯನು ಬಿರುಘಾಳಿಯಲ್ಲಿ ಆಕಾಶಕ್ಕೆ ಏರಿ ಹೋದನು. ಎಲೀಷನು ನೋಡಿ: ನನ್ನ ತಂದೆಯೇ, ನನ್ನ ತಂದೆಯೇ, ಇಸ್ರಯೇಲಿನ ರಥವೇ, ಅದರ ಕುದುರೆ ರಾಹುತರೇ, ಎಂದು ಕೂಗಿದನು. ಮತ್ತು ಇನ್ನೂ ಅವನನ್ನು ಕಾಣಲಿಲ್ಲ. ಆಗಲವನು ಎಲೀಯನಿಂದ ಬಿದ್ದ ಒಲ್ಲಿಯನ್ನು ಎತ್ತಿ ಕೊಂಡು, ಹಿಂದಕ್ಕೆ ಹೋಗಿ, ಯೊರ್ದನಿನ ನೀರನ್ನು ಹೊಡೆದು: ಎಲೀಯನ ದೇವರಾದ ಯೆಹೋವನು ಎಲ್ಲಿ? ಅಂದನು. ಆಗಲದು ಈಚೆ ಆಚೆ ವಿಭೇದವಾದದರಿಂದ, ದಾಟಿ ಹೋದನು. ಮತ್ತು ಅವನು ಬೆತೇಲಿಗೆ ಏರಿ ಹೋಗುತ್ತಿರುವಾಗ, ಚಿಕ್ಕ ಹುಡುಗರು ಪಟ್ಣದಿಂದ ಹೊರಟು ಬಂದು, ಅವನನ್ನು ಹಾಸ್ಯ ಮಾಡಿ, ಅವನಿಗೆ: ಬೋಳ ತಲೆಯವನೇ, ಏರಿ ಹೋಗು; ಬೋಳ ತಲೆಯವನೇ, ಏರಿ ಹೋಗು! ಅಂದರು. ಅವನು ಹಿಂದಿರುಗಿ, ಅವರನ್ನು ನೋಡಿ, ಯೆಹೋವನ ಹೆಸರಿನಲ್ಲಿ ಅವರನ್ನು ಶಪಿಸಿದನು. ಆಗ ಅಡವಿಯಲ್ಲಿಂದ ಎರಡು ಕರಡಿಗಳು ಹೊರಟು, ೪೨ ಮಂದಿ ಮಕ್ಕಳನ್ನು ಶೀಳಿ ಬಿಟ್ಟವು.

೨) ಆ ಮೇಲೆ ಪ್ರವಾದಿಗಳ ಮಕ್ಕಳ ಹೆಂಡರಲ್ಲಿ ಒಬ್ಬಳು ಎಲೀಷನಿಗೆ ಕೂಗಿ: ನನ್ನ ಗಂಡನು ಸತ್ತನು; ಈಗ ಸಾಲಗಾರನು ನನ್ನ ಇಬ್ಬರು ಮಕ್ಕಳನ್ನು ತನಗೆ ದಾಸರಾಗಿ ತೆಗೆದು ಕೊಳ್ಳ ಬಂದಿದ್ದಾನೆ,





ಅಂದಳು. ಎಲೀಷನು ಅವಳಿಗೆ: ಮನೆಯಲ್ಲಿ ನಿನಗೇನು ಉಂಟು ನನಗೆ ತಿಳಿಸು, ಅಂದನು. ಅವಳು: ಒಂದು ಕೊಡ ಎಣ್ಣೆ ಅಲ್ಲದೆ ಮತ್ತೊಂದು ಇಲ್ಲ, ಅಂದಳು. ಆಗಲವನು: ನೀನು ಹೋಗಿ, ನಿನ್ನ ಎಲ್ಲಾ ನೆರೆಮನೆಯವರಿಂದ ಬರೀ ಪಾತ್ರೆಗಳನ್ನು ಕೇಳಿಕೋ, ಸ್ವಲ್ಪ ಮಾತ್ರ ತಕ್ಕೊಳ್ಳ ಬೇಡ; ಮತ್ತು ಆ ಪಾತ್ರೆಗಳಲ್ಲೆಲ್ಲಾ ಎಣ್ಣೆಯನ್ನು ಹೊಯಿದು, ಅವುಗಳನ್ನು ತುಂಬಿಸು, ಅಂದನು. ಅವಳು ಹೊಯಿದಳು. ಆ ಪಾತ್ರೆಗಳು ತುಂಬಿದ ತರುವಾಯ, ಅವಳು ತನ್ನ ಮಗನಿಗೆ: ಇನ್ನೊಂದು ಪಾತ್ರೆಯನ್ನು ತಕ್ಕೊಂಡು ಬಾ, ಅಂದಾಗ, ಅವನು:

ಇನ್ನು ಪಾತ್ರೆ ಇಲ್ಲ, ಅಂದನು. ಆಗ ಎಣ್ಣೆ ನಿಂತು ಹೋಯಿತು. ಆಗ ಎಲೀಷನು: ಆ ಎಣ್ಣೆಯನ್ನು ಮಾರಿ, ನಿನ್ನ ಸಾಲವನ್ನು ತೀರಿಸಿ, ಮಿಕ್ಕದ್ದರಿಂದ ನೀನೂ ನಿನ್ನ ಮಕ್ಕಳೂ ಜೀವನ ಮಾಡಿರಿ, ಅಂದನು.

ಮತ್ತು ಆ ಕಾಲದಲ್ಲಿ ಎಲೀಷನು ಷೂನೇಮಿಗೆ ಹೋದನು. ಅಲ್ಲಿ ಘನವುಳ್ಳ ಒಬ್ಬ ಸ್ತ್ರೀಯು ಇದ್ದಳು; ಅವಳು ಅವನನ್ನು ರೊಟ್ಟಿ ತಿನ್ನ ಬಲವಂತ ಮಾಡಿದಳು. ಹಾಗೆ ಅವನು ಆ ಮಾರ್ಗವಾಗಿ ಹೋಗುವಾಗಲೆಲ್ಲಾ ಅಲ್ಲಿ ರೊಟ್ಟಿ ತಿನ್ನ ಹೋಗುತ್ತಿದ್ದನು. ಆದದರಿಂದ ಅವಳು ತನ್ನ ಗಂಡನಿಗೆ: ಇಗೋ, ಇವನು ದೇವರ ಪರಿಶುದ್ಧನಾದ ಮನುಷ್ಯನಾಗಿದ್ದಾನೆ; ನಾವು ಮಾಳಿಗೆಯ ಮೇಲೆ ಒಂದು ಚಿಕ್ಕ ಕೋಣೆಯನ್ನು ಕಟ್ಟಿಸಿ, ಅದರಲ್ಲಿ ಅವನಿಗೋಸ್ಕರ ಮಂಚವನ್ನೂ ಮೇಜನ್ನೂ ಕುರ್ಚಿಯನ್ನೂ ದೀಪಸ್ತಂಭವನ್ನೂ ಇಡುವ; ಆಗ ಲವನು ನಮ್ಮ ಬಳಿಗೆ ಬರುವಾಗ ಅಲ್ಲಿ ಪ್ರವೇಶಿಸುವನು, ಅಂದಳು. ಅವರು ಹೀಗೆ ಮಾಡಿದರು. ಹೀಗೆ ಎಲೀಷನು ತಿರಿಗಿ ಒಂದು ಸಾರಿ ಅಲ್ಲಿಗೆ ಬಂದಾಗ, ಅವನು ತನ್ನ ಸೇವಕನಾದ ಗೆಹಾಜಿಗೆ: ನೀನು ಹೋಗಿ, ಈ ಷೂನೇಮ್ಯಳಿಗೆ—ಇಗೋ, ನೀನು ನನಗೋಸ್ಕರ ಚಿಂತಿಸಿದಿ; ನಾನು ನಿನಗೆ ಮಾಡ ಬೇಕಾದದ್ದೇನು? ಎಂದು ಕೇಳು, ಅಂದನು. ಅದಕ್ಕೆ ಗೆಹಾಜಿ: ಅವಳು ಮಗುವಿಲ್ಲದೆ ಇದ್ದಾಳೆ, ಅಂದನು. ಆಗ ಎಲೀಷನು ಅವಳಿಗೆ: ಬರುವ ವರುಷದಲ್ಲಿ ಒಬ್ಬ ಮಗನನ್ನು ಅಪ್ಪಿ ಕೊಳ್ಳುವಿ, ಅಂದನು. ಅದಕ್ಕವಳು: ಹಾಗಲ್ಲ, ನನ್ನ ಸ್ವಾಮಿಯೇ, ನನಗೆ ಅಬದ್ಧ ಹೇಳ ಬೇಡ, ಅಂದಳು. ಆದರೆ ಎಲೀಷನು ಅವಳಿಗೆ ಹೇಳಿದ ಪ್ರಕಾರ ಒಬ್ಬ ಮಗನನ್ನು ಹೆತ್ತಳು. ಆ ಮಗುವು ಬೆಳೆದಾಗ, ಒಂದು ದಿವಸ ಬೆಳೆ ಕೊಯ್ಯುವವರ ಬಳಿಯಲ್ಲಿರುವ ತನ್ನ ತಂದೆಯ ಬಳಿಗೆ ಹೋದನು. ಆಗಲವನು ತನ್ನ ತಂದೆಗೆ: ನನ್ನ ತಲೆಯು, ನನ್ನ ತಲೆಯು, ಅಂದನು. ತಂದೆಯು ಅವನನ್ನು ಅವನ ತಾಯಿಯ ಬಳಿಗೆ ಕಳುಹಿಸಿದನು. ಅವನು ಮಧ್ಯಾಹ್ನದ ಪರಿಯಂತರ ಅವಳ ತೊಡೆಯ ಮೇಲೆ ಕುಳಿತಿದ್ದು, ಸತ್ತು ಹೋದನು. ಆಗಲ

ವಳು ಅವನನ್ನು ಎಲೀಷನ ಮಂಚದ ಮೇಲೆ ಮಲಗಿಸಿ, ಕರ್ಮೆಲು ಬೆಟ್ಟದಲ್ಲಿರುವ ದೇವರ ಮನುಷ್ಯನ ಬಳಿಗೆ ಹೋಗಿ, ಅವನಿಗೆ ತಿಳಿಸಿದಳು. ಆಗ ಎಲೀಷನು ಎದ್ದು, ಅವಳ ಸಂಗಡ ಬಂದನು. ಆಗಲವನು ತನ್ನ ಕೋಣೆಗೆ ಹೋಗಿ, ಬಾಗಲನ್ನು ಮುಚ್ಚಿ ಕೊಂಡು, ಯೆಹೋವನನ್ನು ಪ್ರಾರ್ಥಿಸಿದನು. ಮತ್ತು ಮಗುವಿನ ಮೇಲೆ ಮಲಗಿ ಕೊಂಡು, ತನ್ನ ಬಾಯಿಯನ್ನು ಅವನ ಬಾಯಿಯ ಮೇಲೆಯೂ ತನ್ನ ಕಣ್ಣುಗಳನ್ನು ಅವನ ಕಣ್ಣುಗಳ ಮೇಲೆಯೂ ತನ್ನ ಕೈಗಳನ್ನು ಅವನ ಕೈಗಳ ಮೇಲೆಯೂ ಇರಿಸಿದನು. ಹೀಗೆ ಮಗುವಿನ ಮಾಂಸವು ಬೆಚ್ಚಗೆ ಆಯಿತು. ಆಗ ಆ ಹುಡುಗನು ಏಳು ಸಾರಿ ಶೀತನು, ಮತ್ತು ಕಣ್ಣುಗಳನ್ನು ತೆರೆದನು. ಆಗಲವನು ಅವನ ತಾಯಿಯನ್ನು ಕರೆಸಿ, ಮಗನನ್ನು ತಿರಿಗಿ ಅವಳಿಗೆ ಕೊಟ್ಟನು.

೩) ಅರಾಮಿನ ಅರಸನ ಸೈನ್ಯಾಧಿಪತಿಯಾದ ನಾಮಾನನು ದೊಡ್ಡವನಾಗಿಯೂ ಘನವುಳ್ಳವನಾಗಿಯೂ ಇದ್ದನು. ಆದರೆ ಅವನು ಕುಷ್ಠರೋಗಿಯಾಗಿದ್ದನು. ಇಸ್ರಯೇಲ್ ದೇಶದಿಂದ ಅವನು ತಕ್ಕೊಂಡು ಬಂದ ಒಬ್ಬ ಹುಡುಗಿಯು ಅವನ ಹೆಂಡತಿಗೆ ಚಾಕ್ರಿಯವಳಾಗಿದ್ದಳು. ಇವಳು ತನ್ನ ಯಜಮಾನಳಿಗೆ: ಆಹ, ನನ್ನ ಸ್ವಾಮಿ ಸಮಾರ್ಯದಲ್ಲಿರುವ ಪ್ರವಾದಿಯ ಬಳಿಯ ಇದ್ದರೆ, ಅವನು ಇವನ ಕುಷ್ಠರೋಗ ತಪ್ಪಿಸಿ, ವಾಶಿ ಮಾಡುವನು, ಅಂದಳು. ಇದನ್ನು ನಾಮಾನನು ಅರಸನಿಗೆ ತಿಳಿಸಿದನು. ಆದದರಿಂದ ಅರಾಮಿನ ಅರಸನು: ನೀನು ಹೋಗಿ ಬಾ; ನಾನು ಇಸ್ರಯೇಲಿನ ಅರಸನಿಗೆ ಒಂದು ಪತ್ರಿಕೆಯನ್ನು ಕಳುಹಿಸುವೆನು ಎಂದು ಹೇಳಿ, ಪತ್ರಿಕೆಯನ್ನು ಬರೆದನು, ಏನಂದರೆ: ಈ ಪತ್ರಿಕೆ ನಿನಗೆ ಶೇರುವಾಗ, ಇಗೋ, ನನ್ನ ಸೇವಕನಾದ ನಾಮಾನನನ್ನು, ನೀನು ಅವನ ಕುಷ್ಠರೋಗ ತಪ್ಪಿಸಿ ಅವನನ್ನು ವಾಸಿ ಮಾಡುವ ಹಾಗೆ, ನಿನ್ನ ಬಳಿಗೆ ಕಳುಹಿಸಿದ್ದೇನೆ. ನಾಮಾನನು ಈ ಪತ್ರಿಕೆಯನ್ನು ಇಸ್ರಯೇಲಿನ ಅರಸನಿಗೆ ತಕ್ಕೊಂಡು ಹೋದನು. ಅವನು ಪತ್ರಿಕೆಯನ್ನು ಓದಿದ ಮೇಲೆ, ತನ್ನ ವ

ಸ್ತ್ರಗಳನ್ನು ಹರ ಕೊಂಡು: ಕೊಲ್ಲುವದಕ್ಕೂ ಬದುಕಿಸುವದಕ್ಕೂ ನಾನೇ ದೇವರೋ? ಅಂದನು. ಎಲೀಷನು ಇದನ್ನು ಕೇಳಿದಾಗ, ಇಸ್ರಯೇಲಿನಲ್ಲಿ ಪ್ರವಾದಿ ಉಂಟೆಂದು ಅವನು ತಿಳು ಕೊಳ್ಳುವ ಹಾಗೆ: ಅವನು ನನ್ನ ಬಳಿಗೆ ಬರಲಿ ಎಂದು, ಅರಸನಾದ ಯೋರಮನಿಗೆ ಹೇಳಿ ಕಳುಹಿಸಿದನು. ಹಾಗೆ ನಾಮಾನನು ತನ್ನ ಕುದುರೆಗಳ ಸಂಗಡಲೂ ರಥದ ಸಂಗಡಲೂ ಬಂದು, ಎಲೀಷನ ಮನೆಯ ಬಾಗಲ ಬಳಿಯಲ್ಲಿ ನಿಂತನು. ಆಗ ಎಲೀಷನು: ನೀನು ಹೋಗಿ, ಯೊರ್ದನಿನಲ್ಲಿ ಏಳು ಸಾರಿ ತೊಳಕೋ; ಆಗ ನಿನ್ನ ಮಾಂಸವು ನಿನಗೆ ಮಾರ್ಪಡುವದು ಎಂದು ಹೇಳಿ ಕಳುಹಿಸಿದನು. ಅದಕ್ಕೆ ನಾಮಾನನು ರೌದ್ರ ಗೊಂಡು, ಹೊರಟು ಹೋಗಿ, ಹೇಳಿದ್ದೇನಂದರೆ:—ಇಗೋ,



ಅವನು ನಿಶ್ಚಯವಾಗಿ ನನ್ನ ಬಳಿಗೆ ಹೊರಟು ಬಂದು, ತನ್ನ ದೇವರಾದ ಯೆಹೋವನ ಹೆಸರನ್ನು ಕರೆದು, ಆ ಸ್ಥಳದ ಮೇಲೆ ತನ್ನ ಕೈಯನ್ನು ಅಲ್ಲಾಡಿಸಿ, ಕುಷ್ಠರೋಗ ತಪ್ಪಿಸಿ, ವಾಶಿ ಮಾಡುವನೆಂದು ನಾನು ಹೇಳಿ ಕೊಂಡೆನು. ಇಸ್ರಯೇಲಿನ ಸಮಸ್ತ ನೀರುಗಳಿಗಿಂತ ದಮಸ್ಕದ ನದಿಗಳ ನೀರು ಉತ್ತಮವಲ್ಲವೋ? ಎಂದು ಹೇಳಿ, ಉರಿಯಿಂದ ಹೋದನು. ಆದರೆ ಅವನ ಸೇವಕರು ಅವನ ಬಳಿಗೆ ಬಂದು, ಅವನಿಗೆ: ನನ್ನ ತಂದೆಯೇ, ಪ್ರವಾದಿಯು ದೊಡ್ಡ ಕಾ

ರ್ಯವನ್ನು ನಿನಗೆ ಹೇಳಿದ್ದರೆ, ನೀನು ಮಾಡುವದಿಲ್ಲವೋ? ಅವನು ನಿನಗೆ ತೊಳಕೊಂಡು ಶುಚಿಯಾಗೆಂದು ಹೇಳಿದರೆ, ಅಡ್ಡಿ ಏನು? ಅಂದರು. ಆಗಲವನು ಹೋಗಿ, ಯೊರ್ದನಿನಲ್ಲಿ ಏಳು ಸಾರಿ ಮುಣುಗಿದನು; ಆಗ ಅವನ ಮಾಂಸವು ಚಿಕ್ಕ ಮಗುವಿನ ಮಾಂಸದ ಹಾಗೆ ಮಾರ್ಪಟ್ಟಿತು; ಅವನು ಶುಚಿಯಾದನು. ಮತ್ತು ಅವನು ದೇವರ ಮನುಷ್ಯನ ಬಳಿಗೆ ಬಂದು, ಅವನಿಗೆ: ಇಗೋ, ಇಸ್ರಯೇಲಿನಲ್ಲಿರುವ ದೇವರ ಹೊರ್ತು ಭೂಮಿಯಲ್ಲೆಲ್ಲಿಯೂ ಬೇರೆ ದೇವರು ಇಲ್ಲವೆಂದು ನಾನು ಬಲ್ಲೆನು; ಆದ ಕಾರಣ ನೀನು ದಯ ಮಾಡಿ, ನಿನ್ನ ಸೇವಕನಿಂದ ಆಶೀರ್ವಾದವನ್ನು ತಕ್ಕೊ, ಅಂದನು. ಆದರೆ ಎಲೀಷನು: ನಾನು ಯಾವನ ಮುಂದೆ ನಿಲ್ಲುತ್ತೇನೋ, ಆ ಯೆಹೋವನ ಜೀವದಾಣೆ, ನಾನು ತಕ್ಕೊಳ್ಳುವದಿಲ್ಲ, ಅಂದನು. ತಕ್ಕೊಳ್ಳಬೇಕೆಂದು ಬಲವಂತ ಮಾಡಿದರೂ: ನಾನು ಒಲ್ಲೆನು, ಅಂದನು. ಆಗ ನಾಮಾನನು ಹೇಳಿದ್ದೇನಂದರೆ:—ಹಾಗಾದರೆ ಎರಡು ಹೇಸರ ಕತ್ತೆಗಳು ಹೊರ ತಕ್ಕ ಮಣ್ಣು ನಿನ್ನ ಸೇವಕನಾದ ನನಗೆ ದಯ ಮಾಡಬೇಕಲ್ಲ? ಯಾಕಂದರೆ ನಿನ್ನ ಸೇವಕನು ಇನ್ನು ಮೇಲೆ ಯೆಹೋವನಿಗೆ ಹೊರ್ತಾಗಿ ಅನ್ಯ ದೇವರುಗಳಿಗೆ ಬಲಿಯನ್ನು ಅರ್ಪಿಸನು. ಎಲೀಷನು ಅವನಿಗೆ: ಸಮಾಧಾನದಿಂದ ಹೋಗು, ಅಂದನು. ಅವನು ಸ್ವಲ್ಪ ದೂರ ಹೋದ ಮೇಲೆ, ಎಲೀಷನ ಸೇವಕನಾಗಿರುವ ಗೆಹಾಜಿಯು ಅವನ ಹಿಂದೆ ಓಡಿ ಹೋಗಿ, ಅವನಿಗೆ: ಇಗೋ, ಪ್ರವಾದಿಗಳ ಮಕ್ಕಳಲ್ಲಿ ಇಬ್ಬರು ಈಗಲೇ ನನ್ನ ಬಳಿಗೆ ಬಂದಿದ್ದಾರೆ; ನೀನು ದಯ ಮಾಡಿ, ಅವರಿಗೆ ಒಂದು ತಲಾಂತು ಬೆಳ್ಳಿಯನ್ನೂ (ಶುಮಾರು ೪೦೦೦ ರೂಪಾಯಿ) ಎರಡು ದುಸ್ತು ಬಟ್ಟೆಗಳನ್ನೂ ಕೊಡೆಂದು ಹೇಳ, ನನ್ನ ಯಜಮಾನನು ನನ್ನನ್ನು ಕಳುಹಿಸಿದ್ದಾನೆ, ಅಂದನು. ನಾಮಾನನು ಅವನಿಗೆ: ಎರಡು ತಲಾಂತುಗಳನ್ನು ತಕ್ಕೊ ಎಂದು ಬಲವಂತ ಮಾಡಿದನು. ಆಗ ಗೆಹಾಜಿಯು ತಿರಿಗಿ ಬಂದಾಗ, ಎಲೀಷನು ಅವನಿಗೆ: ಗೆಹಾಜಿಯೇ, ಎಲ್ಲಿಂದ ಬಂದಿ? ಅಂದಾಗ, ಅ

ವನು: ನಿನ್ನ ಸೇವಕನು ಎಲ್ಲಿಗೂ ಹೋಗಲಿಲ್ಲ, ಅಂದನು. ಆಗ ಎಲೀಷನು ಅವನಿಗೆ: ಆ ಮನುಷ್ಯನು ನಿನಗೆ ಎದುರುಗೊಳ್ಳ ತನ್ನ ರಥದಿಂದ ಇಳಿದು ನಿನ್ನ ಬಳಿಗೆ ಬಂದಾಗ, ನನ್ನ ಹೃದಯವು ನಿನ್ನ ಸಂಗಡ ಹೋಗಲಿಲ್ಲವೋ? ರೊಕ್ಕವನ್ನೂ ವಸ್ತ್ರಗಳನ್ನೂ ಸಂಪಾದಿಸಿಕೊಳ್ಳುವದಕ್ಕೆ ಇದು ಸಮಯವೋ? ಆದದರಿಂದ ನಾಮಾನನ ಕುಷ್ಠರೋಗವು ನಿನಗೂ ನಿನ್ನ ಬೀಜಕ್ಕೂ ನಿತ್ಯವಾಗಿ ಹತ್ತುವದು, ಅಂದನು. ಆಗ ಗೆಹಾಜಿಯು ಮಂಜಿನ ಹಾಗೆಯೇ ಕುಷ್ಠರೋಗಿಯಾಗಿ, ಅವನ ಸಮುಖದಿಂದ ಹೊರಟು ಹೋದನು.

೪) ಅರಾಮಿನ ಅರಸನಾದ ಬೆನ್ಹದಾದನು ಇಸ್ರಯೇಲಿನ ಮೇಲೆ ಯುದ್ಧ ಮಾಡುತ್ತಾ ಇದ್ದಾಗ, ಎಲೀಷನು ಇಸ್ರಯೇಲಿನ ಅರಸನಿಗೆ ಬೆನ್ಹದಾದನು ತನ್ನ ಕೋಣೆಯಲ್ಲಿ ಯೋಚನೆ ಮಾಡಿ ಮಾತಾಡಿದ್ದೆಲ್ಲವನ್ನು ತಿಳಿಸಿದನು. ಹೀಗಿರಲಾಗಿ ಬೆನ್ಹದಾದನ ಹೃದಯವು ಕಳವಳಗೊಂಡು, ದೋತಾನಿನಲ್ಲಿರುವ ಎಲೀಷನನ್ನು ಹಿಡಿಯುವ ಹಾಗೆ ದೊಡ್ಡ ದಂಡನ್ನು ಕಳುಹಿಸಿದನು. ಅವರು ರಾತ್ರಿಯಲ್ಲಿ ಬಂದು, ಪಟ್ಣವನ್ನು ಸುತ್ತಿ ಕೊಂಡರು. ಎಲೀಷನ ಸೇವಕನು ಉದಯದಲ್ಲೆದ್ದು, ಹೊರಟಾಗ, ಇಗೋ, ಕುದುರೆಗಳೂ ರಥಗಳೂ ಉಳ್ಳ ಸೈನ್ಯವು ಪಟ್ಣವನ್ನು ಸುತ್ತಿ ಕೊಂಡಿತ್ತು. ಆಗಲವನು ತನ್ನ ಯಜಮಾನನಿಗೆ: ಅಯ್ಯೋ! ನನ್ನ ಸ್ವಾಮಿಯೇ, ಏನು ಮಾಡುವ? ಅಂದನು. ಆದರೆ ಎಲೀಷನು: ಭಯ ಪಡ ಬೇಡ; ಯಾಕಂದರೆ ಅವರ ಸಂಗಡ ಇರುವವರಿಗಿಂತ ನಮ್ಮ ಸಂಗಡ ಇರುವವರು ಹೆಚ್ಚಾಗಿದ್ದಾರೆ, ಅಂದನು. ಮತ್ತು ಅವನು: ಯೆಹೋವನೇ, ನೀನು ದಯ ಮಾಡಿ, ಅವನು ನೋಡುವ ಹಾಗೆ ಅವನ ಕಣ್ಣುಗಳನ್ನು ತೆರೆ ಎಂದು ಪ್ರಾರ್ಥಿಸಿದನು. ಯೆಹೋವನು ಆ ಪ್ರಾಯಸ್ಥನ ಕಣ್ಣುಗಳನ್ನು ತೆರೆದಾಗ, ಇಗೋ, ಎಲೀಷನ ಸುತ್ತಲು ಬೆಟ್ಟದಲ್ಲಿ ಬೆಂಕಿಯ ಕುದುರೆಗಳೂ ರಥಗಳೂ ತುಂಬಿದ್ದವು. ಮತ್ತು ಯೆಹೋವನು ಎಲೀಷನ ಮಾತಿನ ಹಾಗೆ ಅರಾಮಿಯರನ್ನು ಕುರುಡತನದಿಂದ ಹೊಡೆದನು. ಆಗ

ಎಲೀಷನು ಅವರಿಗೆ: ಇದು ಆ ಮಾರ್ಗವಲ್ಲ; ಇದು ಆ ಪಟ್ಟವಲ್ಲ; ನನ್ನ ಹಿಂದೆ ಬನ್ನಿರಿ; ನೀವು ಹುಡುಕುವ ಮನುಷ್ಯನ ಬಳಿಗೆ ನಿಮ್ಮನ್ನು ಬರ ಮಾಡುವೆನೆಂದು ಹೇಳಿ, ಅವರನ್ನು ಸಮಾರ್ಯಕ್ಕೆ ನಡಿಸಿದನು. ಅವರು ಅಲ್ಲಿಗೆ ಬಂದಾಗ, ಎಲೀಷನು: ಯೆಹೋವನೇ, ಇವರು ನೋಡುವ ಹಾಗೆ, ಇವರ ಕಣ್ಣುಗಳನ್ನು ತೆರೆ, ಅಂದನು. ಯೆಹೋವನು ಅವರ ಕಣ್ಣುಗಳನ್ನು ತೆರೆದನು. ಅವರು ನೋಡಿದಾಗ, ಇಗೋ, ಸಮಾರ್ಯದ ಮಧ್ಯದಲ್ಲಿ ಇದ್ದರು. ಇಸ್ರಯೇಲಿನ ಅರಸನು ಅವರನ್ನು ಕಂಡಾಗ, ಎಲೀಷನಿಗೆ: ನನ್ನ ತಂದೆಯೇ, ನಾನು ಹೊಡೆಯಲೋ? ಹೊಡೆಯಲೋ? ಎಂದು ಕೇಳಿದಾಗ, ಅವನು: ಹೊಡೆಯ ಬೇಡ; ನೀನು ನಿನ್ನ ಕತ್ತಿಯಿಂದಲೂ ನಿನ್ನ ಬಿಲ್ಲಿನಿಂದಲೂ ಶೆರೆಯಾಗಿ ತೆಗೆದು ಕೊಳ್ಳುವವರನ್ನು ಹೊಡಿಯುತ್ತೀಯೋ? ರೊಟ್ಟಿಯನ್ನೂ ನೀರನ್ನೂ ಅವರ ಮುಂದೆ ಇಡು; ಅವರು ಉಂಡು ಕುಡಿದ ತರುವಾಯ, ತಮ್ಮ ಯಜಮಾನನ ಬಳಿಗೆ ಹೋಗಲಿ, ಅಂದನು. ಬಾ. 84. III. 44. II. 52. III. 32.

ಕೀರ್ತ. 91, 11. 12. ಇಬ್ರಿ. 1, 14.

---

## ೪೭. ಯೇಹು, ಇಸ್ರಯೇಲಿನ ರಾಜ್ಯದ ವಿನಾಶವು.

(೨ ಅರಸು. ೯. ೧೦—೧೭.)

೧) ಪ್ರವಾದಿಯಾದ ಎಲೀಷನು ಪ್ರವಾದಿಗಳ ಮಕ್ಕಳಲ್ಲಿ ಒಬ್ಬನನ್ನು ರಾಮೋತಿಗೆ ಕಳುಹಿಸಿ, ಇಸ್ರಯೇಲಿನ ಅರಸನಾದ ಯೋರಮನ ಸೈನ್ಯಾಧಿಪತಿಯಾಗಿರುವ ಯೇಹುವನ್ನು ಅರಸನಾಗಿರ ಅಭಿಷೇಕಿಸಿ, ಅವನಿಗೆ: ಯೆಹೋವನು ಹೇಳುವದೇನಂದರೆ— ಇಸ್ರಯೇಲಿನ ಮೇಲೆ ಅರಸನಾಗಿರ ನಿನ್ನನ್ನು ಅಭಿಷೇಕಿಸಿದ್ಧೇನೆ. ನಾನು ಪ್ರವಾದಿಗಳಾದ ನನ್ನ ಸೇವಕರ ರಕ್ತಕ್ಕೋಸ್ಕರ ಇಜೆಬೇಲಳಿಗೆ ಮುಯ್ಯಿಗೆ ಮುಯ್ಯಿ ಕೊಡುವ ಹಾಗೆ, ನೀನು ನಿನ್ನ ಯಜಮಾ

ಸನಾದ ಅಹಾಬನ ಮನೆಯನ್ನು ಸಂಹರಿಸ ಬೇಕು, ಅಂದನು. ಆಗ ಯೇಹುವಿನ ಕಡೆಯವರು ತುತೂರಿಗಳನ್ನು ಊದಿ, ಯೇಹುವು ಅರಸನಾಗಿದ್ದಾನೆಂದು ಹೇಳಿದರು. ಮತ್ತು ಯೇಹುವು ರಥವನ್ನು ಏರಿ, ಇಜ್ರೇಲಿಗೆ ಹೋದನು; ಯಾಕಂದರೆ ಯೋರಮನು ಅಲ್ಲಿ ಬಿದ್ದಿದ್ದನು. ಆದರೆ ಅರಸನಾದ ಯೋರಮನು ಅವನು ಬರುವದನ್ನು ಕೇಳಿ, ತನ್ನ ರಥದಲ್ಲಿ ಏರಿ, ಯೇಹುವಿಗೆ ಎದುರಾಗಿ ಹೋಗಿ, ಅವನಿಗೆ: ಯೇಹುವೇ, ಸಮಾಧಾನವೋ? ಅಂದನು. ಅದಕ್ಕವನು: ನಿನ್ನ ತಾಯಿಯಾದ ಇಜೆಬೇಲಳ ಜಾರತ್ವಗಳೂ ಅವಳ ಮಾಟಗಳೂ ಅಧಿಕವಾಗಿರುವಾಗ, ಸಮಾಧಾನವೇನು? ಅಂದನು. ಆಗ ಯೋರಮನು ಓಡಿ ಹೋದನು. ಆದರೆ ಯೇಹುವು ಬಿಲ್ಲಿನಿಂದ ಯೋರಮನನ್ನು ಹೊಡೆದು, ಕೊಂದು ಹಾಕಿದನು. ಆ ಮೇಲೆ ಅವನು ಇಜ್ರೇಲಿಗೆ ಹೋದನು. ಅಲ್ಲಿಗೆ ಬಂದಾಗ, ಇಜೆಬೇಲಳು ತನ್ನ ಕಣ್ಣುಗಳಿಗೆ ಕಾಡಿಗೆ ಹಚ್ಚಿ ಕೊಂಡು, ತನ್ನ ತಲೆಯನ್ನು ಶೃಂಗರಿಸಿ ಕೊಂಡು, ಕಿಟಕಿಯಿಂದ ಹಣಕಿ ನೋಡಿದಳು. ಆಗ ಯೇಹುವು ಇಬ್ಬರು ನಪುಂಸಕರಿಗೆ: ಅವಳನ್ನು ಕೆಳಗೆ ತಳ್ಳಿ ಬಿಡಿರಿ, ಅಂದನು. ಅವರು ಅವಳನ್ನು ಕೆಳಗೆ ತಳ್ಳಿ ಬಿಟ್ಟದರಿಂದ, ಅವಳ ರಕ್ತವು ಗೋಡೆಯ ಮೇಲೆಯೂ ಕುದುರೆಗಳ ಮೇಲೆಯೂ ಚೆಲ್ಲಿ ಹೋಯಿತು. ನಾಯಿಗಳು ಬಂದು, ಅವಳ ಮಾಂಸವನ್ನು ತಿಂದು ಬಿಟ್ಟವು. ಅದರ ಮೇಲೆ ಯೇಹುವು ಅಹಾಬನ ಸಂತತಿ ಎಲ್ಲಾ ಸಂಹರಿಸಿ ಬಿಟ್ಟನು. ತರುವಾಯ ಯೇಹುವು ಸಮಾರ್ಯಕ್ಕೆ ಹೋಗಿ, ಅಲ್ಲಿಯ ಜನರೆಲ್ಲರನ್ನು ಕೂಡಿಸಿ, ಅವರಿಗೆ: ಅಹಾಬನು ಅಲ್ಪವಾಗಿ ಬಾಳನನ್ನು ಸೇವಿಸಿದನು; ಆದರೆ ಯೇಹುವು ಅವನನ್ನು ಬಹಳವಾಗಿ ಸೇವಿಸುವನು. ಆದದರಿಂದ ಬಾಳನ ಸಮಸ್ತ ಪ್ರವಾದಿಗಳನ್ನೂ ಸೇವಕರನ್ನೂ ನನ್ನ ಬಳಿಗೆ ಕರೆಯಿರಿ, ಅಂದನು. ಮತ್ತು ಅವನು ಇವರಿಗೆ: ಬಾಳನಿಗೋಸ್ಕರ ಘನಸಂಘವನ್ನು ಪರಿಶುದ್ಧ ಮಾಡಿರಿ, ಅಂದನು. ಅವರು ಬಾಳನ ಮನೆಯಲ್ಲಿ ಪ್ರವೇಶಿಸಿ, ಬಲಿಗಳನ್ನು ಅರ್ಪಿಸುವಾಗ,

ಅವರೆಲ್ಲರನ್ನು ಕತ್ತಿಯಿಂದ ಹೊಡೆದನು. ಬಾಳನ ಮನೆಯಿಂದ ವಿಗ್ರಹಗಳನ್ನು ತಂದು, ಅವುಗಳನ್ನು ಸುಟ್ಟು ಬಿಟ್ಟು, ಆ ಮನೆಯನ್ನು ತಿಪ್ಪೆಯಾಗ ಮಾಡಿದನು. ಆದರೆ ಬೆತೇಲಿನಲ್ಲಿಯೂ ಡಾನಿನಲ್ಲಿಯೂ ಇರುವ ಭಂಗಾರದ ಹೋರಿಗಳಿಂದ ಇಸ್ರಯೇಲನ್ನು ಪಾಪ ಮಾಡ ಪ್ರೇರೇಪಿಸಿದ ಯರೊಬಾಮನ ಪಾಪಗಳನ್ನು ಯೇಹುವು ತೊರೆದು ಬಿಡಲಿಲ್ಲ.

೨) ಆದರೆ ಇಸ್ರಯೇಲ್ ಮಕ್ಕಳು ತಮ್ಮ ದೇವರಾದ ಯೆಹೋವನಿಗೆ ವಿರೋಧವಾಗಿ ಪಾಪ ಮಾಡಿ, ಅನ್ಯ ಜನಾಂಗಗಳ ಕಟ್ಟಳೆಗಳಲ್ಲಿ ನಡೆದು, ಎಲ್ಲಾ ಗುಡ್ಡಗಳಲ್ಲಿ ತೋಪುಗಳನ್ನು ಹಾಕಿ, ಎಲ್ಲಾ ಮರಗಳ ಕೆಳಗೂ ತಮಗೆ ವಿಗ್ರಹಾದಿಗಳನ್ನು ನಿಲ್ಲಿಸಿ, ಅಲ್ಲಿ ಧೂಪವನ್ನು ಸುಟ್ಟು, ಯೆಹೋವನನ್ನು ಕರೆಕರೆ ಪಡಿಸುವ ಹಾಗೆ, ಕೆಟ್ಟ ಕಾರ್ಯಗಳನ್ನು ಮಾಡಿದರು. ಮತ್ತು ಯೆಹೋವನು ಪ್ರವಾದಿಗಳ ಮುಖಾಂತರ ಅವರನ್ನು ಗದರಿಸಿ, ಅವರಿಗೆ: ನೀವು ನಿಮ್ಮ ದುರ್ಮಾರ್ಗಗಳಿಂದ ತಿರುಗಿ, ನಾನು ನಿಮ್ಮ ಪಿತೃಗಳಿಗೆ ಆಜ್ಞಾಪಿಸಿದ ನ್ಯಾಯ ಪ್ರಮಾಣದ ಪ್ರಕಾರ ನನ್ನ ಆಜ್ಞೆಗಳನ್ನು ಕೈಕೊಳ್ಳಿರಿ ಎಂದು ಹೇಳಿದನು. ಆದರೆ ಅವರು ವಿಧೇಯರಾಗದೆ, ತಮ್ಮ ಕುತ್ತಿಗೆಯನ್ನು ಕಠಿಣ ಪಡಿಸಿ, ಯೆಹೋವನ ಒಡಂಬಡಿಕೆಯನ್ನು ಅಲಕ್ಷ್ಯ ಮಾಡಿ, ಆಕಾಶದ ಸೈನ್ಯಕ್ಕೆಲ್ಲಾ ಅಡ್ಡ ಬಿದ್ದು, ಬಾಳನನ್ನು ಸೇವಿಸಿ, ತಮ್ಮ ಕುಮಾರರನ್ನೂ ಕುಮಾರ್ತೆಗಳನ್ನೂ ಬೆಂಕಿ ದಾಟ ಮಾಡಿದರು. ಮತ್ತು ಕಣಿಗಳನ್ನೂ ಶಕುನಗಳನ್ನೂ ಬಳಿಸಿ, ಯೆಹೋವನ ಸಮುಖದಲ್ಲಿ ಕೆಟ್ಟದ್ದನ್ನು ಮಾಡಲಿಕ್ಕೆ ತಮ್ಮನ್ನು ಮಾರಿ ಬಿಟ್ಟರು. ಆದದರಿಂದ ಯೆಹೋವನು ಇಸ್ರಯೇಲಿನ ಮೇಲೆ ಬಹು ಕೋಪ ಮಾಡಿ, ಪ್ರವಾದಿಗಳ ಮುಖಾಂತರ ಹೇಳಿದ ಪ್ರಕಾರ ಅವರನ್ನು ತನ್ನ ಸಮುಖದಿಂದ ತೆಗೆದು ಹಾಕಿದನು.

೩) ಇಸ್ರಯೇಲಿನ ಕಡೇ ಅರಸನಾದ ಹೊಷೇಯನು ಆಳಿದ ಒಂಭತ್ತನೇ ವರುಷದಲ್ಲಿ (ಕ್ರಿಸ್ತನ ಮುಂಚೆ ೭೨೧ನೇ ವರುಷದಲ್ಲಿ)

ಅಷೂರ ದೇಶದ ಅರಸನಾದ ಶಲ್ಮನೇಸರನು ಬಂದು, ಹೊಷೇಯ ನನ್ನು ಕಟ್ಟಿಸಿ, ಶೆರೆಮನೆಯಲ್ಲಿ ಬಂಧಿಸಿದನು. ಮತ್ತು ಇಸ್ರಯೇಲ್ ಜನರನ್ನು ಅಷೂರ ದೇಶಕ್ಕೆ ವೈದು, ಬಾಬೆಲಿನಿಂದಲೂ ಅಲ್ಲಿಯ ಬೇರೆ ಬೇರೆ ಶೀಮೆಗಳಿಂದಲೂ ಜನರನ್ನು ಬರ ಮಾಡಿ, ಸಮಾರ್ಯದ ಪಟ್ಟಗಳಲ್ಲಿ ಇರಿಸಿದನು. ಆದರೆ ಅಲ್ಲಿ ಅವರು ನಿವಾಸಿಸ ಆರಂಭಿಸಿ ದಾಗ, ಅವರು ಯೆಹೋವನಿಗೆ ಭಯ ಪಡದ್ದರಿಂದ, ಅವನು ಸಿಂಹ ಗಳನ್ನು ಅವರ ಮಧ್ಯದಲ್ಲಿ ಕಳುಹಿಸಿದನು; ಅವು ಅವರಲ್ಲಿ ಕೆಲವ ರನ್ನು ಕೊಂದು ಹಾಕಿದವು. ಆದ ಕಾರಣ ಅಷೂರದ ಅರಸನು ಸಮಾರ್ಯದಿಂದ ಅಷೂರಕ್ಕೆ ತಕ್ಕೊಂಡು ಬಂದ ಯಾಜಕರಲ್ಲಿ ಒ ಬ್ಬನನ್ನು ಹಿಂದೆ ಕಳುಹಿಸಿದನು. ಇವನು ಅವರಿಗೆ ಯೆಹೋವನಿಗೆ ಭಯ ಪಡ ತಕ್ಕ ವಿಧವನ್ನು ಬೋಧಿಸಿದನು. ಹೀಗೆ ಅವರು ಯೆ ಹೋವನಿಗೆ ಭಯ ಪಟ್ಟು, ತಮ್ಮ ಜನಾಂಗಗಳ ನ್ಯಾಯದ ಪ್ರಕಾರ ತಮ್ಮ ದೇವರುಗಳನ್ನು ಕೂಡ ಸೇವಿಸಿದರು. ಇತ್ತಲಾಗಿ ಇವರಿಗೆ ಸಮಾರ್ಯರು ಎಂದು ಹೆಸರಾಯಿತು.

ಬಾ. 138. 96.

---

## ೪೭. ಪ್ರವಾದಿಯಾದ ಯೋನನು.

(ಯೋನ. ೧ — ೪.)

೧) ಯೆಹೋವನ ವಾಕ್ಯವು ಪ್ರವಾದಿಯಾದ ಯೋನನಿಗೆ ಉಂ ಟಾಯಿತು. ಹ್ಯಾಗಂದರೆ:—ಎದ್ದು, ಆ ದೊಡ್ಡ ಪಟ್ಟವಾದ ನಿನೆವೆಗೆ ಹೋಗಿ, ಅದಕ್ಕೆ ವಿರೋಧವಾಗಿ ಸಾರು; ಯಾಕಂದರೆ ಅದರ ಕೆ ಟ್ಟತನವು ನನ್ನ ಮುಂದೆ ಏರಿ ಬಂತು. ಆದರೆ ಯೋನನು ಯೆಹೋ ವನ ಸಮುಖದಿಂದ ತಾರ್ಷಿಷಿಗೆ ಓಡಿ ಹೋಗುವದಕ್ಕೆ ಒಂದು ಹ ಡಗವನ್ನು ಹುಡುಕಿ, ಅದರ ಬಾಡಿಗೆ ಕೊಟ್ಟು, ಅದನ್ನು ಏರಿದನು. ಆದರೆ ಯೆಹೋವನು ದೊಡ್ಡ ಬಿರುಘಾಳಿಯನ್ನು ಸಮುದ್ರದ ಮೇಲೆ

ಕಳುಹಿಸಿದನು. ಆದದರಿಂದ ಹಡಗವು ಒಡಿಯಲಿಕ್ಕಿತ್ತು. ಆಗ ಹಡಗದವರು ಭಯ ಪಟ್ಟು, ಒಬ್ಬೊಬ್ಬನು ತನ್ನ ತನ್ನ ದೇವರಿಗೆ ಕೂಗಿ, ಹಡಗವನ್ನು ಹೌರ ಮಾಡುವ ಹಾಗೆ ಅದರಲ್ಲಿದ್ದ ಸಾಮಾನುಗಳನ್ನು ಸಮುದ್ರದಲ್ಲಿ ಹಾಕಿ ಬಿಟ್ಟರು; ಆದರೆ ಯೋನನು ಹಡಗದೊಳಗೆ ಇಳಿದು ಹೋಗಿ, ಮಲಗಿ ಕೊಂಡು, ಗಾಢನಿದ್ರೆಯಲ್ಲಿದ್ದನು. ಆಗ ಹಡಗದ ಯಜಮಾನನು ಅವನ ಬಳಿಗೆ ಬಂದು: ಗಾಢನಿದ್ರೆ ಮಾಡುವವನೇ, ನಿನಗೇನಾಯಿತು? ಎದ್ದು, ನಿನ್ನ ದೇವರಿಗೆ ಕೂಗು, ಅಂದನು. ಇದಲ್ಲದೆ ಅವರು ಒಬ್ಬರಿಗೊಬ್ಬರು: ಬನ್ನಿ, ಚೀಟುಗಳನ್ನು ಹಾಕೋಣ; ಯಾವನ ನಿಮಿತ್ತ ಈ ಕೇಡು ನಮಗೆ ಬಂತೋ ತಿಳಿಯೋಣ, ಎಂದು ಹೇಳಿ ಕೊಂಡರು. ಅವರು ಚೀಟುಗಳನ್ನು ಹಾಕಿದಾಗ, ಯೋನನ ಮೇಲೆ ಚೀಟು ಬಿತ್ತು. ಆಗಲವರು ಅವನಿಗೆ: ನೀನು ಎಲ್ಲಿಂದ ಬಂದಿ? ನಿನ್ನ ದೇಶ ಯಾವದು? ನಿನ್ನ ಕೆಲಸವೇನು? ನಮಗೆ ತಿಳಿಸಪ್ಪಾ, ಅಂದರು. ಅವನವರಿಗೆ: ನಾನು ಇಬ್ರೀಯನು ಸಮುದ್ರವನ್ನೂ ಒಣಗಿದ ಭೂಮಿಯನ್ನೂ ಉಂಟು ಮಾಡಿದ ಪರಲೋಕದ ದೇವರಾದ ಯೆಹೋವನಿಗೆ ಭಯ ಪಡುವವನಾಗಿದ್ದೇನೆ; ಅವನ ಸಮುಖದಿಂದ ಓಡಿ ಹೋಗಿದ್ದೇನೆಂದು ಹೇಳಿದನು. ಆಗಲವರು: ಇದನ್ನು ಯಾಕೆ ಮಾಡಿದ್ದೀ? ಸಮುದ್ರವು ನಮಗೆ ಶಾಂತವಾಗುವ ಹಾಗೆ ನಿನಗೆ ಏನು ಮಾಡ ಬೇಕು? ಅಂದರು. ಅವನವರಿಗೆ: ನನ್ನನ್ನು ಎತ್ತಿ, ಸಮುದ್ರದಲ್ಲಿ ಹಾಕಿರಿ; ಆಗ ಸಮುದ್ರವು ನಿಮಗೆ ಶಾಂತವಾಗುವದು; ಯಾಕಂದರೆ ನನ್ನ ನಿಮಿತ್ತ ಈ ದೊಡ್ಡ ಬಿರುಘಾಳಿ ನಿಮ್ಮ ಮೇಲೆ ಬಂತೆಂದು ಬಲ್ಲೆನು, ಅಂದನು. ಆ ಮನುಷ್ಯರು ಧಡಕ್ಕೆ ತಿರುಗಿ ಕೊಳ್ಳುವದಕ್ಕೆ ಬಲವಾಗಿ ಹುಟ್ಟು ಹಾಕಿದರು. ಆದರೆ ಅವರಿಂದಲಾಗದೆ ಹೋಯಿತು. ಆದದರಿಂದ ಅವರು ಯೋನನನ್ನು ಸಮುದ್ರದಲ್ಲಿ ಹಾಕಿದರು. ಆಗ ಸಮುದ್ರವು ತನ್ನ ಉಗ್ರವನ್ನು ನಿಲ್ಲಿಸಿ ಬಿಟ್ಟಿತು. ಮತ್ತು ಆ ಮನುಷ್ಯರು ಯೆಹೋವನಿಗೆ ಬಹಳವಾಗಿ ಭಯ ಪಟ್ಟು, ಅವನಿಗೆ ಬಲಿಯರ್ಪಿಸಿ,

ಹರಿಕೆಗಳನ್ನು ಮಾಡಿ ಕೊಂಡರು. ಆದರೆ ಯೆಹೋವನು ಯೋನನನ್ನು ನುಂಗುವ ಹಾಗೆ, ಒಂದು ದೊಡ್ಡ ಮಿಾನನ್ನು ನೇಮಿಸಿದ್ದನು. ಹಾಗೆ ಯೋನನು ಆ ಮಿಾನಿನ ಹೊಟ್ಟೆಯಲ್ಲಿ ೩ ದಿವಸವೂ ೩ ರಾತ್ರಿಯೂ ಇದ್ದನು. ಅಲ್ಲಿ ತನ್ನ ದೇವರಾದ ಯೆಹೋವನಿಗೆ ಪ್ರಾರ್ಥನೆ ಮಾಡಿದನು. ಆಗ ಯೆಹೋವನು ಮಿಾನಿಗೆ ಹೇಳಿದದರಿಂದ ಅದು ಯೋನನನ್ನು ಒಣಭೂಮಿಯ ಮೇಲೆ ಕಾರಿ ಬಿಟ್ಟಿತು. ಮ



ತ್ತು ಯೆಹೋವನ ವಾಕ್ಯವು ಎರಡನೇ ಸಾರಿ ಯೋನನಿಗೆ ಉಂಟಾಯಿತು. ಏನಂದರೆ: ಎದ್ದು, ಆ ದೊಡ್ಡ ಪಟ್ಣವಾದ ನಿನೆವೆಗೆ ಹೋಗಿ, ನಾನು ನಿನಗೆ ಹೇಳುವ ಸಾರುವಿಕೆಯನ್ನು ಅದಕ್ಕೆ ಸಾರಿ ಹೇಳು; ಹಾಗೆ ಯೋನನು ನಿನೆವೆಗೆ ಹೋದನು. ಅದು ೩ ದಿವಸದ ಪ್ರಯಾಣವಾದ ಮಹಾ ದೊಡ್ಡ ಪಟ್ಣವಾಗಿತ್ತು. ಆಗ ಯೋನನು ಒಂದು ದಿವಸದ ಪ್ರಯಾಣ ಪಟ್ಣದಲ್ಲಿ ಪ್ರವೇಶಿಸಲಾರಂಭಿಸಿ: ಇನ್ನು ೪೦ ದಿವಸಗಳಾದ ಮೇಲೆ ನಿನೆವೆ ಹಾಳಾಗುವದೆಂದು ಸಾರಿ ಹೇಳಿದನು. ನಿನೆವೆಯ ಮನುಷ್ಯರು ಇದನ್ನು ಕೇಳಿ, ದೇವರನ್ನು ನಂಬಿ, ಉಪವಾಸವನ್ನು ಸಾರಿ, ದೊಡ್ಡವನು ಮೊದಲ್ಗೊಂಡು ಚಿಕ್ಕವನ ಪರಿಯಂತರ ಗೋಣಿಯನ್ನು ಉಟ್ಟು ಕೊಂಡರು. ಅರಸನು ತನ್ನ ಸಿಂಹಾಸನದಿಂದ ಎದ್ದು, ತನ್ನ ನಿಲುವಂಗಿಯನ್ನು ತೆಗೆದಿಟ್ಟು, ಗೋಣಿಯನ್ನು ಉಟ್ಟು ಕೊಂಡು, ಬೂದಿಯಲ್ಲಿ ಕೂತು ಕೊಂಡನು.

ಮತ್ತು ನಿನೆವೆಯಲ್ಲಿ ಸಾರಿ ಹೇಳಿಸಿದ್ದೇನಂದರೆ:—ಮನುಷ್ಯರಾಗಲಿ ಪಶುಗಳಾಗಲಿ ಏನಾದರೂ ರುಚಿ ನೋಡದೆ, ಗೋಣಿ ಹಾಕಿ ಕೊಂಡು, ಬಲವಾಗಿ ದೇವರಿಗೆ ಮೊರೆ ಇಡಲಿ; ಒಬ್ಬೊಬ್ಬನು ತನ್ನ ದುರ್ಮಾರ್ಗವನ್ನೂ ಬಲಾತ್ಕಾರವನ್ನೂ ಬಿಟ್ಟು, ತಿರುಗಲಿ; ಆಗ ದೇವರು ಪಶ್ಚಾತ್ತಾಪ ಪಟ್ಟು, ತನ್ನ ಕೋಪದ ಉರಿಯನ್ನು ಬಿಟ್ಟಾನೇನೋ, ಯಾರು ಬಲ್ಲರು? ಅಂದರು. ಆಗ ದೇವರು ಅವರು ತಿರುಗಿದರೆಂದು ನೋಡಿ, ಅವರಿಗೆ ಮಾಡುತ್ತೇನೆಂದು ಹೇಳಿದ ಕೇಡಿನ ವಿಷಯ ಪಶ್ಚಾತ್ತಾಪ ಪಟ್ಟು, ಅದನ್ನು ಮಾಡಲಿಲ್ಲ.

೨) ಆದರೆ ಅದು ಯೋನನ ಮನಸ್ಸಿಗೆ ಎಷ್ಟು ಮಾತ್ರವೂ ಸರಿಯಾದದ್ದಲ್ಲ; ಅವನಿಗೆ ಕೋಪ ಬಂತು. ಆದ ಕಾರಣ ಅವನು ಯೆಹೋವನಿಗೆ ಪ್ರಾರ್ಥನೆ ಮಾಡಿ, ಹೇಳಿದ್ದೇನಂದರೆ:—ಅಯ್ಯೋ ಯೆಹೋವನೇ, ನಾನು ನನ್ನ ದೇಶದಲ್ಲಿ ಇದ್ದಾಗ, ಇದನ್ನೇ ಹೇಳಲಿಲ್ಲವೋ? ಅದು ಕಾರಣ ನಾನು ತಾರ್ಷಿಷಿಗೆ ಓಡಿ ಹೋಗುವದಕ್ಕೆ ಮುಂಕೊಂಡೆನು; ಯಾಕಂದರೆ ನೀನು ಕರುಣೆಯೂ ಕನಿಕರವೂ ದೀರ್ಘಶಾಂತಿಯೂ ಬಹಳ ಕೃಪೆಯೂ ಉಳ್ಳ ದೇವರೆಂದೂ ಕೇಡಿನ ವಿಷಯ ಪಶ್ಚಾತ್ತಾಪ ಪಡುವವನೆಂದೂ ನನಗೆ ತಿಳಿಯಿತು. ಆಗ ಯೋನನು ಪಟ್ಣವನ್ನು ಬಿಟ್ಟು, ಅದರ ಮೂಡಣ ಕಡೆಯಲ್ಲಿ ಕೂತು ಕೊಂಡನು. ಮತ್ತು ದೇವರಾದ ಯೆಹೋವನು ಒಂದು ಔಡ್ಲ ಗಿಡವನ್ನು ಬೆಳಿಸಿದನು. ಅದು ಯೋನನ ತಲೆಯ ಮೇಲೆ ಏರಿ ಬಂದು, ನೆರಳು ಕೊಟ್ಟು, ಅವನ ದುಃಖದಿಂದ ಅವನನ್ನು ಬಿಡಿಸಿತು. ಆದದರಿಂದ ಯೋನನು ಆ ಔಡ್ಲ ಗಿಡವನ್ನು ಕುರಿತು ಬಹಳ ಸಂತೋಷ ಪಟ್ಟನು. ಆದರೆ ಮಾರಣೆ ದಿವಸದಲ್ಲಿ ಉದಯವಾದಾಗ, ದೇವರು ಒಂದು ಹುಳವನ್ನು ಕಳುಹಿಸಿದನು. ಅದು ಆ ಔಡ್ಲ ಗಿಡವನ್ನು, ಅದು ಒಣಗುವ ಹಾಗೆ, ಬಡಿಯಿತು. ಮತ್ತು ಸೂರ್ಯನು ಮೂಡಿದಾಗ ದೇವರು ಶೆಕೆಯುಳ್ಳ ಮೂಡಣ ಘಾಳಿಯನ್ನು ಕಳುಹಿಸಿದನು. ಆಗ ಬಿಸಿಲು ಯೋನನ ತಲೆಯ ಮೇಲೆ

ಬಡಿದದರಿಂದ, ಅವನು ಮೈಮರತು, ಮರಣವನ್ನು ಇಚ್ಛೈಸಿ: ನಾನು ಬದುಕುವದಕ್ಕಿಂತ ಸಾಯುವದು ಒಳ್ಳೇದು, ಅಂದನು. ಆಗ ದೇವರು ಅವನಿಗೆ: ನೀನು ಔಡ್ಲ ಗಿಡವನ್ನು ಕುರಿತು ಕೋಪ ಮಾಡುವದು ಒಳ್ಳೇದೋ? ಅಂದನು. ಅವನು: ನಾನು ಸಾಯುವ ತನಕ ಕೋಪ ಮಾಡುವದು ಒಳ್ಳೇದೇ, ಅಂದನು. ಆಗ ಯೆಹೋವನು ಹೇಳಿದ್ದೇನಂದರೆ:—ನೀನು ಕಷ್ಟ ಮಾಡದಂಥ ಬೆಳಿಸದಂಥ ಒಂದು ರಾತ್ರಿಯಲ್ಲಿ ಹುಟ್ಟಿ, ಒಂದು ರಾತ್ರಿಯಲ್ಲಿ ನಾಶನವಾದಂಥ ಆ ಔಡ್ಲ ಗಿಡದ ಮೇಲೆ ಕನಿಕರ ಪಟ್ಟೆಯಲ್ಲಾ? ಹಾಗಾದರೆ ಎಡ ಬಲ ಕೈಗಳನ್ನು ತಿಳಿಯದವರಾದ ಲಕ್ಷಾ ಇಪ್ಪತ್ತು ಸಾವಿರಕ್ಕಿಂತ ಹೆಚ್ಚಾದ ಜನರು ಬಹಳ ದನಗಳು ಸಹ ಇರುವ ಆ ದೊಡ್ಡ ಪಟ್ಣವಾದ ನಿನೆವೆಯನ್ನು ನಾನು ಕನಿಕರಿಸ ಬಾರದೆ?

ಬಾ. 20. II. 77. III. 22.

---

## ೪೮. ಯೆಹೂದ ರಾಜ್ಯದ ಕಡೇ ಅರಸುಗಳು, ಅಹಾಜನು, ಹೆಜ್ಕೀಯನು, ಮನಾಸೆಯು, ಯೊಷೀಯನು.

(ಯೆಶಾಯನು. ೩೬. ೩೯. — ೨ ದಿನಚರ್ಯ. ೨೮ — ೩೬.)

೧) ಅಷೂರದ ಅರಸನಾದ ಶಲ್ಮನೇಸರನು ಇಸ್ರಯೇಲಿನ ರಾಜ್ಯವನ್ನು ವಿನಾಶ ಮಾಡುವ ಸಮಯದಲ್ಲಿ ಯೆಹೂದದ ರಾಜ್ಯವನ್ನು ಹೆಜ್ಕೀಯನು ಆಳಿದನು. ಅವನ ತಂದೆಯಾದ ಅಹಾಜನು ಯೆಹೋವನ ಸಮುಖದಲ್ಲಿ ನೆಟ್ಟನೆಯಾದದ್ದನ್ನು ಮಾಡದೆ, ಅನ್ಯ ಜನಾಂಗಗಳ ಅಸಹ್ಯವಾದವುಗಳ ಪ್ರಕಾರ ನಡೆದು, ತನ್ನ ಮಗನನ್ನು ಬೆಂಕಿ ತುಳಿಯ ಮಾಡಿ, ಮೇಡುಗಳ ಮೇಲೆಯೂ ಬೆಟ್ಟಗಳ ಮೇಲೆಯೂ ಮರಗಳ ಕೆಳಗೂ ಬಲಿಗಳನ್ನೂ ಧೂಪವನ್ನೂ ಅರ್ಪಿಸಿ, ಯೆಹೋವನ ಮನೆಯ ಬಾಗಲುಗಳನ್ನು ಮುಚ್ಚಿದನು. ಆದರೆ ಹೆಜ್ಕೀಯನು

ತನ್ನ ಪಿತೃವಾದ ದಾವೀದನು ಮಾಡಿದ ಎಲ್ಲಾದರ ಪ್ರಕಾರ, ಯೆಹೋವನ ಸಮುಖದಲ್ಲಿ ನೆಟ್ಟನೆಯಾದದ್ದನ್ನು ಮಾಡಿದನು. ಅವನು ಯೆಹೋವನ ಮನೆಯ ಬಾಗಲುಗಳನ್ನು ತೆರೆದು, ಯಾಜಕರನ್ನೂ ಲೇವಿಯರನ್ನೂ ಕರೇ ಕಳುಹಿಸಿ, ಅವರಿಗೆ: ನೀವು ನಿಮ್ಮನ್ನು ಪರಿಶುದ್ಧ ಮಾಡಿ ಕೊಂಡು, ಯೆಹೋವನ ಮನೆಯನ್ನು ಶುದ್ಧ ಮಾಡಿರಿ ಎಂದು ಆಜ್ಞಾಪಿಸಿದನು. ತರುವಾಯ ಅರಸನು ಸಮಸ್ತ ಇಸ್ರಯೇಲಿಗೂ ಯೆಹೂದಕ್ಕೂ ಹೇಳಿ ಕಳುಹಿಸಿದ್ದೇನಂದರೆ:—ಇಸ್ರಯೇಲಿನ ಮಕ್ಕಳೇ, ಯೆಹೋವನ ಕಡೆಗೆ ತಿರುಗಿರಿ; ನಿಮ್ಮ ಪಿತೃಗಳ ಹಾಗೆ, ನಿಮ್ಮ ಕುತ್ತಿಗೆಯನ್ನು ಕಠಿಣ ಪಡಿಸ ಬೇಡಿರಿ. ಅವನ ಪರಿಶುದ್ಧ ಸ್ಥಾನದಲ್ಲಿ ಪ್ರವೇಶಿಸಿ, ನಿಮ್ಮ ದೇವರಾದ ಯೆಹೋವನನ್ನೇ ಸೇವಿಸಿರಿ; ಯಾಕಂದರೆ ಯೆಹೋವನು ದಯವೂ ಅಂತಃಕರಣವೂ ಉಳ್ಳವನಾಗಿದ್ದಾನೆ. ಆದದರಿಂದ ಹುಳಿ ಇಲ್ಲದ ರೊಟ್ಟಿಯ ಹಬ್ಬವನ್ನು ಆಚರಿಸುವದಕ್ಕೆ ಯೆರೂಸಲೇಮಿನಲ್ಲಿ ಬಹಳ ಜನರು ಕೂಡಿ ಕೊಂಡರು. ಮತ್ತು ಅವರು ಎದ್ದು, ಯೆರೂಸಲೇಮಿನಲ್ಲಿದ್ದ ಬಲಿಪೀಠಗಳನ್ನೂ ಧೂಪಪೀಠಗಳನ್ನೂ ತೆಗೆದು, ಕಿದ್ರೋನ್ ಹಳ್ಳದಲ್ಲಿ ಹಾಕಿದರು. ಆ ಹಬ್ಬವನ್ನು ಹದಿನಾಲ್ಕು ದಿವಸ ಸಂತೋಷವಾಗಿ ಆಚರಿಸಿದರು.

೨) ಈ ಕಾರ್ಯಗಳಾದ ಮೇಲೆ, ಅಷೂರದ ಅರಸನಾದ ಸನ್ಹೇರೀಬನು ಯೆಹೂದದ ಕೋಟೆಗಳುಳ್ಳ ಪಟ್ಣಗಳಿಗೆಲ್ಲಾ ವಿರೋಧವಾಗಿ ಏರಿ ಬಂದು, ಅವುಗಳನ್ನು ಹಿಡಿದನು. ಇದಲ್ಲದೆ ತನ್ನ ಸೈನ್ಯಾಧಿಪತಿಯಾದ ರಬ್ಶಾಕನನ್ನು ದೊಡ್ಡ ಸೈನ್ಯದ ಸಂಗಡ ಯೆರೂಸಲೇಮಿಗೆ ಕಳುಹಿಸಿದನು. ಇವನು: ಯೆರೂಸಲೇಮನ್ನು ನನಗೆ ಒಪ್ಪಿಸಿ ಕೊಡಿರಿ. ಯೆಹೋವನು ನಮ್ಮನ್ನು ತಪ್ಪಿಸುವನೆಂದು ಹೇಳಿ, ಹೆಜ್ಕೀಯನು ನಿಮ್ಮನ್ನು ನಂಬಿಸದಿರಲಿ. ಜನಾಂಗಗಳ ದೇವರುಗಳು ತಮ್ಮ ದೇಶಗಳನ್ನು ಅಷೂರದ ಅರಸನ ಕೈಗೆ ತಪ್ಪಿಸಿದರೋ? ಎಂದು ಹೇಳಿ, ಯೆಹೋವನನ್ನು ದೂಷಿಸಿದನು. ಹೆಜ್ಕೀಯನು ಇದನ್ನು ಕೇಳಿ

ದಾಗ, ತನ್ನ ವಸ್ತ್ರಗಳನ್ನು ಹರ ಕೊಂಡು, ಗೋಣಿಯಿಂದ ತನ್ನನ್ನು ಮುಚ್ಚಿ ಕೊಂಡು, ಯೆಹೋವನ ಮನೆಗೆ ಹೋಗಿ, ಪ್ರಾರ್ಥನೆ ಮಾಡಿದನು. ಆಗ ಪ್ರವಾದಿಯಾದ ಯೆಶಾಯನು ಹೆಜ್ಕೀಯನಿಗೆ ಹೇಳಿ ಕಳುಹಿಸಿದ್ದೇನಂದರೆ:—ಯೆಹೋವನು ಹೇಳಿದ ಮಾತು ಇದೇ: ನೀನು ಅಷೂರದ ಅರಸನಾದ ಸನ್ಹೆರೀಬನಿಗೆ ವಿರೋಧವಾಗಿ ನನಗೆ ಪ್ರಾರ್ಥನೆ ಮಾಡಿದಿಯಲ್ಲಾ? ಅವನು ಪಟ್ಣದಲ್ಲಿ ಬಾರನು; ಅದರಲ್ಲಿ ಬಾಣವನ್ನು ಎಸೆಯನು. ಅವನು ಬಂದ ಮಾರ್ಗದಿಂದಲೇ ಹೋಗುವನು; ಯಾಕಂದರೆ ನಾನು ಪಟ್ಣವನ್ನು ಕಾಪಾಡಿ, ರಕ್ಷಿಸುವೆನು. ಆಗ ಯೆಹೋವನ ದೂತನು ಅದೇ ರಾತ್ರಿಯಲ್ಲಿ ಹೊರಟು, ಅಷೂರದ ದಂಡಿನಲ್ಲಿ ಲಕ್ಷದ ಎಂಭತ್ತೈದು ಸಾವಿರ ಮಂದಿಯನ್ನು ಹೊಡೆದನು. ಅದು ಕಾರಣ ಸನ್ಹೆರೀಬನು ತಿರಿಗಿ ಕೊಂಡು, ನಿನೆವೆಗೆ ಹೋದನು. ಅಲ್ಲಿ ಅವನು ತನ್ನ ದೇವರಾದ ನಿಸ್ರಕನ ಮನೆಯಲ್ಲಿ ನಮಸ್ಕರಿಸುವಾಗ, ಅವನ ಮಕ್ಕಳಲ್ಲಿ ಇಬ್ಬರು ಅವನನ್ನು ಕತ್ತಿಯಿಂದ ಕೊಂದು ಹಾಕಿದರು. ಆ ದಿವಸಗಳಲ್ಲಿ ಹೆಜ್ಕೀಯನು ಸಾಯುವ ಹಾಗೆ ರೋಗದಲ್ಲಿ ಬಿದ್ದನು. ಆಗ ಪ್ರವಾದಿಯಾದ ಯೆಶಾಯನು ಅವನ ಬಳಿಗೆ ಬಂದು, ಅವನಿಗೆ: ಯೆಹೋವನು ಹೀಗೆ ಹೇಳುತ್ತಾನೆ—ನಿನ್ನ ಮನೆಯ ವಿಷಯ ಅಪ್ಪಣೆ ಕೊಡು; ಯಾಕಂದರೆ ನೀನು ಸಾಯಲೇ ಸಾಯುವಿ ಎಂದು ಹೇಳಿದನು. ಆದದರಿಂದ ಹೆಜ್ಕೀಯನು ತನ್ನ ಮುಖವನ್ನು ಗೋಡೆಯ ಕಡೆಗೆ ತಿರುಗಿಸಿ, ಯೆಹೋವನಿಗೆ ಪ್ರಾರ್ಥನೆ ಮಾಡಿ, ಬಹಳವಾಗಿ ಅತ್ತನು. ಆಗ ಯೆಶಾಯನಿಗೆ ಯೆಹೋವನ ವಾಕ್ಯ ಉಂಟಾಯಿತು. ಹ್ಯಾಗಂದರೆ:—ನೀನು ಹೋಗಿ ಹೆಜ್ಕೀಯನಿಗೆ ಹೇಳ ತಕ್ಕದ್ದೇನಂದರೆ--ಯೆಹೋವನು ಹೀಗೆ ಹೇಳುತ್ತಾನೆ: ನಿನ್ನ ಪ್ರಾರ್ಥನೆಯನ್ನು ಕೇಳಿದ್ದೇನೆ; ನಿನ್ನ ಕಣ್ಣೀರನ್ನು ನೋಡಿದ್ದೇನೆ; ಇಗೋ, ನಿನ್ನ ವರುಷಗಳಿಗೆ ಹದಿನೈದು ವರುಷ ಕೂಡಿಸುತ್ತೇನೆ; ಮತ್ತು ಇದಕ್ಕೆ ನಿನಗೆ ಗುರ್ತು ಯಾವದಂದರೆ: ಆಹಾಜನ ಛಾಯಸ್ತಂಭದಲ್ಲಿ ಪಂಕ್ತಿಗಳಿಂದ ಇಳಿದು ಹೋದ ನೆರಳನ್ನು



ಹತ್ತು ಪಂಕ್ತಿಗಳಷ್ಟು ಹಿಂತಿರುಗಿಸುವೆನು. ಆಗ ಸೂರ್ಯನು ಪಂಕ್ತಿಗಳಲ್ಲಿ ಇಳಿದ ಹತ್ತು ಪಂಕ್ತಿಗಳನ್ನು ತಿರಿಗಿ ಏರಿದನು. ಆಗ ಹೆಜ್ಕೀಯನು ಯೆಹೋವನಿಗೆ ಪ್ರಾರ್ಥನೆ ಮಾಡಿ, ಹೇಳಿದ್ದೇನಂದರೆ:— ಇಗೋ, ಕ್ಷೇಮಕ್ಕಾಗಿ ನನಗೆ ಉಪದ್ರವಾಯಿತು; ಆದರೆ ನೀನು ನನ್ನ ಪ್ರಾಣಕ್ಕೆ ಪ್ರೀತಿ ತೋರಿಸಿ, ಅದನ್ನು ನಾಶನದ ಕುಣಿಯೊಳಗಿಂದ ಎತ್ತಿದ್ಧೀ; ಯಾಕಂದರೆ ನನ್ನ ಪಾಪಗಳನ್ನೆಲ್ಲಾ ನಿನ್ನ ಬೆನ್ನಿನ ಹಿಂದಕ್ಕೆ ಹಾಕಿದ್ಧೀ. ಮತ್ತು ಯೆಶಾಯನು ಅರಸನಿಗೆ: ನಿನಗೆ ವಾಶಿಯಾಗುವ ಹಾಗೆ, ಅಂಜೂರಗಳ ಅಡೆಯನ್ನು ತಂದು, ಆ ಹುಣ್ಣಿನ ಮೇಲೆ ಹಚ್ಚು ಎಂದು ಹೇಳಿದನು. ಹೆಜ್ಕೀಯನು ರೋಗದಲ್ಲಿ ಬಿದ್ದು, ಸ್ವಸ್ಥವಾದನೆಂದು ಬಾಬೆಲಿನ ಅರಸನಾದ ಮರೋದಕ್-ಬಲದಾದನು ಕೇಳಿದಾಗ, ಅವನಿಗೆ ಕಾಗದವನ್ನೂ ಬಹುಮಾನವನ್ನೂ ಕಳುಹಿಸಿದನು. ಹೆಜ್ಕೀಯನು ಅದಕ್ಕೆ ಸಂತೋಷ ಪಟ್ಟು, ಅದನ್ನು ತಂದವರಿಗೆ ತನ್ನ ಭಂಡಾರದ ಮನೆಯನ್ನೂ ತನ್ನ ಎಲ್ಲವುಗಳನ್ನೂ ತೋರಿಸಿದನು. ಆಗ ಯೆಶಾಯನು ಅವನಿಗೆ ಹೇಳಿದ್ದೇನಂದರೆ:— ಸೈನ್ಯಗಳ ಯೆಹೋವನ ವಾಕ್ಯವನ್ನು ಕೇಳು. ಇಗೋ, ದಿನಗಳು ಬರುವವು; ಆಗ ನಿನ್ನ ಮನೆಯಲ್ಲಿರುವಂಥಾದ್ದೆಲ್ಲಾನ್ನೂ ನಿನ್ನಿಂದ ಹುಟ್ಟುವಂಥ ನಿನ್ನ ಮಕ್ಕಳಲ್ಲಿ ಕೆಲವರನ್ನೂ ಬಾಬೆಲಿಗೆ

ತಕ್ಕೊಂಡು ಹೋಗುವರು; ಅದಕ್ಕೆ ಹೆಜ್ಕೀಯನು ಯೆಶಾಯನಿಗೆ: ನೀನು ಹೇಳಿದ ಯೆಹೋವನ ವಾಕ್ಯ ಒಳ್ಳೇದೇ. ನನ್ನ ದಿವಸಗಳಲ್ಲಿ ಮಾತ್ರ ಸಮಾಧಾನವೂ ಸತ್ಯವೂ ಇರಲಿ, ಅಂದನು.

೩) ಹೆಜ್ಕೀಯನ ಮಗನಾದ ಮನಾಸೆಯು ಯೆರೂಸಲೇಮಿನಲ್ಲಿ ೫೫ ವರುಷ ಆಳಿದನು. ಅವನು ಅನ್ಯ ಜನಾಂಗಗಳ ಅಸಹ್ಯಗಳ ಪ್ರಕಾರವೇ ಯೆಹೋವನ ಸಮುಖದಲ್ಲಿ ಕೆಟ್ಟತನ ಮಾಡಿದನು. ಹೀಗೆ ಯೆಹೂದದವರೂ ಯೆರೂಸಲೇಮಿನವರೂ ಅನ್ಯ ಜನಾಂಗಗಳಿಗಿಂತ ಕೆಟ್ಟದ್ದನ್ನು ಮಾಡುವದಕ್ಕೆ ತಪ್ಪಿ ಹೋಗ ಮಾಡಿದನು. ಆದ ಕಾರಣ ಯೆಹೋವನು ಅಷೂರದ ಅರಸನ ಸೈನ್ಯದ ಅಧಿಪತಿಗಳನ್ನು ಬರ ಮಾಡಿದನು. ಅವರು ಮನಾಸೆಗೆ ಸಂಕೋಲೆಗಳನ್ನು ಹಾಕಿ, ಅವನನ್ನು ಬಾಬೆಲಿಗೆ ವೈದರು. ಅವನು ಇಕ್ಕಟ್ಟಿನಲ್ಲಿರುವಾಗ, ತನ್ನ ದೇವರಾದ ಯೆಹೋವನ ಕಟಾಕ್ಷವನ್ನು ಬೇಡಿಕೊಂಡು, ತನ್ನನ್ನು ಬಹಳವಾಗಿ ತಗ್ಗಿಸಿ ಕೊಂಡು, ಪ್ರಾರ್ಥನೆ ಮಾಡಿದನು. ಯೆಹೋವನು ಕನಿಕರ ಪಟ್ಟು, ಅವನ ಬಿನ್ನಹವನ್ನು ಕೇಳಿ, ಯೆರೂಸಲೇಮಿಗೆ ತನ್ನ ರಾಜ್ಯಕ್ಕೆ ಅವನನ್ನು ತಿರಿಗಿ ಬರ ಮಾಡಿದನು. ಆಗ ಯೆಹೋವನೇ ದೇವರೆಂದು ಅವನು ತಿಳು ಕೊಂಡು, ಅನ್ಯ ದೇವರುಗಳನ್ನು ಪಟ್ಣದ ಹೊರಗೆ ಬಿಸಾಟು ಬಿಟ್ಟು, ಯೆಹೋವನನ್ನು ಸೇವಿಸಲಿಕ್ಕೆ ಪ್ರಜೆಗೆ ಅಪ್ಪಣೆ ಕೊಟ್ಟನು. ಮನಾಸೆಯು ಸತ್ತ ಮೇಲೆ, ಅವನ ಮಗನಾದ ಅಮೋನನು ಅರಸನಾದನು. ಅವನು ತನ್ನ ತಂದೆಯು ಮಾಡಿದ ಹಾಗೆಯೇ, ಯೆಹೋವನ ಸಮುಖದಲ್ಲಿ ಕೆಟ್ಟದ್ದನ್ನು ಮಾಡಿದನು. ಆದರೆ ತನ್ನ ತಂದೆಯು ತನ್ನನ್ನು ತಗ್ಗಿಸಿ ಕೊಂಡ ಹಾಗೆ, ಯೆಹೋವನ ಮುಂದೆ ತನ್ನನ್ನು ತಗ್ಗಿಸಿ ಕೊಳ್ಳಲಿಲ್ಲ. ಆದದರಿಂದ ಅವನ ಸೇವಕರು ಅವನ ಸ್ವಂತ ಮನೆಯಲ್ಲಿ ಅವನನ್ನು ಕೊಂದು ಹಾಕಿದರು.

೪) ತರುವಾಯ ದೇಶದ ಜನರು ಅವನ ಮಗನಾದ ಯೊಷೀಯನನ್ನು ಅರಸನಾಗ ಮಾಡಿದರು. ಅವನು ಯೆಹೋವನ ಸಮು

ಖದಲ್ಲಿ ನೆಟ್ಟನೆಯಾದದ್ದನ್ನು ಮಾಡಿದನು. ಅವನು ಇನ್ನೂ ಹುಡು ಗನಾಗಿರುವಾಗ, ತನ್ನ ಆಳಿಕೆಯ ಎಂಟನೇ ವರುಷದಲ್ಲಿ ತನ್ನ ಪಿತೃ ವಾದ ದಾವೀದನ ದೇವರನ್ನು ಹುಡುಕಲಾರಂಭಿಸಿದನು. ಮತ್ತು ಹನ್ನೆರಡನೇ ವರುಷದಲ್ಲಿ ಮೇಡುಗಳನ್ನೂ ಎರಕ ಹೊಯಿದ ವಿಗ್ರಹ ಗಳನ್ನೂ ತೆಗೆದು ಹಾಕಿ, ಯೆಹೂದವನ್ನೂ ಯೆರೂಸಲೇಮನ್ನೂ ಶುಚಿ ಮಾಡಿ, ಯೆಹೋವನ ಮನೆಯನ್ನು ಸಮ ಮಾಡಿದನು. ಇದ ಲ್ಲದೆ ಇಸ್ರಯೇಲ್ ದೇಶದಲ್ಲಿದ್ದ ಬೆತೇಲ್ ಮೊದಲಾದ ಪಟ್ಟಗಳಲ್ಲಿ ಅವನು ಎಲ್ಲಾ ವಿಗ್ರಹಗಳನ್ನು ಮುರಿದು ಬಿಟ್ಟು, ಪುಡಿ ಪುಡಿ ಮಾಡಿ, ಅವುಗಳನ್ನು ಪೂಜಾರಿಗಳ ಸಮಾಧಿಗಳ ಮೇಲೆ ಚಲ್ಲಿಸಿ, ಪೂಜಾರಿ ಗಳ ಎಲುವುಗಳನ್ನು ಅವರ ಬಲಿಪೀಠಗಳ ಮೇಲೆ ಸುಟ್ಟು ಬಿಟ್ಟನು. ಆ ಸಮಯದಲ್ಲಿ ಯಾಜಕನಾದ ಹಿಲ್ಕೀಯನು ದೇವಾಲಯದಲ್ಲಿ ನ್ಯಾಯಪ್ರಮಾಣದ ಪುಸ್ತಕವನ್ನು ಕಂಡು ಕೊಂಡನು. ಮತ್ತು ಶಫಾನನು ಅದನ್ನು ಅರಸನ ಮುಂದೆ ಓದಿದನು. ಅರಸನು ನ್ಯಾಯ ಪ್ರಮಾಣದ ವಾಕ್ಯಗಳನ್ನು ಕೇಳಿದಾಗ, ತನ್ನ ವಸ್ತ್ರಗಳನ್ನು ಹರ ಕೊಂಡು: ನಮ್ಮ ಪಿತೃಗಳು ಈ ಪುಸ್ತಕದಲ್ಲಿ ಬರೆದ ಎಲ್ಲಾದರ ಪ್ರ ಕಾರ ಮಾಡ, ಯೆಹೋವನ ವಾಕ್ಯವನ್ನು ಕೈಕೊಳ್ಳದೆ ಇದ್ದದರಿಂದ, ನಮ್ಮ ಮೇಲೆ ಸುರಿದ ಯೆಹೋವನ ಉರಿಯು ದೊಡ್ಡದಾಗಿದೆ. ಆಗ ಪ್ರವಾದಿನಿಯಾದ ಹುಲ್ದಳ ಮುಖಾಂತರವಾಗಿ ಯೆಹೋವನು ಯೊಷೀಯನಿಗೆ ತಿಳಿಸಿದ್ದೇನಂದರೆ:—ಇಗೋ, ನಾನು ಈ ಸ್ಥಳದ ಮೇಲೆಯೂ ಅದರ ನಿವಾಸಿಗಳ ಮೇಲೆಯೂ ಕೇಡನ್ನೂ ಯೆಹೂ ದದ ಅರಸನ ಮುಂದೆ ಅವರು ಓದಿದ ಪುಸ್ತಕದಲ್ಲಿ ಬರೆದಿದ್ದ ಎಲ್ಲಾ ಶಾಪಗಳನ್ನೂ ಬರ ಮಾಡುವೆನು. ಯಾಕಂದರೆ ಅವರು ನನ್ನನ್ನು ಬಿಟ್ಟು, ಬೇರೆ ದೇವರುಗಳಿಗೆ ಧೂಪವನ್ನು ಸುಟ್ಟಿದ್ದಾರೆ. ಆದರೆ ಯೆ ಹೂದದ ಅರಸನಿಗೆ ನೀವು ಹೇಳ ಬೇಕಾದದ್ದೇನಂದರೆ:—ದೇವರು ಹೇಳಿದ ಮಾತುಗಳನ್ನು ನೀನು ಕೇಳಿದಾಗ, ನಿನ್ನ ಹೃದಯವು ಮೆತ್ತ ಗಾಗಿ, ನೀನು ಅವನ ಮುಂದೆ ನಿನ್ನನ್ನು ತಗ್ಗಿಸಿ ಕೊಂಡದರಿಂದ, ನಾನು

ನಿನ್ನನ್ನು ಕೇಳಿದ್ದೇನೆ. ಮತ್ತು ಸಮಾಧಾನದಿಂದ ನಿನ್ನ ಸಮಾಧಿಗೆ ಹೋಗುವಿ. ನಾನು ಈ ಸ್ಥಳದ ಮೇಲೆ ಬರ ಮಾಡುವ ಕೇಡನ್ನು ನಿನ್ನ ಕಣ್ಣು ನೋಡದು. ತರುವಾಯ ಅರಸನು ಯೆಹೂದದ ಸಮಸ್ತ ಮನುಷ್ಯರನ್ನೂ ಹಿರಿಕಿರಿಯರನ್ನೂ ಕೂಡಿಸಿ, ಯೆಹೋವನ ಮನೆಯಲ್ಲಿ ಒಡಂಬಡಿಕೆಯ ಪುಸ್ತಕದ ಮಾತುಗಳನ್ನೆಲ್ಲಾ ಅವರು ಕೇಳುವ ಹಾಗೆ ಓದಿದನು. ಮತ್ತು ಅವರು ಯೆಹೋವನನ್ನು ಹಿಂಬಾಲಿಸುವದಕ್ಕೂ, ಆತನ ಆಜ್ಞೆಗಳನ್ನೂ ಸಾಕ್ಷಿಗಳನ್ನೂ ಪೂರ್ಣ ಹೃದಯದಿಂದ ಕೈಕೊಳ್ಳುವದಕ್ಕೂ, ಅವನು ಯೆಹೋವನ ಮುಂದೆ ಒಡಂಬಡಿಕೆ ಮಾಡಿದನು. ಮೋಶೆಯ ನ್ಯಾಯಪ್ರಮಾಣವೆಲ್ಲಾದರ ಪ್ರಕಾರ ಯೆಹೋವನ ಬಳಿಗೆ ತಿರುಗಿದ ಈ ಅರಸನ ಹಾಗೆ ಮತ್ತೊಬ್ಬನು ಇರಲಿಲ್ಲ.

II. 31. III. 32. II. 36. 43.

---

## ೪೯. ಪ್ರವಾದಿಗಳು.

೧) ಇಸ್ರಯೇಲಿನ ರಾಜ್ಯದಲ್ಲಿಯೂ ಯೆಹೂದದ ರಾಜ್ಯದಲ್ಲಿಯೂ ಆಗ್ಯಾಗ್ಯೆ ಪ್ರವಾದಿಗಳು ಇದ್ದರು. ಯೆಹೋವನು ದೊಡ್ಡವರೊಳಗಿಂದಲೂ ಬಡವರೊಳಗಿಂದಲೂ ಅವರನ್ನು ಆರಿಸಿ ಕೊಂಡನು. ಪ್ರವಾದಿಯಾದ ಯೆಶಾಯನು ಯೆಹೂದದ ಅರಸುಗಳ ವಂಶದವನಾಗಿದ್ದನು. ಅವನು ಮೆಸ್ಸೀಯನ (ಅಂದರೆ ಕ್ರಿಸ್ತನ) ವಿಷಯವಾಗಿ ಬಹಳ ಪ್ರವಾದನೆಗಳನ್ನು ಹೇಳಿದ್ದೇನಂದರೆ:—ಇಗೋ, ಕನ್ಯಾಸ್ತ್ರೀಯು ಬಸುರಾಗಿ, ಮಗನನ್ನು ಹೆತ್ತು, ಅವನಿಗೆ ಇಮ್ಮಾನುವೇಲ್ ಎಂದು (ಅಂದರೆ: ನಮ್ಮ ಸಂಗಡ ದೇವರಿದ್ದಾನೆಂಬ ಅರ್ಥವುಳ್ಳ) ಹೆಸರಿಡುವಳು. (ಯೆಶಾ. ೭, ೧೪.) ಮಗುವು ನಮಗೆ ಹುಟ್ಟಿಯದೆ; ಮಗನು ನಮಗೆ ಕೊಡಲ್ಪಟ್ಟಿದ್ದಾನೆ; ಅಧಿಕಾರವು ಅವನ ಹೆಗಲಿನ

ಮೇಲೆ ಇರುವದು; ಅವನ ಹೆಸರು—ಆಶ್ಚರ್ಯವಾದವನು, ಆಲೋಚನೇ ಕರ್ತನು, ಬಲಿಷ್ಠ ದೇವರು, ನಿತ್ಯ ತಂದೆಯು, ಸಮಾಧಾನದ ಪ್ರಭುವು ಎಂದು ಹೇಳಲ್ಪಡುವದು. (ಯೆಶಾ. ೯, ೬.) ಯೆಹೋವನು ಪ್ರವಾದಿಯಾದ ಯೆರೆಮಿಾಯನನ್ನು ಕರೆದಾಗ, ಅವನು ಯೆಹೋವನಿಗೆ ಹೇಳಿದ್ದೇನಂದರೆ:—ಅಯ್ಯೋ! ದೇವರಾದ ಯೆಹೋವನೇ, ಮಾತಾಡುವದಕ್ಕೆ ನನಗೆ ಬರುವದಿಲ್ಲ, ನಾನು ಚಿಕ್ಕವನು. ಆಗ ಯೆಹೋವನು ಅವನಿಗೆ: ನಾನು ಚಿಕ್ಕವನೆಂದು ಹೇಳ ಬೇಡ; ಯಾಕಂದರೆ ನಾನು ನಿನ್ನನ್ನು ಕಳುಹಿಸುವವರೆಲ್ಲರ ಬಳಿಗೆ ಹೋಗ ಬೇಕು; ಮತ್ತು ನಾನು ನಿನಗೆ ಆಜ್ಞಾಪಿಸುವದನ್ನೆಲ್ಲಾ ಮಾತಾಡ ಬೇಕು; ನಾನು ನನ್ನ ವಾಕ್ಯಗಳನ್ನು ನಿನ್ನ ಬಾಯಿಯಲ್ಲಿ ಇಟ್ಟಿದ್ಧೇನೆ. ನೋಡು, ಈ ಹೊತ್ತು ನಿನ್ನನ್ನು ಕೀಳುವದಕ್ಕೂ ಒಡೆದು ಬಿಡುವದಕ್ಕೂ ನಾಶನ ಮಾಡುವದಕ್ಕೂ ಕಟ್ಟುವದಕ್ಕೂ ನೆಡುವದಕ್ಕೂ ಜನಾಂಗಗಳ ಮೇಲೆಯೂ ರಾಜ್ಯಗಳ ಮೇಲೆಯೂ ಇರಿಸಿದ್ಧೇನೆ, ಅಂದನು. ಕಸ್ದೀಯರು ಬಂದು, ರಾಜ್ಯವನ್ನು ನಾಶನ ಮಾಡಿ, ಪ್ರಜೆಯನ್ನು ಬಾಬೆಲಿಗೆ ವೈಯುವರೆಂದು ಯೆರೆಮೀಯನು ತಿಳಿಸಿದನು. ಆದರೆ ಒಬ್ಬನಾದರೂ ಅವನ ಮಾತನ್ನು ನಂಬಲಿಲ್ಲ. ಅರಸನಾದ ಯೆಹೊಯಕೀಮನು ಅವನ ಪ್ರವಾದನೆಯ ಪುಸ್ತಕವನ್ನು ಚೂರಿಯಿಂದ ಕೊಯಿಸಿ, ಬೆಂಕಿಯಲ್ಲಿ ಹಾಕಿಸಿ ಬಿಟ್ಟನು. ಮತ್ತು ಅವನನ್ನು ಅಪಹಾಸ್ಯ ಮಾಡಿ, ನಿಂದಿಸಿ, ಹೊಡೆದು, ಒಂದು ಕುಣಿಯಲ್ಲಿ ಹಾಕಿದರು. ಆದರೆ ಯೆಹೋವನು ಯೆರೆಮಿಾಯನನ್ನು ಎಲ್ಲರಿಗೆ ವಿರೋಧವಾಗಿ ಕೋಟೆಯುಳ್ಳ ಪಟ್ಣವಾಗಿಯೂ ಕಬ್ಬಿಣದ ಸ್ತಂಭವಾಗಿಯೂ ಹಿತ್ತಾಳಿಯ ಗೋಡೆಯಾಗಿಯೂ ಮಾಡಿದನು. ಅವನು ಮೆಸ್ಸೀಯನ ವಿಷಯವಾಗಿ ಪ್ರವಾದನೆ ಹೇಳಿದ್ದೇನಂದರೆ:—ಇಗೋ, ದಿನಗಳು ಬರುವವೆಂದು ಯೆಹೋವನು ಹೇಳುತ್ತಾನೆ; ಆಗ ನಾನು ಇಸ್ರಯೇಲಿನ ಮನೆಯವರ ಸಂಗಡಲೂ, ಯೆಹೂದನ ಮನೆಯವರ ಸಂಗಡಲೂ ಆಡಿದ ಒಳ್ಳೇ ಮಾತನ್ನು ಸ್ಥಾಪಿಸುವೆನು; ಆ ಕಾಲದಲ್ಲಿ ನಾನು ದಾವೀದನಿಗೆ

ನೀತಿಯುಳ್ಳ ಚಿಗುರನ್ನು ಚಿಗುರ ಮಾಡುವೆನು; ಅವನು ದೇಶದಲ್ಲಿ ನ್ಯಾಯವನ್ನೂ ನೀತಿಯನ್ನೂ ನಡಿಸುವನು; ಮತ್ತು ಅವನನ್ನು ಕರೆಯುವ ಹೆಸರು ಇದೆ—ಯೆಹೋವನು ನಮ್ಮ ನೀತಿಯೇ; ಯಾಕಂದರೆ ಯೆಹೋವನು ಹೀಗೆ ಹೇಳುತ್ತಾನೆ. ದಾವೀದನಿಗೆ ಇಸ್ರಯೇಲಿನ ಮನೆಯ ಸಿಂಹಾಸನದಲ್ಲಿ ಕೂತು ಕೊಳ್ಳುವ ಮನುಷ್ಯನು ಇಲ್ಲದೆ ಹೋಗುವದಿಲ್ಲ.

೨) ಪ್ರವಾದಿಯಾದ ಎಜೇಕಿಯೇಲನು ವಿಶೇಷವಾಗಿ ಬಾಬೆಲಿಗೆ ವೈಯಲ್ಪಟ್ಟ ಇಸ್ರಯೇಲ್ಯರೊಳಗೆ ಪ್ರವಾದಿಸುತ್ತಿದ್ದನು. ಯೆರೂಸಲೇಮು ನಾಶವಾಗದೆ ಇರುವ ತನಕ ಬಹಳ ಮಂದಿ ಸುಳ್ಳು ಪ್ರವಾದಿಗಳು ಎದ್ದು, ಜನರನ್ನು ಮೋಸಗೊಳ್ಳಿಸಿ: ನೀವು ಬೇಗವಾಗಿ ತಿರಿಗಿ ನಿಮ್ಮ ಸ್ವಂತ ದೇಶಕ್ಕೆ ಹೋಗುವಿರೆಂದು ಹೇಳಿ, ಅವರಲ್ಲಿ ಅಬದ್ಧ ನಿರೀಕ್ಷೆಯನ್ನು ಹುಟ್ಟಿಸಿದರು. ಈ ಸುಳ್ಳು ಕೋರಿಕೆಯನ್ನು ಯೆಹೋವನ ಆಜ್ಞೆಯ ಪ್ರಕಾರ ಅವರಲ್ಲಿ ಅಣಗಿಸ ಬೇಕೆಂದು ಅವರಿಗೆ: ಯೆರೂಸಲೇಮೂ ಅದರ ದೇವಾಲಯವೂ ನಿಶ್ಚಯವಾಗಿ ನಾಶವಾಗುವದೆಂದು ಸಾರಿದನು. ಆದರೆ ಸಂಕಟದಲ್ಲಿರುವವರನ್ನು ಅವನು ಸಂತೈಸಿ, ಅವರಿಗೆ: ಯೆಹೋವನ ಮಾತನ್ನು ಕೇಳಿರಿ, ಏನಂದರೆ:—ನಾನೇ ನನ್ನ ಕುರಿಗಳನ್ನು ರಕ್ಷಿಸುವೆನು; ಮತ್ತು ಅವುಗಳ ಮೇಲೆ ಒಬ್ಬ ಕುರುಬನನ್ನು ಇರಿಸುವೆನು; ಅವನೇ ಅವುಗಳನ್ನು ಮೇಯಿಸುವನು; ನನ್ನ ಸೇವಕನಾದ ದಾವೀದನನ್ನೇ (ಅಂದರೆ ದಾವೀದನ ವಂಶದವನಾದ ಕ್ರಿಸ್ತನನ್ನೇ); ಅವನೇ ಅವುಗಳಿಗೆ ಕುರುಬನಾಗಿರುವನು. (ಎಜೇಕಿ. ೩೪, ೨೩.) ಮತ್ತು ನಾನು ನಿಮಗೆ ಹೊಸ ಹೃದಯವನ್ನು ಕೊಟ್ಟು, ಹೊಸ ಆತ್ಮವನ್ನು ನಿಮ್ಮೊಳಗೆ ಇಡುವೆನು; ಕಲ್ಲಿನ ಹೃದಯವನ್ನು ನಿಮ್ಮ ಮಾಂಸದೊಳಗಿಂದ ತೆಗೆದು, ಮಾಂಸದ ಹೃದಯವನ್ನು ನಿಮಗೆ ಕೊಡುವೆನು; ಇದಲ್ಲದೆ ನನ್ನ ಆತ್ಮವನ್ನು ನಿಮ್ಮೊಳಗೆ ಇಟ್ಟು, ನೀವು ನನ್ನ ನೇಮಗಳಲ್ಲಿ ನಡೆದು, ನನ್ನ ನ್ಯಾಯಗಳನ್ನು ಕೈಕೊಂಡು, ಅದನ್ನು ಮಾಡುವ ಹಾಗೆ ಮಾಡುವೆನು, ಅಂದನು.

ಒಂದಾನೊಂದು ದಿನದಲ್ಲಿ ಎಜೇಕಿಯೇಲನು ಒಂದು ದರ್ಶನವನ್ನು ಕಂಡು, ಅದರ ವಿಷಯವಾಗಿ ಹೀಗೆ ಹೇಳಿದನು: ಯೆಹೋವನ ಕೈ ನನ್ನ ಮೇಲೆ ಇದ್ದು, ನನ್ನನ್ನು ಆತ್ಮದಲ್ಲಿ ಹೊರಗೆ ತಂದು, ತಗ್ಗಿನ ಮಧ್ಯದಲ್ಲಿ ಬಿಟ್ಟಿತು. ಅದು ಎಲುವುಗಳಿಂದ ತುಂಬಾಗಿತ್ತು. ಇವುಗಳ ಸುತ್ತಲಾಗಿ ನನ್ನನ್ನು ಹಾದು ಹೋಗ ಮಾಡಿತು. ಅವು, ಬಹಳ ಒಣಗಿದ್ದವು. ಆಗಲವನು ನನಗೆ: ಮನುಷ್ಯನ ಮಗನೇ, ಈ ಎಲುವುಗಳು ಜೀವಿಸಲಾಗುವದೋ? ಅಂದನು. ಅದಕ್ಕೆ ನಾನು: ಕರ್ತನಾದ ಯೆಹೋವನೇ, ನೀನೇ ಬಲ್ಲಿ, ಅಂದೆನು. ಆಗಲವನು ನನಗೆ: ನೀನು ಈ ಎಲುವುಗಳ ಮೇಲೆ ಪ್ರವಾದಿಸು, ಅಂದನು. ಮತ್ತು ನನಗೆ ಆಜ್ಞೆಯಾದ ಪ್ರಕಾರವೇ ನಾನು ಪ್ರವಾದಿಸಿದೆನು. ಆಗ ಶಬ್ದವಾಯಿತು; ಮತ್ತು ಇಗೋ, ಕದಲುವಿಕೆ ಇತ್ತು; ಆಗ ಆ ಎಲುವುಗಳು ಎಲುವಿನ ಸಂಗಡ ಎಲುವು ಕೂಡಿ ಕೊಂಡವು. ಮತ್ತು ಇಗೋ, ಅವುಗಳ ಮೇಲೆ ನರಗಳೂ ಮಾಂಸವೂ ಸಹ ಬೆಳಿಯಿತು; ಮತ್ತು ಚರ್ಮವು ಅವುಗಳ ಮೇಲೆ ಮುಚ್ಚಿ ಕೊಂಡಿತು; ಆದರೆ ಆತ್ಮವು ಅವುಗಳಲ್ಲಿ ಇರಲಿಲ್ಲ. ಆಗಲವನು ನನಗೆ: ಆತ್ಮಕ್ಕೆ ಪ್ರವಾದಿಸು; ಹ್ಯಾಗಂದರೆ: ಆತ್ಮವೇ, ಬಾ, ಈ ಹತವಾದವರ ಮೇಲೆ ಅವರು ಜೀವಿಸುವ ಹಾಗೆ ಊದು, ಅಂದನು. ಅವನು ನನಗೆ ಆಜ್ಞಾಪಿಸಿದ ಹಾಗೆ ನಾನು ಪ್ರವಾದಿಸಿದೆನು; ಆಗ ಆತ್ಮವು ಅವುಗಳಲ್ಲಿ ಬಂತು; ಮತ್ತು ಅವು ಜೀವಿಸಿ, ಬಹಳ ದೊಡ್ಡ ದಂಡಾಗಿ ಕಾಲೂರಿ ನಿಂತವು. ಆಗಲವನು ನನಗೆ ಹೇಳಿದ್ದೇನಂದರೆ:—ಮನುಷ್ಯನ ಮಗನೇ, ಈ ಎಲುವುಗಳು ಸಮಸ್ತ ಇಸ್ರಯೇಲಿನ ಮನೆಯವರೇ; ಇಗೋ, ಅವರು: ನಮ್ಮ ಎಲುವುಗಳು ಒಣಗಿಯವೆ; ನಮ್ಮ ನಿರೀಕ್ಷೆ ನಾಶವಾಯಿತು ಎಂದು ಹೇಳುತ್ತಾರೆ. ಆದದರಿಂದ ನೀನು ಪ್ರವಾದಿಸಿ, ಅವರಿಗೆ ಹೇಳ ತಕ್ಕದ್ದೇನಂದರೆ:—ಯೆಹೋವನು ಹೀಗೆ ಹೇಳುತ್ತಾನೆ: ಇಗೋ, ನನ್ನ ಜನರೇ, ನಾನು ನಿಮ್ಮ ಸಮಾಧಿಗಳನ್ನು ತೆರೆದು, ನಿಮ್ಮನ್ನು ಅದರೊಳಗಿಂದ ಹೊರಗೆ ಬರ ಮಾಡಿ,

ನಿಮ್ಮನ್ನು ಇಸ್ರಯೇಲಿನ ದೇಶಕ್ಕೆ ಬರ ಮಾಡುವೆನು; ನನ್ನ ಆತ್ಮವನ್ನು ನಿಮ್ಮಲ್ಲಿ ಇಡುವೆನು; ಆಗ ನೀವು ಜೀವಿಸುವಿರಿ.

(ಎಜೇಕಿ. 37, 1—14.) I. 33. ಬಾ. 1. 27. 123.

---

## ೫೦. ಯೆಹೂದ ರಾಜ್ಯದ ವಿನಾಶವು.

(೨ ಅರಸು. ೨೪. ೨೫. ಯೆರೆಮಿಾ. ೪೨—೪೪.)

೧) ಭಕ್ತಿಯುಳ್ಳ ಅರಸನಾದ ಯೊಷೀಯನು ಸತ್ತ ಮೇಲೆ ಯೆಹೋವನ ಸಮುಖದಲ್ಲಿ ಕೆಟ್ಟದ್ದನ್ನು ಮಾಡುವ ಅರಸುಗಳು ತಿರಿಗಿ ಆಳುತ್ತಿದ್ದರು. ಅಧಿಕಾರಿಗಳೂ ಯಾಜಕರೂ ಪ್ರಜೆಯೂ ಹೆಚ್ಚೆಚ್ಚಾಗಿ ಕೆಟ್ಟು ಹೋದರು. ಯೆರೆಮಿಾಯ ಮೊದಲಾದ ಪ್ರವಾದಿಗಳು ಅವರಿಗೆ ಬುದ್ಧಿ ಹೇಳಿ, ಅವರನ್ನು ಎಚ್ಚರಿಸಿ, ಭಯ ಪಡಿಸುವದು ವ್ಯರ್ಥವಾಗಿ ಹೋಯಿತು. ಯೊಷೀಯನ ಮಗನಾದ ಯೆಹೊಯಕೀಮನು ಆಳುವ ಸಮಯದಲ್ಲಿ ಬಾಬೆಲಿನ ಅರಸನಾದ ನೆಬುಕದ್ನೇಚರನು ಯೆಹೂದ ದೇಶಕ್ಕೆ ಬಂದು, ಅರಸುಗಳ ವಂಶದವರಾಗಿರುವ ಯೌವನಸ್ಥರನ್ನೂ ದೇಶದ ಕುಲೀನರನ್ನೂ ಬಾಬೆಲಿಗೆ ವೈದನು. ಅವರೊಳಗೆ ದಾನಿಯೇಲನೂ ಇದ್ದನು. ಇದು ಮೊದಲನೇ ವಾಸಾಂತರ,—ಮತ್ತು ಬಾಬೆಲಿನ ೭೦ ವರುಷಗಳ ಶೆರೆಯ ಆರಂಭವು. (ಕ್ರಿಸ್ತನ ಜನ್ಮದ ಮುಂಚೆ ೬೦೩.) ಯೆಹೊಯಕೀಮನು ಸತ್ತ ತರುವಾಯ ಅವನ ಮಗನಾದ ಯೆಹೊಯಕೀನನು ಅರಸನಾಗಿ, ಮೂರು ತಿಂಗಳು ಹತ್ತು ದಿವಸ ಮಾತ್ರ ಆಳಿದನು. ಯಾಕಂದರೆ ಅರಸನಾದ ನೆಬುಕದ್ನೇಚರನು ಜನರನ್ನು ಕಳುಹಿಸಿ, ಯೆರೂಸಲೇಮನ್ನು ವಶ ಮಾಡಿ ಕೊಂಡು, ಅರಸನನ್ನೂ ದೇಶದ ದೊಡ್ಡವರೆಲ್ಲರನ್ನೂ ಆಚಾರಿಗಳನ್ನೂ ಯುದ್ಧಸ್ಥರನ್ನೂ ಬಾಬೆಲಿಗೆ ವೈದು, ಯೆಹೊಯಕೀನನ ಚಿಕ್ಕಪ್ಪನಾದ ಚಿದ್ಕೀಯನನ್ನು ಅರಸನಾಗ ಮಾಡಿದನು. ಈ ಸಾರಿ ಶೆರೆಗೆ ಹೋದವರಲ್ಲಿ ಪ್ರವಾದಿಯಾದ ಎಜೇಕಿಯೇಲನೂ

ಇದ್ದನು. ಚಿದ್ಕೀಯನು ಸಹ ಯೆಹೋವನ ದೃಷ್ಟಿಯಲ್ಲಿ ಕೆಟ್ಟದ್ದನ್ನು ಮಾಡಿದನು. ಮತ್ತು ಪ್ರವಾದಿಯಾದ ಯೆರೆಮೀಯನು ಅವನಿಗೆ ಹೇಳಿದ ಯೆಹೋವನ ಮಾತಿನ ಮುಂದೆ ತನ್ನನ್ನು ತಗ್ಗಿಸದೆ ಇದ್ದನು. ಇದಲ್ಲದೆ ತಾನು ಆಳಿದ ಒಂಭತ್ತನೇ ವರುಷದಲ್ಲಿ ನೆಬುಕದ್ನೇಚರನ ಮೇಲೆ ತಿರುಗಿ ಬಿದ್ದನು. ಅದು ಕಾರಣ ನೆಬುಕದ್ನೇಚರನು, ತಾನೂ ತನ್ನ ಸಮಸ್ತ ಸೈನ್ಯವೂ ಯೆರೂಸಲೇಮಿನ ಮೇಲೆ ಬಂದು, ಅದರ ಸುತ್ತಲು ಮೂರನೇ ಸಾರಿ ಮುತ್ತಿಗೆ ಹಾಕಿದನು. ಆಗ ಪಟ್ಣದಲ್ಲಿ ಬರವು ಬಹಳವಾಯಿತು. ಎರಡು ವರುಷ ಆದ ಮೇಲೆ ಪಟ್ಣವು ಮುರಿಯಲ್ಪಟ್ಟದರಿಂದ, ಸೈನ್ಯವೆಲ್ಲವೂ ಒಳಗೆ ಹೋಯಿತು. ಚಿದ್ಕೀಯನು ಓಡಿ ಹೋದನು. ಆದರೆ ಕಸ್ದೀಯರ ದಂಡಿನವರು ಅವನನ್ನು ಹಿಡು ಕೊಂಡು, ನೆಬುಕದ್ನೇಚರನ ಬಳಿಗೆ ತಕ್ಕೊಂಡು ಬಂದರು. ಅಲ್ಲಿ ಅವನ ಮಕ್ಕಳನ್ನು ಅವನ ಕಣ್ಣುಗಳ ಮುಂದೆ ಕೊಂದ ತರುವಾಯ, ಅವನ ಕಣ್ಣುಗಳನ್ನು ಕುರುಡ ಮಾಡಿ, ಅವನಿಗೆ ಹಿತ್ತಾಳಿಯ ಸಂಕೋಲೆಗಳನ್ನು ಹಾಕಿ, ಅವನನ್ನು ಬಾಬೆಲಿಗೆ ತಕ್ಕೊಂಡು ಹೋದರು. ಮತ್ತು ಯೆಹೋವನ ಮನೆಯನ್ನೂ ಅರಮನೆಯನ್ನೂ ಯೆರೂಸಲೇಮಿನಲ್ಲಿದ್ದ ಸಮಸ್ತ ಮನೆಗಳನ್ನೂ ಬೆಂಕಿಯಿಂದ ಸುಟ್ಟು ಬಿಟ್ಟರು. ಮತ್ತು ಪಟ್ಣದ ಗೋಡೆಗಳನ್ನು ಕೆಡವಿ ಬಿಟ್ಟರು. (ಕ್ರಿಸ್ತನ ಜನ್ಮದ ಮುಂಚೆ ೫೮೮.) ಪಟ್ಣದಲ್ಲಿ ಉಳಿದ ಜನರನ್ನು ನೆಬುಕದ್ನೇಚರನು ಸೆರೆಯಾಗಿ ಹೈದನು. ಆದರೆ ದ್ರಾಕ್ಷೇ ತೋಟ ಮಾಡುವ ಹಾಗೆಯೂ, ಬೇಸಾಯ ಮಾಡುವ ಹಾಗೆಯೂ, ದೇಶದ ದರಿದ್ರರನ್ನು ಉಳಿಸಿ ಬಿಟ್ಟನು. ಇದಲ್ಲದೆ ಯೆಹೋವನ ಮನೆಯಲ್ಲಿದ್ದ ತಾಂಬ್ರ ಸ್ತಂಭಗಳನ್ನೂ ತಾಂಬ್ರದ ಸಮುದ್ರವನ್ನೂ ಬೇರೆ ಬೇರೆ ಸಾಮಾನುಗಳನ್ನೂ ಬೆಳ್ಳಿ ಭಂಗಾರವನ್ನೂ ಅವನು ತಕ್ಕೊಂಡು ಹೋಗಿ, ತನ್ನ ದೇವರ ಮನೆಯಲ್ಲಿಟ್ಟನು. ಮತ್ತು ಯೆಹೂದ ದೇಶದಲ್ಲಿ ಉಳಿದ ಜನರ ಮೇಲೆ ನೆಬುಕದ್ನೇಚರನು ಗೆದಲ್ಯನನ್ನು ದೇಶಾಧಿಪತಿಯಾಗಿರ ನೇಮಿಸಿದನು. ಆದರೆ ಅರಸನ ಸಂತಾನದವನಾದ

ಇಷ್ಮಯೇಲನು ಗೆದಲ್ಯನನ್ನು ಕತ್ತಿಯಿಂದ ಕೊಂದು ಹಾಕಿದನು. ಆಗ ಜನರೆಲ್ಲರು ಕಸ್ದೀಯರಿಗೆ ಭಯ ಪಟ್ಟದ್ದರಿಂದ, ಐಗುಪ್ತಕ್ಕೆ ಓಡಿ ಹೋದರು. ಪ್ರವಾದಿಯಾದ ಯೆರೆಮಿಾಯನು ಅವರಿಗೆ ಹೋಗ ಬೇಡವೆಂದು ಬುದ್ಧಿ ಹೇಳಿದರೂ, ಅವರು ಅವನನ್ನು ಸಹ ಬಲಾತ್ಕಾರದಿಂದ ತಮ್ಮ ಸಂಗಡ ವೈದು ಕೊಂಡರು. ಅವನು ಐಗುಪ್ತದಲ್ಲಿ ಸಹ ಅವರ ಭಕ್ತಿಹೀನ ನಡತೆಗೋಸ್ಕರ ಅವರನ್ನು ಶಿಕ್ಷಿಸಿದ್ದರಿಂದ, ಅವರು ಅವನನ್ನು ಕಲ್ಲೆಸೆದು, ಕೊಂದು ಹಾಕಿದರಂತೆ.

೨) ಬಾಬೆಲ್ ದೇಶದಲ್ಲಿರುವ ಯೆಹೂದರು ಸುಖದಿಂದಿರುವಾಗ, ಬಹಳ ಮಂದಿ ತಮ್ಮ ಸ್ವಂತ ದೇಶವನ್ನು ಮರತು ಬಿಟ್ಟರು. ಆದರೆ ಭಕ್ತಿಯುಳ್ಳವರು ತಮ್ಮ ಪಿತೃಗಳ ದೇಶದ ನಿಮಿತ್ತವೂ ಪರಿಶುದ್ಧ ಪಟ್ಣದ ನಿಮಿತ್ತವೂ ಯೆಹೋವನ ಸೌಂದರ್ಯವಾದ ದೇವಾರಾಧನೆಗಳ ನಿಮಿತ್ತವೂ ಪೂರ್ಣ ಹೃದಯದಿಂದ ನಿರೀಕ್ಷಿಸುತ್ತಾ ಇದ್ದರು. ಇವರು ಗೀತವನ್ನು ಹಾಡಿದರು, ಹ್ಯಾಗಂದರೆ:—ಬಾಬೆಲಿನ ನದಿಗಳ ಹತ್ತರ, ಅಲ್ಲಿ ಕೂತು ಕೊಂಡು, ಚಿಯೋನನ್ನು ಜ್ಞಾಪಕ ಮಾಡಿ ಕೊಂಡಾಗ, ಅತ್ತೆವು. ಅದರ ನಡುವೆ ಇರುವ ನೀರ ವಂಜಿ ಮರಗಳ ಮೇಲೆ ನಮ್ಮ ಕಿನ್ನರಿಗಳನ್ನು ತೂಗಿಟ್ಟೆವು. ಯಾಕಂದರೆ ಅಲ್ಲಿ ನಮ್ಮನ್ನು ಶೆರೆ ಹಿಡಿದವರು ಹಾಡಿನ ಮಾತುಗಳನ್ನೂ, ನಮ್ಮನ್ನು ಅಳ ಮಾಡಿದವರು ಸಂತೋಷವನ್ನೂ ಕೇಳಿ ಕೊಂಡು: ಚಿಯೋನಿನ ಹಾಡುಗಳಲ್ಲಿ ಒಂದು ನಮಗೆ ಹಾಡಿರಿ, ಅಂದರು. ಅನ್ಯ ದೇಶದಲ್ಲಿ ನಾವು ಯೆಹೋವನ ಹಾಡನ್ನು ಹಾಡುವದು ಹ್ಯಾಗೆ? ಯೆರೂಸಲೇಮೇ, ನಾನು ನಿನ್ನನ್ನು ಮರೆತು ಬಿಟ್ಟರೆ, ನನ್ನ ಬಲಗೈ ಮರೆತು ಹೋಗಲಿ; ನಾನು ನಿನ್ನನ್ನು ಜ್ಞಾಪಕ ಮಾಡಿ ಕೊಳ್ಳದೆ ಯೆರೂಸಲೇಮನ್ನು ನನ್ನ ಮುಖ್ಯ ಸಂತೋಷಕ್ಕಿಂತ ಹೆಚ್ಚಿಸದಿದ್ದರೆ, ನನ್ನ ನಾಲಿಗೆಯು ನನ್ನ ಅಂಗಳಕ್ಕೆ ಹತ್ತಲಿ. (ಕೀರ್ತ. ೧೩೭.)

ಬಾ. 101. 128. 79.

---

## ೫೧. ಪ್ರವಾದಿಯಾದ ದಾನಿಯೇಲನು.

(ದಾನಿ. ೧—೮.)

೧) ಬಾಬೆಲಿನ ಅರಸನಾದ ನೆಬುಕದ್ನೇಚರನು ತನ್ನ ಖೊಜ್ಜೆಯರ ಯಜಮಾನನಿಗೆ, ಅವನು ಇಸ್ರಯೇಲನ ಮಕ್ಕಳೊಳಗಿಂದಲೂ, ಅರಸನ ಸಂತಾನದೊಳಗಿಂದಲೂ, ಸುಂದರರಾಗಿರುವಂಥ ತಿಳುವಿಕೆಯಲ್ಲಿ ಬುದ್ಧಿವಂತರಾಗಿರುವಂಥ ಯೌವನಸ್ಥರನ್ನು ತಂದು, ಕಸ್ದೀಯರ ವಿದ್ಯವನ್ನೂ ಭಾಷೆಯನ್ನೂ ಅವರಿಗೆ ಬೋಧಿಸ ಬೇಕೆಂದು ಆಜ್ಞಾಪಿಸಿದನು. ಇವರಲ್ಲಿ ದಾನಿಯೇಲನೂ, ಹನನೀಯನೂ, ಮಿಶಯೇಲನೂ, ಅಜರೀಯನೂ, ಎಂಬವರಿದ್ದರು. ಇವರಿಗೆ ಖೊಜ್ಜೆಯರ ಯಜಮಾನನು ಹೆಸರುಗಳನ್ನು ಇಟ್ಟನು, ಹ್ಯಾಗಂದರೆ: ಬೆಲ್ತಿಶಾಸರ್, ಶದ್ರಾಕ್, ಮೇಶಾಕ್, ಅಬೆದ್ನಿಗೋ, ಇವುಗಳೇ. ಮತ್ತು ಅರಸನು ತನ್ನ ಭೋಜನದಲ್ಲಿಯೂ ದ್ರಾಕ್ಷೇ ರಸದಲ್ಲಿಯೂ ದಿನ ದಿನದ ಪಾಲನ್ನು ಅವರಿಗೆ ನೇಮಿಸಿದನು. ಆದರೆ ದಾನಿಯೇಲನು ತನ್ನನ್ನು ಅದರಲ್ಲಿ ಅಶುದ್ಧ ಮಾಡಿ ಕೊಳ್ಳುವೆನೆಂದು ನೆನಸಿ, ಖೊಜ್ಜೆಯರ ಯಜಮಾನನಿಗೆ: ನಮಗೆ ಉಣ್ಣುವದಕ್ಕೆ ಫಲ್ಯಗಳನ್ನೂ, ಕುಡಿಯುವದಕ್ಕೆ ನೀರನ್ನೂ ಕೊಡಲಿ ಎಂದು ಬೇಡಿ ಕೊಂಡನು. ಅದಕ್ಕೆ ಯಜಮಾನನು: ನಾನು ಅರಸನಿಗೆ ಭಯ ಪಡುತ್ತೇನೆ; ಅವನು ಯಾಕೆ ನಿಮ್ಮ ಮುಖಗಳನ್ನು ನಿಮ್ಮ ಸ್ಥಿತಿಯ ಯೌವನಸ್ಥರಿಗಿಂತ ಕಳೆಗುಂದಿದವುಗಳಾಗಿ ನೋಡ ಬೇಕು? ಈ ಪ್ರಕಾರ ಅರಸನ ಹತ್ತರ ನನ್ನ ತಲೆಗೆ ಮೋಸ ಬರ ಮಾಡುತ್ತೀರಿ, ಅಂದನು. ಆಗ ದಾನಿಯೇಲನು ಪ್ರತ್ಯುತ್ತರವಾಗಿ: ನಿನ್ನ ಸೇವಕರನ್ನು ಹತ್ತು ದಿವಸಗಳ ವರೆಗೂ ಪರೀಕ್ಷಿಸಿ ನೋಡಪ್ಪಾ; ಆ ಮೇಲೆ ನಿನಗೆ ಕಾಣುವ ಪ್ರಕಾರ ಮಾಡು, ಅಂದನು. ಹತ್ತು ದಿವಸಗಳ ಕಡೆಯಲ್ಲಿ ಅರಸನ ಭೋಜನದ ಪಾಲನ್ನು ಉಣ್ಣುವ ಯೌವನಸ್ಥರೆಲ್ಲರಿಗಿಂತ ಅವರ ಮು

ಖಗಳು ಚನ್ನಾಗಿ ಕಾಣಿಸಿದವು. ಮತ್ತು ದೇವರು ಈ ನಾಲ್ಕು ಯೌವನಸ್ಥರಿಗೆ ಎಲ್ಲಾ ವಿದ್ಯದಲ್ಲಿಯೂ ಜ್ಞಾನದಲ್ಲಿಯೂ ತಿಳುವಿಕೆಯನ್ನು ಕೊಟ್ಟನು. ಆಗ ಅರಸನು ಅವರನ್ನು ತರ ಬೇಕೆಂಬ ಕಾಲದಲ್ಲಿ ಖೊಜ್ಜೆಯರ ಯಜಮಾನನು ಅವರನ್ನು ನೆಬುಕದ್ನೇಚರನ ಮುಂದೆ ತಂದನು. ಅರಸನು ಅವರ ಸಂಗಡ ಮಾತಾಡಿ, ಅವರನ್ನು ಪರೀಕ್ಷಿಸಿದಾಗ, ಎಲ್ಲಾ ಮಂತ್ರಗಾರರಿಗಿಂತಲೂ ಜೋತಿಷ್ಯರಿಗಿಂತಲೂ ಇವರೇ ಹತ್ತಷ್ಟು ಉತ್ತಮರೆಂದು ಕಂಡನು. ಆ ಮೇಲೆ ನೆಬುಕದ್ನೇಚರನು ಕನಸುಗಳನ್ನು ಕಂಡದರಿಂದ ಅವನ ಆತ್ಮವು ಕಳವಳಗೊಂಡು, ನಿದ್ರೆಯು ಅವನನ್ನು ಬಿಟ್ಟು ಹೋಯಿತು. ಆಗಲವನು ಮಂತ್ರಗಾರರನ್ನೂ ಜೋತಿಷ್ಯರನ್ನೂ ಕರೆಸಿ,. ಅವರಿಗೆ: ನಾನು ಕನಸನ್ನು ಕಂಡಿದ್ಧೇನೆ; ಅದನ್ನು ತಿಳಿಯುವದಕ್ಕೆ ನನ್ನ ಆತ್ಮವು ಕಳವಳಗೊಂಡಿತು. ಅವರು ಅವನಿಗೆ: ಅರಸನೇ, ನಿರಂತರ ಬಾಳು; ಕನಸನ್ನು ಹೇಳು; ಆಗ ನಾವು ಅದರ ಅಭಿಪ್ರಾಯವನ್ನು ತಿಳಿಸುವೆವು, ಅಂದರು. ಅರಸನು ಕಸ್ದೀಯರಿಗೆ ಉತ್ತರವಾಗಿ ಹೇಳಿದ್ದು: ಆ ಕಾರ್ಯವು ನನಗೆ ಮರೆತು ಹೋಯಿತು. ನೀವು ಕನಸನ್ನೂ ಅದರ ಅಭಿಪ್ರಾಯವನ್ನೂ ನನಗೆ ತಿಳಿಸದಿದ್ದರೆ, ತುಂಡು ತುಂಡಾಗಿ ಕೊಯ್ಯಲ್ಪಡುವಿರಿ. ಅವರು ಅವನಿಗೆ: ಅರಸನು ಕೇಳುವ ಕಾರ್ಯವು ಅಪರೂಪವಾದದ್ದು; ದೇವರುಗಳೇ ಹೊರ್ತು ಇನ್ಯಾರೂ ಅದನ್ನು ತಿಳಿಸಲಾರರು, ಅಂದರು. ಇದರಿಂದ ಅರಸನು ಕೋಪವುಳ್ಳವನಾಗಿ, ಬಾಬೆಲಿನಲ್ಲಿರುವ ಸಕಲ ಜ್ಞಾನಿಗಳನ್ನು ನಾಶ ಮಾಡಬೇಕೆಂದು ಆಜ್ಞಾಪಿಸಿದನು. ದಾನಿಯೇಲನು ಇದನ್ನು ಕೇಳಿದಾಗ, ತನಗೆ ಹೊತ್ತು ಕೊಡ ಬೇಕು; ಆಗ ತಾನು ಅರಸನಿಗೆ ತಿಳಿಸುವೆನೆಂದು ಅರಸನ ಹತ್ತರ ಕೇಳಿ ಕೊಂಡನು. ಆಗ ದಾನಿಯೇಲನು ತನ್ನ ಮನೆಗೆ ಹೋಗಿ, ತನ್ನ ಜತೆಗಾರರಿಗೆ ಈ ಕಾರ್ಯವನ್ನು ತಿಳಿಸಿ, ಈ ಮರ್ಮದ ವಿಷಯ ದೇವರಿಂದ ಕರುಣೆಯನ್ನು ಬೇಡಿ ಕೊಳ್ಳ ಹೇಳಿದನು. ಆಗ ಆ ಮರ್ಮವು ದಾನಿಯೇಲನಿಗೆ ದರ್ಶನದಲ್ಲಿ ಪ್ರ

ಕಟವಾಯಿತು. ಆದದರಿಂದ ದಾನಿಯೇಲನು ದೇವರನ್ನು ಸ್ತುತಿಸಿ, ಅರಸನ ಹತ್ತರ ಹೋಗಿ, ಅವನಿಗೆ ಕನಸನ್ನೂ ಅದರ ಅಭಿಪ್ರಾಯವನ್ನೂ ತಿಳಿಸಿದನು. ಆಗ ಅರಸನಾದ ನೆಬುಕದ್ನೇಚರನು ಅಡ್ಡಬಿದ್ದು, ದಾನಿಯೇಲನಿಗೆ: ನೀನು ಈ ಮರ್ಮವನ್ನು ಪ್ರಕಟ ಮಾಡ ಸಮರ್ಥನಾದದರಿಂದ, ನಿಶ್ಚಯವಾಗಿ ನಿಮ್ಮ ದೇವರು ದೇವರುಗಳ ದೇವರಾಗಿಯೂ, ಮರ್ಮಗಳನ್ನು ಪ್ರಕಟ ಮಾಡುವವನಾಗಿಯೂ ಇದ್ದಾನೆಂದು ಹೇಳಿದನು. ಮತ್ತು ದಾನಿಯೇಲನನ್ನು ದೊಡ್ಡವನಾಗ ಮಾಡಿ, ಸಮಸ್ತ ಬಾಬೆಲ್ ಶೀಮೆಗೆ ಅಧಿಕಾರಿಯಾಗಿಯೂ ಸಮಸ್ತ ಜ್ಞಾನಿಗಳಿಗೆ ಮುಖ್ಯಾಧಿಪತಿಯಾಗಿಯೂ ನೇಮಿಸಿದನು.

ಇದರ ಮೇಲೆ ನೆಬುಕದ್ನೇಚರನು ಅರ್ವತ್ತು ಮೊಳ ಎತ್ತರವಾಗಿಯೂ ಆರು ಮೊಳ ಅಗಲವಾಗಿಯೂ ಇರುವ ಒಂದು ಭಂಗಾರದ ವಿಗ್ರಹವನ್ನು ಮಾಡಿಸಿದನು. ಅದನ್ನು ಪ್ರತಿಷ್ಠೆ ಮಾಡುವಾಗ, ಅಪ್ಪಣೆಯಾದದ್ದೇನಂದರೆ:—ಪ್ರಜೆಗಳೇ, ನೀವು ಕೊಂಬು, ತಂಬೂರಿ, ಕಿನ್ನರಿ ಮೊದಲಾದ ವಾದ್ಯಗಳ ಶಬ್ದವನ್ನು ಕೇಳುವಾಗ, ಅಡ್ಡಬಿದ್ದು, ಆರಾಧಿಸ ಬೇಕು; ಯಾರು ಅಡ್ಡ ಬೀಳದೆ ಈ ವಿಗ್ರಹವನ್ನು ಆರಾಧಿಸದೆ ಇರುವನೋ, ಅವನನ್ನು ಅದೇ ಸಮಯದಲ್ಲಿ ಉರಿಯುವ ಬೆಂಕಿಯ ಭಟ್ಟಿಯ ಮಧ್ಯದಲ್ಲಿ ಹಾಕ ಬೇಕು. ಆದದರಿಂದ ಜನರೆಲ್ಲರು ವಾದ್ಯಗಳ ಶಬ್ದವನ್ನು ಕೇಳುವಾಗ, ಅಡ್ಡ ಬಿದ್ದು, ಆ ವಿಗ್ರಹವನ್ನು ಆರಾಧಿಸಿದರು. ಆದರೆ ಆ ಸಮಯದಲ್ಲಿ ಕಸ್ದೀಯರಾದ ಜನರು ಸಮೀಪಕ್ಕೆ ಬಂದು, ಅರಸನಿಗೆ ಹೇಳಿದ್ದು: ಅರಸನೇ, ನಿರಂತರ ಬಾಳು; ಇಗೋ, ಕೆಲವು ಯೆಹೂದ್ಯರು, ಅಂದರೆ ಶದ್ರಾಕ್, ಮೇಶಾಕ್, ಅಬೆದ್ನಿಗೋ, ಇವರೇ ನಿನ್ನನ್ನು ಲಕ್ಷ್ಯ ಮಾಡಲಿಲ್ಲ; ನಿನ್ನ ದೇವರುಗಳನ್ನು ಸೇವಿಸುವದಾದರೂ, ನೀನು ಇರಿಸಿದ ಭಂಗಾರದ ವಿಗ್ರಹವನ್ನು ಆರಾಧಿಸುವದಾದರೂ ಇಲ್ಲ. ಆಗ ನೆಬುಕದ್ನೇಚರನು ಬಹಳ ಕೋಪ ಉಳ್ಳವನಾಗಿ, ಅವರನ್ನು ಕರೆಸಿ,

ಅವರಿಗೆ: ನೀವು ಬೇಕೆಂದು ನನ್ನ ದೇವರುಗಳನ್ನು ಸೇವಿಸದೆ ಇದ್ದೀರೋ? ನನ್ನ ಕೈಯೊಳಗಿಂದ ನಿಮ್ಮನ್ನು ತಪ್ಪಿಸುವ ದೇವರು ಯಾರು? ಅಂದನು. ಅದಕ್ಕವರು: ನಿಶ್ಚಯವಾಗಿ ನಾವು ಸೇವಿಸುವ ನಮ್ಮ ದೇವರು ನಮ್ಮನ್ನು ಉರಿಯುವ ಬೆಂಕಿಯೊಳಗಿಂದ ತಪ್ಪಿಸ ಬಹುದು; ತಪ್ಪಿಸದಿದ್ದರೂ ನಾವು ನಿನ್ನ ದೇವರುಗಳನ್ನು ಸೇವಿಸುವದಿಲ್ಲವೆಂದು ನಿನಗೆ ತಿಳಿದಿರಲಿ, ಅಂದರು. ಆಗ ಅರಸನು ಉಗ್ರದಿಂದ ತುಂಬಿದವನಾಗಿ, ಆ ಭಟ್ಟಿಯನ್ನು ಸಾಧಾರಣವಾದ ಉರಿಗಿಂತ ಏಳಷ್ಟು ಹೆಚ್ಚಾಗಿ ಉರಿಯ ಮಾಡ ಬೇಕೆಂದು ಆಜ್ಞಾಪಿಸಿದನು. ಆಗ ಆ ಮನುಷ್ಯರನ್ನು, ತಮ್ಮ ಇಜಾರುಗಳೂ ಅಂಗಿಗಳೂ ಉಳ್ಳವರಾಗಿ, ಉರಿಯುವ ಬೆಂಕಿಯ ಭಟ್ಟಿಯಲ್ಲಿ ಹಾಕಿದರು. ಬೆಂಕಿಯ ಜ್ವಾಲೆಯು ಅವರನ್ನು ಭಟ್ಟಿಯೊಳಗೆ ಹಾಕಿದ ಮನುಷ್ಯರನ್ನು ಸಂಹರಿಸಿತು. ಆಗ ನೆಬುಕದ್ನೇಚರನು ವಿಸ್ಮಯಗೊಂಡು, ತ್ವರೆಯಾಗಿ ಎದ್ದು: ನಾವು ಮೂರು ಮನುಷ್ಯರನ್ನು ಬೆಂಕಿಯ ಮಧ್ಯದಲ್ಲಿ ಹಾಕಿದೆವಲ್ಲಾ? ಇಗೋ, ನಾನು ನಾಲ್ಕು ಮನುಷ್ಯರನ್ನು ಬಿಡುಗಡೆಯವರಾಗಿ ಬೆಂಕಿಯ ಮಧ್ಯದಲ್ಲಿ ನಡಿಯುವದನ್ನು ನೋಡುತ್ತೇನೆ, ಮತ್ತು ಅವರಿಗೆ ನಷ್ಟವಿಲ್ಲ; ಇದಲ್ಲದೆ ನಾಲ್ಕನೇಯವನ ರೂಪವು



ದೇವರ ಮಗನ ಹಾಗಿದೆ, ಅಂದನು. ಮತ್ತು ಅವನು ಭಟ್ಟಿಯ ಬಾಯಿಯ ಸವಿಾಪಕ್ಕೆ ಬಂದು, ಹೇಳಿದ್ದೇನಂದರೆ:—ಮಹೋನ್ನತ ದೇವರ ಸೇವಕರೇ, ಹೊರಗೆ ಬನ್ನಿ. ಆಗಲವರು ಬೆಂಕಿಯೊಳಗಿಂದ ಹೊರಗೆ ಬಂದರು. ಆಗ ಪ್ರಭುಗಳೂ ಅಧಿಪತಿಗಳೂ ಕೂಡಿ ಕೊಂಡು, ಅವರ ಶರೀರಗಳ ಮೇಲೆ ಬೆಂಕಿಗೆ ಬಲವಿಲ್ಲದಂಥ, ಅವರ ತಲೆಯ ಕೂದಲುಗಳಲ್ಲಿ ಒಂದಾದರೂ ಸುಡದಂಥ, ಅವರ ಅಂಗಿಗಳು ಬೇರೆಯಾಗದಂಥ, ಬೆಂಕಿಯ ವಾಸನೆ ಸಹ ಅವರ ಮೇಲೆ ದಾಟದಂಥ ಅವರನ್ನು ಕಂಡರು. ಆಗ ಅರಸನು ಹೇಳಿದ್ದೇನಂದರೆ:—ತನ್ನ ದೂತನನ್ನು ಕಳುಹಿಸಿ, ತನ್ನಲ್ಲಿ ನಂಬಿಕೆ ಇಟ್ಟಂಥ ತನ್ನ ಸೇವಕರನ್ನು ರಕ್ಷಿಸಿದ ದೇವರಿಗೆ ಸ್ತುತಿ ಇರಲಿ. ಮತ್ತು ಶದ್ರಾಕ್, ಮೇಶಾಕ್, ಅಬೆದ್ನಿಗೋವರ ದೇವರಿಗೆ ವಿರೋಧವಾಗಿ ಧೂಷಣೆ ಹೇಳುವವರನ್ನು ತುಂಡು ತುಂಡಾಗಿ ಮಾಡ ಬೇಕು; ಯಾಕಂದರೆ ಈ ವಿಧವಾಗಿ ರಕ್ಷಿಸುವ ದೇವರು ಇನ್ಯಾರೂ ಇಲ್ಲ. ಮತ್ತು ಅರಸನು ಈ ಮೂವರನ್ನು ಬಾಬೆಲಿನ ಶೀಮೆಯಲ್ಲಿ ಹೆಚ್ಚಿಸಿದನು.

೨) ನೆಬುಕದ್ನೇಚರನು ಸತ್ತ ಮೇಲೆ, ಬೆಲ್ಶಾಸರನು ಪಟ್ಟ ಹೊಂದಿದನು. ಒಂದು ದಿವಸ ಇವನು ತನ್ನ ಪ್ರಭುಗಳಲ್ಲಿ ಸಾವಿರ ಮಂದಿಗೆ ದೊಡ್ಡ ಔತಣವನ್ನು ಮಾಡಿಸಿದನು. ದಾಕ್ಷೇ ರಸವನ್ನು ರುಚಿ ನೋಡುತ್ತಿರುವಾಗ, ಬೆಲ್ಶಾಸರನು ತನ್ನ ತಂದೆಯಾದ ನೆಬುಕದ್ನೇಚರನು ಯೆರೂಸಲೇಮಿನ ದೇವಾಲಯದೊಳಗಿಂದ ತೆಗದ ಬೆಳ್ಳಿ ಭಂಗಾರದ ಪಾತ್ರೆಗಳನ್ನು ತರಲಾಜ್ಞಾಪಿಸಿದನು. ಆಗಲವರು ಅವುಗಳಲ್ಲಿ ಕುಡಿದು, ಭಂಗಾರ, ಬೆಳ್ಳಿ, ಹಿತ್ತಾಳಿ, ಕಬ್ಬಿಣ, ಮರ, ಕಲ್ಲುಗಳ ದೇವರುಗಳನ್ನು ಸ್ತುತಿಸಿದರು. ಅದೇ ಘಳಿಗೆಯಲ್ಲಿ ಮನುಷ್ಯನ ಕೈ ಬೆರಳುಗಳು, ದೀಪಸ್ತಂಭಕ್ಕೆ ಎದುರಾಗಿ, ಅರಮನೆಯ ಗೋಡೆಯ ಸುಣ್ಣದಲ್ಲಿ ಬರೆದವು; ಮತ್ತು ಅರಸನು ಆ ಬರಿಯುವ ಕೈಯ ಭಾಗವನ್ನು ನೋಡಿದನು. ಆಗಲರಸನ ಮುಖವು ಕಳೆಗುಂದಿ, ಅವನ ನಡುವಿನ ಕೀಲುಗಳು ಸಡ್ಲಾಗಿ, ಅವನ ಮೊಣಕಾಲುಗಳು ಒಂದಕ್ಕೊಂದು



ಬಡ ಕೊಂಡವು. ಜೋತಿಷ್ಯರನ್ನೂ ಲಕ್ಷಣೀಕರನ್ನು ಕರಿಸ ಬೇಕೆಂದು ಅರಸನು ಘಟ್ಟಿಯಾಗಿ ಕೂಗಿದನು. ಆದರೆ ಆ ಬರಹವನ್ನು ಓದಲೂ ಅದರ ಅಭಿಪ್ರಾಯವನ್ನು ಅರಸನಿಗೆ ತಿಳಿಸಲೂ ಅವರಿಂದಲಾಗದೆ ಹೋಯಿತು. ಆಗ ಅರಸನು ಹೆಚ್ಚಾಗಿ ಕಳವಳ ಪಡುತ್ತಿರಲಾಗಿ, ರಾಣಿಯು (ಅಂದರೆ ಅರಸನ ತಾಯಿಯು) ಬಂದು, ಅವನಿಗೆ: ನಿನ್ನ ರಾಜ್ಯದಲ್ಲಿ ಪರಿಶುದ್ಧ ದೇವರುಗಳ ಆತ್ಮವುಳ್ಳ ಒಬ್ಬ ಮನುಷ್ಯನು ಇದ್ದಾನೆ; ನಿನ್ನ ತಂದೆಯು ಅವನನ್ನು ಮಂತ್ರಗಾರರಿಗೂ ಜೋತಿಷ್ಯರಿಗೂ ಮುಖ್ಯಸ್ಥನಾಗಿ ಇಟ್ಟನು; ಅವನು ಅಭಿಪ್ರಾಯವನ್ನು ತಿಳಿಸುವನು, ಅಂದಳು. ಆಗ ದಾನಿಯೇಲನನ್ನು ಅರಸನ ಮುಂದೆ ಕರೆದರು. ಅರಸನು ಅವನಿಗೆ ಹೇಳಿದ್ದೇನಂದರೆ:—ಈ ಬರಹವನ್ನು ಓದಿ, ಅದರ ಅಭಿಪ್ರಾಯವನ್ನು ನನಗೆ ತಿಳಿಸುವದು ನಿನ್ನಿಂದಾದರೆ, ನೀನು ರಕ್ತಾಂಬರವನ್ನು ಧರಿಸಿ ಕೊಂಡು, ಕೊರಳಿಗೆ ಚಿನ್ನದ ಕಂಠಿಯನ್ನು ಹಾಕಿ ಕೊಂಡು, ರಾಜ್ಯದಲ್ಲಿ ಮೂರನೇ ಅಧಿಕಾರಿಯಾಗುವಿ. ಅದಕ್ಕೆ ದಾನಿಯೇಲನು ಪ್ರತ್ಯುತ್ತರವಾಗಿ: ನಿನ್ನ ದಾನಗಳು ನಿನಗಿರಲಿ; ನಿನ್ನ ಬಹುಮಾನಗಳನ್ನು ಮತ್ತೊಬ್ಬನಿಗೆ ಕೊಡು; ಆದರೆ ನಾನು ಬರಹವನ್ನು ಅರಸನಿಗೆ ಓದಿ, ಅಭಿಪ್ರಾಯವನ್ನು ತಿಳಿಸುವೆನು. ನಿನ್ನ ತಂದೆಯಾದ ನೆಬುಕದ್ನೇಚರನಿಗೆ ಆದದ್ದೆಲ್ಲಾ ನಿನಗೆ ತಿಳಿದಿದ್ದರೂ, ನಿನ್ನ ಹೃದಯವನ್ನು ನೀನು ತಗ್ಗಿಸದೆ, ಪರಲೋ

ಕದ ಕರ್ತನಿಗೆ ವಿರೋಧವಾಗಿ ನಿನ್ನನ್ನು ಎತ್ತಿದ್ದೀ; ಅವನ ಮನೆಯ ಪಾತ್ರೆಗಳನ್ನು ನಿನ್ನ ಮುಂದೆ ತರಿಸಿ, ಅವುಗಳಲ್ಲಿ ದಾಕ್ಷೇ ರಸವನ್ನು ಕುಡಿದು, ನೋಡದೆ ಕೇಳದೆ ಅರಿಯದೆ ಇರುವಂಥ ದೇವರುಗಳನ್ನು ಸ್ತುತಿಸಿದಿ; ಆದರೆ ನಿನ್ನ ಶ್ವಾಸವು ಯಾರ ಕೈಯಲ್ಲಿ ಉಂಟೋ, ಆ ದೇವರನ್ನು ನೀನು ಮಹಿಮೆ ಪಡಿಸಲಿಲ್ಲ. ಆಗ ಆ ಕೈ ಅವನ ಕಡೆಯಿಂದ ಕಳುಹಿಸಲ್ಪಟ್ಟಿತು; ಮತ್ತು ಈ ಬರಹವು ಬರೆಯಲ್ಪಟ್ಟಿತು. ಆ ಬರಹವು ಇದೇ: ಮೆನೇ ಮೆನೇ ತೇಕೆಲ್ ಉಫಾರ್ಸಿನ್, (ಅಂದರೆ: ಲೆಖ್ಖಿಸಲ್ಪಟ್ಟದ್ದು, ಲೆಖ್ಖಿಸಲ್ಪಟ್ಟದ್ದು; ತೂಗಲ್ಪಟ್ಟದ್ದು, ವಿಭಾಗಿಸಲ್ಪಟ್ಟದ್ದು.) ಮೆನೇ ಅಂದರೆ: ದೇವರು ನಿನ್ನ ರಾಜ್ಯವನ್ನು ಲೆಖ್ಖಿಸಿ ಮುಗಿಸಿದ್ದಾನೆ; ತೇಕೆಲ್ ಅಂದರೆ: ನೀನು ತ್ರಾಸಿನಲ್ಲಿ ತೂಗಲ್ಪಟ್ಟು, ಕಡಿಮೆಯಾಗಿ ತೋರುತ್ತೀ; ಫೇರೆಸ್ ಅಂದರೆ: ನಿನ್ನ ರಾಜ್ಯವು ವಿಭಾಗವಾಗಿ, ಮೇದ್ಯರಿಗೂ ಪಾರ್ಶಿಯರಿಗೂ ಕೊಡಲ್ಪಟ್ಟದೆ. ಆಗ ಬೆಲ್ಶಾಸರನ ಅಪ್ಪಣೆಯಿಂದ ದಾನಿಯೇಲನನ್ನು ರಕ್ತಾಂಬರದಿಂದ ಧರಿಸಿ, ಅವನ ಕೊರಳಿಗೆ ಚಿನ್ನದ ಕಂಠಿಯನ್ನು ಹಾಕಿ, ಅವನು ರಾಜ್ಯದಲ್ಲಿ ಮೂರನೇ ಅಧಿಕಾರಿಯಾಗಿರ ಬೇಕೆಂದು ಸಾರಿದರು. ಆದರೆ ಅದೇ ರಾತ್ರಿಯಲ್ಲಿ ಕಸ್ದೀಯರ ಅರಸನಾದ ಬೇಲ್ಶಾಸರನು ಮಡಿದನು. ಮತ್ತು ಮೇದ್ಯನಾದ ದರೀಯನು ರಾಜ್ಯವನ್ನು ತೆಗದು ಕೊಂಡನು.

೩) ದರೀಯನು ರಾಜ್ಯದ ಮೇಲೆ ನೂರ ಇಪ್ಪತ್ತು ಪ್ರಭುಗಳನ್ನೂ ಇವರ ಮೇಲೆ ಮೂರು ಮುಖ್ಯಸ್ಥರನ್ನೂ ಇರಿಸಿದನು. ಇವರಲ್ಲಿ ದಾನಿಯೇಲನು ಮೊದಲನೇಯವನಾಗಿದ್ದನು. ಅರಸನು ಅವನನ್ನು ಸಮಸ್ತ ರಾಜ್ಯದ ಮೇಲೆ ನೇಮಿಸ ಮನಸ್ಸಾಗಿದ್ದನು. ಆಗ ಮುಖ್ಯಸ್ಥರೂ ಪ್ರಭುಗಳೂ ಅವನಿಗೆ ವಿರೋಧವಾಗಿ ನಿಮಿತ್ತವನ್ನು ಹುಡುಕಿದರು; ಆದರೆ ಅವನು ನಂಬಿಕೆಯುಳ್ಳವನಾಗಿದ್ದದರಿಂದ, ಅವರಿಗೆ ತಪ್ಪು ಶಿಕ್ಕಲಿಲ್ಲ. ಆಗಲವರು ಅಂದು ಕೊಂಡದ್ದೇನಂದರೆ:— ಈ ದಾನಿಯೇಲನಿಗೆ ವಿರೋಧವಾಗಿ ಅವನ ದೇವರ ನ್ಯಾಯಪ್ರಮಾ

ಣದ ವಿಷಯವಾಗಿ ನಿಮಿತ್ತ ಶಿಕ್ಕುವದೇ ಹೊರ್ತು, ನಮಗೆ ಇನ್ನೇನು ಶಿಕ್ಕುವದಿಲ್ಲ. ಆಗಲವರು: ಯಾರಾದರೂ ಮೂವತ್ತು ದಿವಸಗಳ ವರೆಗೂ ಅರಸನಿಗೆ ಹೊರ್ತಾಗಿ, ಮತ್ತ್ಯಾವ ದೇವರಿಗಾದರೂ ಮನುಷ್ಯರಿಗಾದರೂ ವಿಜ್ಞಾಪನೆ ಮಾಡಿದರೆ, ಅಂಥವನನ್ನು ಸಿಂಹಗಳ ಗವಿಯಲ್ಲಿ ಹಾಕ ಬೇಕೆಂಬ ರಾಜಾಜ್ಞೆಯನ್ನು ಅರಸನು ಕೊಡ ಬೇಕೆಂದು ಅವನನ್ನು ಬಲವಂತ ಮಾಡಿದರು. ದಾನಿಯೇಲನು ಇದನ್ನು ತಿಳು ಕೊಂಡು, ತನ್ನ ಕೊಠಡಿಯಲ್ಲಿ ಕಿಟಕಿಗಳು ಯೆರೂಸಲೇಮಿಗೆ ಎದುರಾಗಿ ತೆರೆದಿರಲಾಗಿ, ಅವನು ಮುಂಚೆ ಮಾಡಿದ ಪ್ರಕಾರವೇ ದಿನಕ್ಕೆ ಮೂರು ಸಾರಿ ಮೊಣಕಾಲೂರಿ, ತನ್ನ ದೇವರ ಸನ್ನಿಧಿಯಲ್ಲಿ ಪ್ರಾರ್ಥನೆ ಮಾಡಿದನು. ಆಗ ಈ ಮನುಷ್ಯರು ಕೂಡಿ ಬಂದು, ದಾನಿಯೇಲನು ಪ್ರಾರ್ಥನೆ ಮಾಡುವದನ್ನು ಕಂಡು, ಅರಸನ ಬಳಿಗೆ ಹೋಗಿ, ದಾನಿಯೇಲನ ಮೇಲೆ ದೂರು ಹೇಳಿದರು. ಅರಸನು ಇದನ್ನು ಕೇಳಿದಾಗ, ತನ್ನಲ್ಲಿ ಬಹಳ ವ್ಯಸನ ಪಟ್ಟು, ಅವನನ್ನು ತಪ್ಪಿಸ ಪ್ರಯತ್ನ ಮಾಡುತ್ತಿದ್ದನು. ಆಗಲಾ ಮನುಷ್ಯರು ಅರಸನಿಗೆ ಹೇಳಿದ್ದೇನಂದರೆ:—ಅರಸನು ಸ್ಥಿರ ಪಡಿಸಿರುವ ಯಾವ ನಿರ್ಣಯವಾಧರೂ ಆಜ್ಞೆಯಾದರೂ ಬದಲು ಮಾಡ ಕೂಡದೆಂದು ಮೇದ್ಯ ಪಾರ್ಶಿಯರ ನ್ಯಾಯಪ್ರಮಾಣ ಉಂಟೆಂದು, ಅರಸನೇ, ನಿನಗೆ ತಿಳಿದಿರಲಿ. ಹೀಗಿರಲಾಗಿ, ಅರಸನು ಆಜ್ಞಾಪಿಸಿದ ಹಾಗೆ, ದಾನಿಯೇಲನನ್ನು ಸಿಂಹಗಳ ಗವಿಯಲ್ಲಿ ಹಾಕಿದರು. ಆದರೆ ಅರಸನು ದಾನಿಯೇಲನಿಗೆ: ನೀನು ಯಾವಾಗಲೂ ಸೇವಿಸುವ ನಿನ್ನ ದೇವರು ನಿನ್ನನ್ನು ರಕ್ಷಿಸುವನು ಎಂದು ಹೇಳಿದನು. ಅರಸನು ಉಪವಾಸದಿಂದಲೇ ರಾತ್ರಿಯನ್ನು ಕಳೆದನು. ಅರುಣೋದಯದಲ್ಲಿ ಅವನು ಎದ್ದು, ತ್ವರೆಯಾಗಿ ಸಿಂಹಗಳ ಗವಿಗೆ ಹೋಗಿ, ದುಃಖದ ಶಬ್ದದಿಂದ ಕೂಗಿ, ಹೇಳಿದ್ದೇನಂದರೆ:—ಜೀವವುಳ್ಳ ದೇವರ ಸೇವಕನಾದ ದಾನಿಯೇಲನೇ, ನೀನು ಯಾವಾಗಲೂ ಸೇವಿಸುವ ನಿನ್ನ ದೇವರು ನಿನ್ನನ್ನು ಸಿಂಹಗಳಿಗೆ ತಪ್ಪಿಸ ಸಮರ್ಥನಾಗಿದ್ಧಾನೋ? ಆಗ ದಾನಿ



ಯೇಲನು: ನನ್ನ ದೇವರು ತನ್ನ ದೂತನನ್ನು ಕಳುಹಿಸಿ, ನನಗೆ ನಷ್ಟ ಮಾಡದ ಹಾಗೆ ಸಿಂಹಗಳ ಬಾಯಿಯನ್ನು ಮುಚ್ಚಿದ್ದಾನೆ, ಅಂದನು. ಆಗ ಅರಸನು ಅತಿ ಸಂತೋಷ ಪಟ್ಟು, ದಾನಿಯೇಲನನ್ನು ಎತ್ತ ಬೇಕೆಂದು ಅಪ್ಪಣೆ ಕೊಟ್ಟನು. ಮತ್ತು ಅವನ ಮೇಲೆ ತಪ್ಪು ಹೊರಿಸ ಬೇಕೆಂದು ಇದ್ದ ಮನುಷ್ಯರನ್ನು ಗವಿಯಲ್ಲಿ ಹಾಕಿಸಿದನು. ಅವರು ಗವಿಯ ನೆಲವನ್ನು ಮುಟ್ಟುವದಕ್ಕಿಂತ ಮುಂಚೆ ಸಿಂಹಗಳು ಹಾರಿ ಬಂದು, ಅವರ ಎಲುವುಗಳನ್ನೆಲ್ಲಾ ಮುರಿದು ಬಿಟ್ಟವು.

ತರುವಾಯ ಅರಸನಾದ ದರೀಯನು ತನ್ನ ಪ್ರಜೆಗಳಿಗೆ ಬರೆದದ್ದೇನಂದರೆ:—ನನ್ನ ರಾಜ್ಯದ ಪ್ರತಿ ಧೊರೆತನದಲ್ಲಿರುವ ಮನುಷ್ಯರು ದಾನಿಯೇಲನ ದೇವರ ಮುಂದೆ ನಡುಗಿ, ಹೆದರ ಬೇಕು; ಯಾಕಂದರೆ ಅವನು ಜೀವವುಳ್ಳ ದೇವರು; ಅವನ ರಾಜ್ಯವು ನಾಶವಾಗದು; ಅವನೇ ರಕ್ಷಿಸಿ, ತಪ್ಪಿಸುತ್ತಾನೆ; ಅವನೇ ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಗುರ್ತುಗಳನ್ನೂ ಅದ್ಭುತಗಳನ್ನೂ ನಡಿಸು

ತ್ತಾನೆ. ಹೀಗೆ ದಾನಿಯೇಲನು ದರೀಯನ ಆಳ್ವಿಕೆಯಲ್ಲಿಯೂ ಕೊರೇಷನ ಆಳ್ವಿಕೆಯಲ್ಲಿಯೂ ಪ್ರವರ್ತಿಸಿದನು.

II. 13. 47. III. 32. 50.

---

## ೫೨. ಇಸ್ರಯೇಲ್ ಜನರು ಶೆರೆಯಿಂದ ತಿರಿಗಿ ಬಂದು, ಯೆರೂಸಲೇಮನ್ನು ಪುನಃಸ್ಥಾಪಿಸಿದ್ದು.

(ಎಜ್ರನು. ೧—೬.)

(ಕ್ರಿಸ್ತನ ಜನ್ಮದ ಮುಂಚೆ ೫೩೩—೪೪೦.)

೧) ಕೊರೇಷನ ಮೊದಲನೇ ವರುಷದಲ್ಲಿ (ಯೆರೆಮೀಯನು ಹೇಳಿದ ಶೆರೆಯ ಎಪ್ಪತ್ತು ವರುಷಗಳು ಮುಗಿದ ಮೇಲೆ) ಯೆಹೋವನು ಅವನ ಆತ್ಮವನ್ನು ಎಬ್ಬಿಸಿದ್ದರಿಂದ, ಅವನು ತನ್ನ ರಾಜ್ಯದಲ್ಲಿ ಎಲ್ಲೆಲ್ಲಿಯೂ ಸಾರಿಸಿ, ಹೇಳಿದ್ದೇನಂದರೆ:—ಆಕಾಶಲೋಕದ ದೇವರಾಗಿರುವ ಯೆಹೋವನು ಭೂಮಿಯ ರಾಜ್ಯಗಳನ್ನೆಲ್ಲಾ ನನಗೆ ಕೊಟ್ಟಿದ್ದಾನೆ; ಮತ್ತು ಯೆರೂಸಲೇಮಿನಲ್ಲಿ ತನಗೆ ಮನೆಯನ್ನು ಕಟ್ಟಿಸ ನನಗೆ ಆಜ್ಞಾಪಿಸಿದ್ದಾನೆ. ಅವನ ಜನರಾದ ನಿಮ್ಮಲ್ಲಿರುವವನ್ಯಾವನೋ, ಅವನು ಯೆರೂಸಲೇಮಿಗೆ ಏರಿ ಹೋಗಿ, ಇಸ್ರಯೇಲಿನ ದೇವರಾದ ಯೆಹೋವನ ಮನೆಯನ್ನು ಕಟ್ಟಲಿ. ಆಗ ಯೆಹೋವನ ಮನೆಯನ್ನು ಕಟ್ಟಲಿಕ್ಕೆ ಹೋಗ ಯೆಹೋವನಿಂದ ಎಬ್ಬಿಸಲ್ಪಟ್ಟವರೆಲ್ಲರೂ ಎದ್ದರು. ಇದಲ್ಲದೆ ನೆಬುಕದ್ನೇಚರನು ತಂದಂಥ ಯೆಹೋವನ ಮನೆಯ ಸಾಮಾನುಗಳನ್ನು ಕೊರೇಷನು ತರಿಸಿ, ತಿರಿಗಿ ಕೊಟ್ಟನು. ಬೆಳ್ಳಿ ಭಂಗಾರ ಸಾಮಾನುಗಳೆಲ್ಲಾ ಐದು ಸಾವಿರದ ನಾನೂರು ಆಗಿದ್ದವು. ಯೆರೂಸಲೇಮಿಗೆ ತಿರಿಗಿ ಬಂದ ಜನರು, ಚಾಕ್ರಿಯವರು ಹೊರ್ತಾಗಿ, ೪೨೦೦೦ ಮಂದಿ ಆಗಿದ್ದರು. ಇವರು ಯೆಹೂದ ಮತ್ತು ಬೆನ್ಯಮೀನ್ ಕುಲದವರು ಮಾತ್ರ (ಹತ್ತು ಕುಲದ ರಾಜ್ಯದವರಿಗೆ

ತಿರುಗಲಿಕ್ಕೆ ಮನಸ್ಸು ಇರಲಿಲ್ಲ.) ದಾವೀದನ ಮನೆಯವನಾದ ಜೆರು ಬಾಬೆಲನೂ, ಪ್ರಧಾನ ಯಾಜಕನಾದ ಯೆಶೂವನೂ ಅವರನ್ನು ಕರ ಕೊಂಡು ಬಂದರು. ಯೆರೂಸಲೇಮಿಗೆ ಬಂದ ಮೇಲೆ ಅವರು ಬ ಲಿಪೀಠವನ್ನು ಕಟ್ಟಿ, ಯೆಹೋವನಿಗೆ ಹೋಮಗಳನ್ನು ಅರ್ಪಿಸಿ, ಪ ರ್ಣಶಾಲೆಗಳ ಹಬ್ಬವನ್ನು ಆಚರಿಸಿದರು. ಮತ್ತು ಕಟ್ಟುವವರು ಯೆ ಹೋವನ ಮಂದಿರಕ್ಕೆ ಅಸ್ತಿವಾರ ಹಾಕುವಾಗ, ಯೆಹೋವನನ್ನು ಸ್ತುತಿಸುವದಕ್ಕೆ ಯಾಜಕರು ತುತೂರಿಗಳನ್ನು ಊದಿದರು. ಇದಲ್ಲ ದೆ ಜನರೆಲ್ಲರು ಮಹಾ ಧ್ವನಿಯಿಂದ ಆರ್ಭಟಿಸಿದರು. ಆದರೆ ಮೊ ದಲಿನ ಮನೆಯನ್ನು ನೋಡಿದ್ದ ಮುದುಕರಾದ ಯಾಜಕರಲ್ಲಿಯೂ ಲೇವಿಯರಲ್ಲಿಯೂ ಅನೇಕರು ಈ ಮನೆಯ ಅಸ್ತಿವಾರವನ್ನು ನೋ ಡಿದಾಗ, ದೊಡ್ಡ ಶಬ್ದದಿಂದ ಅತ್ತರು; ಮತ್ತು ಅನೇಕರು ಸಂತೋ ಷದಿಂದ ಶಬ್ದವನ್ನೆತ್ತಿ, ಆರ್ಭಟಿಸಿದರು. ಆದ ಕಾರಣ ಸಂತೋಷದಿಂ ದ ಆರ್ಭಟಿಸಿದ ಶಬ್ದ ಯಾವದೋ, ಜನರ ಅಳುವಿಕೆಯ ಶಬ್ದ ಯಾ ವದೋ ಎಂದು ಜನವು ತಿಳಿಯ ಕೂಡದೆ ಇತ್ತು.

ಯೆಹೂದ್ಯರು ತಿರಿಗಿ ಬಂದು ದೇವಾಲಯವನ್ನು ಕಟ್ಟುತ್ತಾ ರೆಂದು, ಸಮಾರ್ಯದ ಪಟ್ಟಣಗಳಲ್ಲಿ ವಾಸಿಸುವ ಶತ್ರುಗಳು ಕೇಳಿದಾಗ, ಅವರು ಜೆರುಬಾಬೆಲನ ಬಳಿಗೆ ಬಂದು, ಅವನಿಗೆ ಹೇಳಿದ್ದೇನಂದರೆ:— ನಾವು ನಿಮ್ಮ ಕೂಡ ಕಟ್ಟುತ್ತೇವೆ; ಯಾಕಂದರೆ ನಾವು ನಿಮ್ಮ ಹಾಗೆ ಯೇ ನಿಮ್ಮ ದೇವರನ್ನು ಹುಡುಕುತ್ತೇವೆ. ಆದರೆ ಯೆಹೂದ್ಯರು ಬೇ ಡೆಂದು ಹೇಳಿ, ಅವರು ದೇವರ ಮನೆಯನ್ನು ಕಟ್ಟಗೊಡಿಸಲಿಲ್ಲ. ಅ ದು ಕಾರಣ ಆ ಸಮಾರ್ಯದವರು ಯೆಹೂದ್ಯರಿಗೆ ವಿರೋಧವಾಗಿ ಅರಸನಿಗೆ ದೂರು ಕಾಗದವನ್ನು ಬರದರು. ಹೀಗೆ ದೇವರ ಮನೆಯ ಕೆಲಸವು ನಿಂತು ಹೋಯಿತು. ಕೆಲವು ಸಮಯದ ಮೇಲೆ ಪಾರ್ಶಿಯ ಅರಸನಾದ ದಾರ್ಯವೇಷನು ತಿರಿಗಿ ಕಟ್ಟಲಿಕ್ಕೆ ಅಪ್ಪಣೆ ಕೊಡಲು, ಜೆರುಬಾಬೆಲನೂ ಯೆಶೂವನೂ ಎದ್ದು, ಯೆಹೋವನ ಮನೆಯನ್ನು ಕಟ್ಟಿಸ ಪ್ರಾರಂಭಿಸಿದರು. ಪ್ರವಾದಿಗಳಾದ ಹಗ್ಗಾಯನೂ ಜೆಕರೀ



ಯನೂ ಅವರ ಸಂಗಡ ಇದ್ದು, ಅವರನ್ನು ಬಲ ಪಡಿಸಿದರು. ಹೀಗೆ ಆ ಮನೆಯು ಕಟ್ಟಿ ತೀರಿಸಿದರು. ಆ ಮೇಲೆ ಅವರು ಅದನ್ನು ಸಂತೋಷದಿಂದ ಪ್ರತಿಷ್ಠೆ ಮಾಡಿದರು.

೨) ಈ ಕಾರ್ಯಗಳಾದ ತರುವಾಯ, ಅರಸನಾದ ಆರ್ತಷಷ್ಟನು ಆಳುವಾಗ, ಎಜ್ರನು ಯೆರೂಸಲೇಮಿಗೆ ಏರಿ ಬಂದನು. ಅವನು ಮೋಶೆಯ ನ್ಯಾಯಪ್ರಮಾಣದಲ್ಲಿ ಘಟ್ಟಿಗನಾಗಿರುವ ಶಾಸ್ತ್ರಿಯಾಗಿದ್ದನು. ಅವನ ಸಂಗಡ ಕೆಲವು ಮಂದಿ ಯಾಜಕರೂ ವಾದ್ಯದವರೂ ಬಂದರು. ಯಾಕಂದರೆ ಯೆಹೋವನ ನ್ಯಾಯಪ್ರಮಾಣವನ್ನು ವಿಚಾರಿಸಿ ಕೊಂಡು, ಇಸ್ರಯೇಲಿನಲ್ಲಿ ನೀತಿನ್ಯಾಯವನ್ನು ನಡಿಸಿ, ಅದನ್ನು ಕಲಿಸ ಬೇಕೆಂದು, ಎಜ್ರನು ತನ್ನ ಹೃದಯದಲ್ಲಿ ಇಟ್ಟು ಕೊಂಡನು. ಅರಸನು ಅವರಿಗೆ ಬೆಳ್ಳಿಯನ್ನೂ ಭಂಗಾರವನ್ನೂ ಕೊಟ್ಟನು. ಆ ಸಮಯದಲ್ಲಿ ಯೆಹೂದ್ಯರು ಅನ್ಯ ಜನಾಂಗಗಳ ಕುಮಾರ್ತೆಗಳನ್ನು ಮದುವೆ ಮಾಡಿ ಕೊಂಡಿದ್ದರು. ಆಗ ಎಜ್ರನು ಇಸ್ರಯೇಲಿನ ದೇವರ ಮಾತುಗಳಿಗೆ ಹೆದರಿ ಕೊಂಡಿದ್ದವರೆಲ್ಲರನ್ನು ಕೂಡಿಸಿ, ಅವರಿಗೆ: ಅನ್ಯ ಜನಾಂಗಗಳ ಕುಮಾರ್ತೆಗಳನ್ನು ನೀವು ಮದುವೆ ಮಾಡಿ ಕೊಂಡದರಲ್ಲಿ ತಪ್ಪು ಮಾಡಿ, ಇ

ಸ್ರಯೇಲಿನ ಅಪರಾಧವನ್ನು ಅಧಿಕ ಮಾಡಿದ್ದೀರಿ; ಆದ ಕಾರಣ ನೀವು ನಿಮ್ಮ ಪಿತೃಗಳ ದೇವರಾಗಿರುವ ಯೆಹೋವನ ಮುಂದೆ ಅರಿಕೆ ಮಾಡಿ, ಈ ದೇಶದ ಜನರಿಂದಲೂ ಅನ್ಯ ಸ್ತ್ರೀಯರಿಂದಲೂ ನಿಮ್ಮನ್ನು ಪ್ರತ್ಯೇಕಿಸಿ ಕೊಳ್ಳಿರಿ, ಅಂದನು. ಆಗ ಕೂಟವೆಲ್ಲಾ: ನೀನು ಹೇಳಿದ ಪ್ರಕಾರವೇ ನಾವು ಮಾಡ ಬೇಕು, ಅಂದರು.

೩) ನೆಹೆಮಿಾಯನು ಅರಸನಾದ ಆರ್ತಷಷ್ಟನ ಹತ್ತರ ಪಾನ ಕೊಡುವ ಚಾಕರಿಯನ್ನು ಮಾಡುತ್ತಿರುವಾಗ, ಯೆಹೂದ ದೇಶದಿಂದ ಕೆಲವು ಮಂದಿ ಬಂದು, ಅವನಿಗೆ: ಶೆರೆಯನ್ನು ಬಿಟ್ಟ ಉಳಿದವರು ಆ ಸೀಮೆಯಲ್ಲಿದ್ದು, ಮಹಾ ಕೇಡನ್ನೂ ನಿಂದೆಯನ್ನೂ ಅನುಭವಿಸುತ್ತಾರೆ; ಇದಲ್ಲದೆ ಯೆರೂಸಲೇಮಿನ ಗೋಡೆಯು ಒಡೆದು ಹೋಯಿತು; ಅದರ ಬಾಗಲುಗಳು ಬೆಂಕಿಯಿಂದ ಸುಟ್ಟು ಹೋಗಿರುತ್ತವೆ ಎಂದು ಹೇಳಿದರು. ನೆಹೆಮಿಾಯನು ಇದನ್ನು ಕೇಳಿ, ಅತ್ತು, ದುಃಖ ಪಟ್ಟು, ದೇವರ ಸಮುಖದಲ್ಲಿ ಪ್ರಾರ್ಥನೆ ಮಾಡಿದನು. ಆದ ಕಾರಣ ಅರಸನು ಅವನಿಗೆ: ನಿನಗೆ ರೋಗವಿಲ್ಲದೆ ನಿನ್ನ ಮುಖವು ದುಃಖವಾಗಿರುವದೇನು? ಎಂದು ಕೇಳಿದನು. ಅದಕ್ಕೆ ಅವನು: ನನ್ನ ತಂದೆಗಳ ಸಮಾಧಿಗಳಿರುವ ಪಟ್ಣವು ಹಾಳಾಗಿದ್ದದರಿಂದ, ನನ್ನ ಮುಖವು ದುಃಖವಿಲ್ಲದೆ ಇರುವದು ಹ್ಯಾಗೆ? ಅಂದನು. ಅದಕ್ಕೆ ಅರಸನು: ನೀನು ಕೇಳುವದೇನು? ಅಂದಾಗ, ನೆಹೆಮಿಾಯನು: ನನಗೆ ನಿನ್ನ ಮುಂದೆ ದಯ ದೊರಕಿದರೆ, ನೀನು ನನ್ನನ್ನು, ನನ್ನ ತಂದೆಗಳ ಪಟ್ಣವನ್ನು ಕಟ್ಟಿಸುವದಕ್ಕಾಗಿ, ಯೆಹೂದಕ್ಕೆ ಕಳುಹಿಸ ಬೇಕು, ಅಂದನು. ಹೀಗೆ ಅರಸನು ಅವನನ್ನು ಕಳುಹಿಸಿದನು. ಅವನು ಯೆರೂಸಲೇಮಿಗೆ ಬಂದು, ಗೋಡೆಗಳನ್ನು ಕಟ್ಟಿಸ ಆರಂಭಿಸಿದನು. ಆದರೆ ಸಮಾರ್ಯದವರ ಅಧಿಪತಿಯಾದ ಸನ್ಬಲ್ಲಾಟನೂ ಬೇರೆ ಶತ್ರುಗಳೂ ಇದನ್ನು ಕೇಳಿದಾಗ, ಯುದ್ಧ ಮಾಡುವದಕ್ಕೆ ಬಂದರು. ಆಗ ಯೆಹೂದ್ಯರು ಯೆಹೋವನಿಗೆ ಪ್ರಾರ್ಥನೆ ಮಾಡಿ, ರಾತ್ರಿ ಹಗಲು ಕಾವಲಿಟ್ಟರು. ಕಟ್ಟುವವರು ಒಬ್ಬೊಬ್ಬರು ಒಂದು ಕೈಯಲ್ಲಿ ಕೆಲಸ

ವನ್ನು ನಡಿಸಿ, ಮತ್ತೊಂದು ಕೈಯಲ್ಲಿ ಆಯುಧವನ್ನು ಹಿಡು ಕೊಂಡಿದ್ದರು. ಗೋಡೆಗಳನ್ನು ಕಟ್ಟಿದ ಮೇಲೆ ಜನವೆಲ್ಲಾ ಏಕವಾಗಿ ಕೂಡಿ ಕೊಂಡಿದ್ದರು. ಆಗ ಯಾಜಕನಾದ ಎಜ್ರನು ನ್ಯಾಯಪ್ರಮಾಣದ ಪುಸ್ತಕವನ್ನು ತಕ್ಕೊಂಡು ಬಂದು, ಎಲ್ಲರ ಮುಂದೆಯೂ ಬೆಳಗಿನಿಂದ ಮಧ್ಯಾಹ್ನದ ಪರಿಯಂತರ ಓದಿದನು. ಮತ್ತು ಸಭೆಯೆಲ್ಲಾ ದೇವರ ನ್ಯಾಯಪ್ರಮಾಣದಲ್ಲಿ ನಡೆದು ಕೊಳ್ಳುವದಕ್ಕೆ ಒಡಂಬಡಿಕೆಯನ್ನು ಮಾಡಿ ಕೊಂಡರು.

೪) ಯೆರೂಸಲೇಮಿಗೆ ತಿರಿಗಿ ಬಂದವರೊಳಗೆ ಕಡೇ ಪ್ರವಾದಿಗಳಾದ ಹಗ್ಗಾಯನೂ ಜೆಕರೀಯನೂ ಮಲಕೀಯನೂ ಪ್ರವಾದಿಸಿದರು. ಪ್ರವಾದಿಯಾದ ಹಗ್ಗಾಯನು ದೇವಾಲಯವನ್ನು ಚುರುಕಿನಿಂದ ಕಟ್ಟಸಲಿಕ್ಕೆ ಜನರನ್ನು ಧೈರ್ಯ ಪಡಿಸಿ, ಅವರನ್ನು ಸಂತೈಸಿ, ಯೆಹೋವನ ಮಾತನ್ನು ಹೇಳಿದ್ದೇನಂದರೆ:—ಕೊಂಚ ಕಾಲವಾದ ಮೇಲೆ, ನಾನು ಎಲ್ಲಾ ಜನಾಂಗಗಳನ್ನು ಆದರಿಸುತ್ತೇನೆ; ಮತ್ತು ಎಲ್ಲಾ ಜನಾಂಗಗಳ ಅಪೇಕ್ಷೆ ಬರುವದು; ಮತ್ತು ಈ ಕಡೇ ಮನೆಯ ಮಹಿಮೆಯು ಮೊದಲನೇದಕ್ಕಿಂತ ದೊಡ್ಡದಾಗಿರುವದು. (ಹಗ್ಗಾ. ೨, ೭—೧೦.) ಪ್ರವಾದಿಯಾದ ಜೆಕರೀಯನು ರಕ್ಷಕನಾದ ಕ್ರಿಸ್ತನ ವಿಷಯವಾಗಿ ಪ್ರವಾದನೆ ಹೇಳಿದ್ದು, ಹ್ಯಾಗಂದರೆ: ಚಿಯೋನಿನ ಕುಮಾರ್ತೆಯೇ! ಬಹಳವಾಗಿ ಉಲ್ಲಾಸ ಪಡು; ಯೆರೂಸಲೇಮಿನ ಕುಮಾರ್ತೆಯೇ! ಆರ್ಭಟಿಸು; ಇಗೋ, ನಿನ್ನ ಅರಸನು ನಿನ್ನ ಬಳಿಗೆ ಬರುತ್ತಾನೆ; ಅವನು ನೀತಿವಂತನೂ, ರಕ್ಷಿಸುವವನೂ; ದೀನನಾಗಿಯೂ, ಕತ್ತೆಯ ಮೇಲೆ, ಕತ್ತೆಯ ಮರಿಯ ಮೇಲೆ ಹತ್ತಿದವನಾಗಿಯೂ ಇದ್ದಾನೆ. (ಜೆಕ. ೯,೯.) ಆಗ ನಾನು ದಾವೀದನ ಮನೆಯವರ ಮೇಲೆಯೂ ಯೆರೂಸಲೇಮಿನ ನಿವಾಸಿಗಳ ಮೇಲೆಯೂ ಕೃಪೆಯ ಆತ್ಮವನ್ನೂ ಬಿನ್ನಹಗಳ ಆತ್ಮವನ್ನೂ ಹೊಯ್ಯುವೆನು; ಅವರು ತಿವಿದ ನನ್ನ ಮೇಲೆ ಕಣ್ಣಿಡುವರು. (ಜೆಕ. ೧೨, ೧೦.) ಪ್ರವಾದಿಯಾದ ಮಲಕೀಯನು ಮೆಸ್ಸೀಯನು ಬರುವದನ್ನು

ಕುರಿತು ಪ್ರವಾದಿಸಿ, ಹೇಳಿದ್ದೇನಂದರೆ:—ಇಗೋ, ನನ್ನ ದೂತನನ್ನು ಕಳುಹಿಸುತ್ತೇನೆ; ಅವನು ನನ್ನ ಮುಂದೆ ಮಾರ್ಗವನ್ನು ಸಿದ್ಧ ಮಾಡುವನು; ಮತ್ತು ನೀವು ಹುಡುಕುವ ಕರ್ತನು ಫಕ್ಕನೇ ತನ್ನ ದೇವಾಲಯಕ್ಕೆ ಬರುವನು; ನೀವು ಸಂತೋಷ ಪಡುವ ಒಡಂಬಡಿಕೆಯ ದೂತನೇ ಬರುತ್ತಾನೆಂದು, ಸೈನ್ಯಗಳ ಯೆಹೋವನು ಹೇಳುತ್ತಾನೆ. (ಮಲ. ೩, ೧.)

೫) ಹಳೇ ಒಡಂಬಡಿಕೆಯ ಪುಸ್ತಕಗಳ ಲೆಖ್ಖವು ಮೂವತ್ತೊಂದು. ಈ ಪುಸ್ತಕಗಳೆಲ್ಲಾದರ ವಿಷಯವಾಗಿ ಯೇಸು ಯೆಹೂದ್ಯರಿಗೆ ಹೇಳಿದ್ದು: ಬರಹಗಳನ್ನು ಶೋಧಿಸಿರಿ; ಯಾಕಂದರೆ ಅವುಗಳಲ್ಲಿ ನಿತ್ಯಜೀವ ನಿಮುಗುಂಟೆಂದು ನೆನಸುತ್ತೀರಿ; ಮತ್ತು ಅವೇ ನನ್ನನ್ನು ಕುರಿತು ಸಾಕ್ಷಿ ಕೊಡುತ್ತವೆ. (ಯೋಹಾ. ೫, ೩೯.) ಮತ್ತು ಅಪೊಸ್ತಲನಾದ ಪೌಲನು ತಿಮೊಥೆಯನಿಗೆ ಬರದದ್ದೇನಂದರೆ:—ಕ್ರಿಸ್ತ ಯೇಸುವಿನಲ್ಲಿರುವ ವಿಶ್ವಾಸದಿಂದ ರಕ್ಷಣೆಗಾಗಿ ನಿನಗೆ ಜ್ಞಾನವನ್ನು ಕೊಡ ಶಕ್ತವಾದ ಪರಿಶುದ್ಧ ಬರಹಗಳನ್ನು ಚಿಕ್ಕಂದಿನಿಂದ ಅರಿತಿದ್ಧೀ ಎಂದು, ನಿನಗೆ ತಿಳಿಯುತ್ತದಲ್ಲಾ? ಬರಹವೆಲ್ಲಾ ದೈವಪ್ರೇರಿತವಾದದ್ದು; ಬೋಧನೆಗೂ, ಖಂಡನೆಗೂ, ತಿದ್ದುಪಾಟಿಗೂ, ನೀತಿಯ ಉಪದೇಶಕ್ಕೂ, ದೇವರ ಮನುಷ್ಯನು ಎಲ್ಲಾ ಸತ್ಕ್ರಿಯೆಗಳಿಗೆ ಸಿದ್ಧನಾಗಿ, ಆಯತ್ತನಾಗುವದಕ್ಕೂ ಪ್ರಯೋಜನವಾಗಿದೆ. (೨ತಿಮೊ. ೩, ೧೫—೧೭.) III. 49. I. 43.

---

## ಹಳೆ ಒಡಂಬಡಿಕೆಯ ಕಾಲದ ಕಥೆಯ ಪುರವಣಿ.

ದಾನಿಯೇಲನು ಮುಂತಿಳಿಸಿದ ಪ್ರಕಾರ ದೇವಾಲಯವು ಹೊಸದಾಗಿ ಕಟ್ಟಿಸಲ್ಪಟ್ಟ ಸಮಯವು ಮೊದಲ್ಗೊಂಡು ಯೇಸು ಕ್ರಿಸ್ತನು ಹುಟ್ಟುವ ಪರಿಯಂತರ ನಾನೂರ ಎಂಭತ್ತ ಮೂರು ವರ್ಷಗಳಾಗಿದ್ದವು. ಈ ಕಾಲದಲ್ಲಿ ಸಹ ಯೆಹೂದ್ಯರಿಗೆ ಆಶ್ಚರ್ಯವಾದ ಸುಖ

ದುಃಖಗಳು ಬಂದವು. ಮೊದಲು ಅವರು ಕೋರೇಷ್ ಮೊದಲಾದ ಪಾರ್ಶಿಯ ರಾಜ್ಯದೊಳಗೆ ಇದ್ದರು. ತರುವಾಯ ಮಕೆದೋನ್ಯನಾದ ಅಲೆಕ್ಸಂದರನು ಪಾರ್ಶಿಯರ ರಾಜ್ಯವನ್ನು ತನಗೆ ವಶ ಮಾಡಿ ಕೊಂಡ ಮೇಲೆ, ಯೆಹೂದ್ಯರು ಅವನಿಗೆ ವಶವಾದರು. (ಕ್ರಿಸ್ತನ ಮುಂಚೆ ೩೩೨.) ಅಲೆಕ್ಸಂದರನು ಯೆಹೂದ್ಯರ ದೇಶಕ್ಕೆ ಬಂದು, ಒಬ್ಬನಾದ ದೇವರ ಮಂದಿರಕ್ಕೂ ಯಾಜಕರಿಗೂ ಬಹಳ ಮಾನ ಮಾಡಿ, ಯೆಹೂದ್ಯರಿಗೆ ಬಹಳ ಉಪಕಾರ ತೋರಿಸಿ, ತನ್ನ ಸೈನ್ಯಾಧಿಪತಿಗಳಿಗೆ ಆಶ್ಚರ್ಯವನ್ನೆಬ್ಬಿಸಿದನು. ಅವನು ತೀರಿ ಹೋದ ಮೇಲೆ, ಅವನ ಸೈನ್ಯಾಧಿಪತಿಗಳಲ್ಲಿ ಒಬ್ಬನಾದ ಪ್ತೊಲೆಮಾಯನು ಮಿಚ್ರ ದೇಶದ ಅರಸನಾಗಿ, ಯೆಹೂದ್ಯ ದೇಶವನ್ನು ತನ್ನ ವಶ ಮಾಡಿ ಕೊಂಡು, ಬಹಳ ಸಾವಿರ ಯೆಹೂದ್ಯರನ್ನು ಕೈಶೆರೆ ಹಿಡಿದು, ತನ್ನ ದೇಶಕ್ಕೆ ವೈದನು. ಅವನು ಸತ್ತು ಹೋದ ಮೇಲೆ, ಅವನ ಮಗನು ಪಟ್ಟವನ್ನು ತೆಗದು ಕೊಂಡು, ಯೆಹೂದ್ಯರ ಮೇಲೆ ಬಹಳ ಪ್ರೀತಿ ಇಟ್ಟು, ದೊಡ್ಡ ವೆಚ್ಚ ಮಾಡಿ, ಪರಿಶುದ್ಧ ಬರಹದ ಗ್ರೇಕ ಭಾಷಾಂತರವನ್ನು ಮಾಡಿಸಿದನು.

ಯೆಹೂದ್ಯರು ನೂರಕ್ಕಿಂತ ಹೆಚ್ಚು ವರ್ಷಗಳು ಮಿಚ್ರದ ಅರಸುಗಳಿಗೆ ಸ್ವಾಧೀನವಾಗಿದ್ದ ಮೇಲೆ, ಅಂತಿಯೊಖನೆಂಬ ಸುರ್ಯ ದೇಶದ ಅರಸನಿಗೆ ವಶವಾದರು. ಈ ಅರಸನು ಅನೇಕ ಸಾವಿರ ಯೆಹೂದ್ಯರನ್ನು ಭಯದಿಂದಲೂ ಸ್ನೇಹದಿಂದಲೂ ಕೆಡಿಸಿ, ವಿಗ್ರಹಾರಾಧನೆಯಲ್ಲಿ ಶೇರಿಸಿದನು. ಆದಾಗ್ಯೂ ಬಹಳ ಜನರು ಬರುವ ಲೋಕದಲ್ಲಿ ಪುನರುತ್ಥಾನವು ಆಗುವದೆಂಬ ದೇವರ ವಾಕ್ಯವನ್ನು ಕೈಕೊಂಡು, ಅಘೋರ ಶ್ರಮೆಗಳನ್ನು ತಾಳಿ, ಸತ್ತು ಹೋದರು.

ಆ ಕಾಲದಲ್ಲಿ ಘನವುಳ್ಳ ಶೂರರಾದ ಮಕ್ಕಬಾಯರ ವಂಶವು ಪ್ರಖ್ಯಾತವಾದ ಕೀರ್ತಿಯನ್ನು ಹೊಂದಿತು. ಇವರು ತಮ್ಮ ದೇಶವನ್ನು ಪರದೇಶಸ್ಥರ ಕೈಯಿಂದ ಬಿಡುಗಡೆ ಮಾಡುವ ಪ್ರಯತ್ನದಲ್ಲಿ ಒಂಟಿಗರಾಗಿ ನಿಲ್ಲ ಕೂಡದೆ ಇದ್ದದರಿಂದ, ರೋಮಾಯರ ಸಂಗಡ

ಒಡಂಬಡಿಕೆ ಕಟ್ಟಿದರು. ರೋವಿರಾಯರು ತದನಂತರ ಉಪಾಯವನ್ನು ಕಂಡು, ಯೆಹೂದ್ಯರ ದೇಶವನ್ನು ತಮ್ಮ ವಶ ಮಾಡಿ, ಅದರಲ್ಲಿ ಸುಭೆದಾರರನ್ನು ಇಟ್ಟರು. ಕಡೇಲಿ ಎದೋಮ್ಯನಾದ ಹೆರೋದನು ರೋವಿರಾಯರ ಅಧಿಕಾರದೊಳಗೆ ಛಾಯ ರಾಜನಾಗಿ ದೇಶವನ್ನು ಆಳಿ ಕೊಂಡನು. ಇವನು ಬಹಳ ಯುಕ್ತಿಯೂ ಧೈರ್ಯವೂ ಶೂರತ್ವವೂ ಉಳ್ಳವನಾಗಿಯೂ ರಕ್ತಪ್ರಿಯನಾಗಿಯೂ ಇದ್ದನು.

ಆ ಕಾಲದಲ್ಲಿ ಬಡ ಮನಸುಗಳನ್ನು ದಿವ್ಯ ಸಮಾಧಾನದಿಂದ ಎಬ್ಬಿಸುವದಕ್ಕೆ ಮಲಕೀಯನ ಮೇಲೆ ಮತ್ತೊಬ್ಬ ಪ್ರವಾದಿ ಪ್ರತ್ಯಕ್ಷವಾಗಲಿಲ್ಲದದರಿಂದ, ಯೆಹೂದ್ಯರು ಕರ್ತನ ಅಭಿಷಿಕ್ತನಾದ ಆ ಮುಂತಿಳಿಸಲ್ಪಟ್ಟ ದಾವೀದನ ವಂಶಸ್ಥನು ಬಂದು, ದಾವೀದನ ಸಿಂಹಾಸನವನ್ನು ತಿರಿಗಿ ಸ್ಥಾಪಿಸಿ, ರೋವಿರಾಯರನ್ನು ದೇಶದಿಂದ ಹೊರಡಿಸುವನೆಂದು ಬಹಳವಾಗಿ ನಿರೀಕ್ಷಿಸುತ್ತಿದ್ದರು. ಆದಾಗ್ಯೂ ದೇವರ ವಾಗ್ದತ್ತಕ್ಕೆ ಬೇರೆ ಅಭಿಪ್ರಾಯ ಇದ್ಧೀತೆಂಬದನ್ನು ತಿಳು ಕೊಳ್ಳಬೇಕಾಗಿತ್ತು. ಕರ್ತನಾದ ದೇವರು ಯೆಶಾಯನ ಮುಖಾಂತರವಾಗಿ: ನನ್ನ ಆಲೋಚನೆಗಳು ನಿಮ್ಮ ಆಲೋಚನೆಗಳ ಪ್ರಕಾರವಲ್ಲ; ನಿಮ್ಮ ಮಾರ್ಗಗಳು ನನ್ನ ಮಾರ್ಗಗಳ ಪ್ರಕಾರವಲ್ಲ; ಭೂಮಿಗಿಂತ ಪರಲೋಕವು ಎಷ್ಟು ಉನ್ನತವಾಗಿದೆಯೋ, ನಿಮ್ಮ ಮಾರ್ಗಗಳಿಗಿಂತ ನನ್ನ ಮಾರ್ಗಗಳೂ, ನಿಮ್ಮ ಆಲೋಚನೆಗಳಿಗಿಂತ ನನ್ನ ಆಲೋಚನೆಗಳೂ ಅಷ್ಟು ಉನ್ನತವಾಗಿವೆ ಎಂದು ನುಡಿದ ವಾಕ್ಯದ ಪ್ರಕಾರವೇ ಆಯಿತು.



# ಮಹಾ ಹೆರೋದನ ವಂಶಾವಳಿಯು.

ಹೆರೋದನು ಕ್ರಿಸ್ತನ ಜನ್ಮದ ಮುಂಚೆ ೪೦ನೇ ವರುಷದಲ್ಲಿ ಅರಸನಾಗಿ, ಕ್ರಿಸ್ತನ ಜನ್ಮದ ಮೇಲೆ ೧ನೇ ವರುಷದಲ್ಲಿ ಸತ್ತನು. (ಮತ್ತಾ. ೨,೧—೧೮.) ಅವನ ಹತ್ತು ಮಂದಿ ಹೆಂಡರಲ್ಲಿ ಮುಖ್ಯವಾದವರೂ ಅವರ ಮಕ್ಕಳೂ ಯಾರಂದರೆ:—



[Chr. Gottl. Barth]

# BIBLE STORIES

## IN CANARESE

## Old Testament

ದೇವವಾಕ್ಯದ ದ್ವಿಪಂಚಾಶತ್

# ಪೂರ್ವನಿರ್ಧಾರ



MANGALORE
PRINTED BY STOLZ & REUTHER, BASEL MISSION PRESS
1868

